# ಬ್ರಿಟಿಷ್ ಸಾಮ್ರಾಜ್ಯಶಾಹಿ ವಿರುದ್ಧ ಮುಂಡರಗಿ ಹೋರಾಟ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಚರಿತ್ರೆ ವಿಭಾಗಕ್ಕೆ
ಎಂ.ಫಿಲ್ ಪದವಿಗಾಗಿ ಸಲ್ಲಿಸಿದ ನಿಬಂಧ)


ಸಂಶೋಧಕ

ಸಂತೋಷ ಕುಮಾರ್. ಹೆಚ್. ಬಿ.

ಮಾರ್ಗದರ್ಶಕರು

ಡಾ. ಕೆ. ಮೋಹನ್‌ಕೃಷ್ಣ ರೈ
ಹಿರಿಯ ಶ್ರೇಣಿ ಅಧ್ಯಾಪಕರು
ಚರಿತ್ರ ವಿಭಾಗ





ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೮

# ಬ್ರಿಟಿಷ್ ಸಾಮ್ರಾಜ್ಯಶಾಹಿ ವಿರುದ್ಧ ಮುಂಡರಗಿ ಹೋರಾಟ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಚರಿತ್ರೆ ವಿಭಾಗಕ್ಕೆ
ಎಂ.ಫಿಲ್ ಪದವಿಗಾಗಿ ಸಲ್ಲಿಸಿದ ನಿಬಂಧ)

ಸಂಶೋಧಕ
**ಸಂತೋಷ ಕುಮಾರ್.ಹೆಚ್.ಬಿ.**



ಮಾರ್ಗದರ್ಶಕರು
**ಡಾ. ಕೆ. ಮೋಹನ್‌ಕೃಷ್ಣ ರೈ**
ಹಿರಿಯ ಶ್ರೇಣಿ ಅಧ್ಯಾಪಕರು
ಚರಿತ್ರೆ ವಿಭಾಗ





ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೮

# ಪ್ರಮಾಣ ಪತ್ರ

ಬ್ರಿಟಿಷ್ ಸಾಮ್ರಾಜ್ಯಶಾಹಿ ವಿರುದ್ಧ ಮುಂಡರಗಿ ಹೋರಾಟ ಎಂಬ ನಿಬಂಧವನ್ನು **ಡಾ. ಕೆ. ಮೋಹನ್‌ಕೃಷ್ಣ ರೈ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್ ಪದವಿಗಾಗಿ ಸಮಾಜ ವಿಜ್ಞಾನಗಳ ನಿಕಾಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Santhoshkr

**ಸ್ಥಳ** : ವಿದ್ಯಾರಣ್ಯ

**ದಿನಾಂಕ** : ೨೨. ೮. ೨೦೦೮

**ಸಂತೋಷ ಕುಮಾರ್.ಹೆಚ್.ಬಿ.**
ಸಂಶೋಧಕ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಮಾರ್ಗದರ್ಶಕರ ಪ್ರಮಾಣ ಪತ್ರ

ಬ್ರಿಟಿಷ್ ಸಾಮ್ರಾಜ್ಯಶಾಹಿ ವಿರುದ್ಧ ಮುಂಡರಗಿ ಹೋರಾಟ ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯ, ಹಂಪಿ, ಚರಿತ್ರೆ ವಿಭಾಗಕ್ಕೆ ಎಂ.ಫಿಲ್ ಪದವಿಗಾಗಿ **ಸಂತೋಷ ಕುಮಾರ.ಹೆಚ್.ಬಿ.** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : ೧೭.೦೯.೦೮

**ಡಾ. ಕೆ. ಮೋಹನ್‌ಕೃಷ್ಣ ರೈ**
ಮಾರ್ಗದರ್ಶಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪರಿವಿಡಿ

# ೧೮೫೭ರಲ್ಲಿ ಹೋರಾಟ ನಡೆದ ಪ್ರಮುಖ ಪ್ರದೇಶಗಳು




ಮೂಲ : ಕೃಷ್ಣರಾವ್ ಎಂ.ವಿ. ಹಾಲಪ್ಪ ಜಿ.ಎಸ್., ಹಿಸ್ಟರಿ ಆಫ್ ದಿ ಫ್ರೀಡಂ ಮೂವ್‌ಮೆಂಟ್ ಇನ್ ಕರ್ನಾಟಕ, ದಿ ಗೌವರ್ನಮೆಂಟ್ ಆಫ್ ಮೈಸೂರು, ೧೯೬೨, ಪು. ೭೨

# ಮುಂಡರಗಿ ತಾಲೂಕು




ಮೂಲ : ತಾಲೂಕು ಕಚೇರಿ, ಮುಂಡರಗಿ

## ಅಧ್ಯಾಯ ೧

# ಪ್ರಸ್ತಾವನೆ, ಉದ್ದೇಶ, ವ್ಯಾಪ್ತಿ

### ಪ್ರಸ್ತಾವನೆ

ಭಾರತಕ್ಕೆ ಯುರೋಪಿಯನ್ನರ ಆಗಮನವು, ಭಾರತದ ಇತಿಹಾಸದ ಪ್ರಮುಖ ಘಟ್ಟವಾಗಿದ್ದು, ಇವರ ಆಗಮನದೊಂದಿಗೆ, ಭಾರತದ ಇತಿಹಾಸವು ಪ್ರಮುಖ ತಿರುವನ್ನು ಪಡೆದುದಲ್ಲದೇ, ಈ ಕಾಲಘಟ್ಟದಿಂದ ಭಾರತದ ಇತಿಹಾಸವನ್ನು, ಆಧುನಿಕ ಭಾರತದ ಇತಿಹಾಸ ಎಂದು ಗುರುತಿಸುವಷ್ಟರಮಟ್ಟಿಗೆ ಪ್ರಭಾವವನ್ನು ಬೀರಿದೆ. ಭಾರತಕ್ಕೆ ಆಗಮಿಸಿದ ಯುರೋಪಿಯನ್ನರಲ್ಲಿ, ಬ್ರಿಟಿಷರು ಇತರರಿಗೆ ಪ್ರಬಲ ಪೈಪೋಟಿ ಒಡ್ಡಿ ಭಾರತದಲ್ಲಿ ತಮ್ಮ ಏಕಸ್ವಾಮಿತ್ವವನ್ನು ಸ್ಥಾಪಿಸುವಲ್ಲಿ, ಯಶಸ್ವಿಯಾದರು. ಆರಂಭದಲ್ಲಿ ಕೇವಲ ವ್ಯಾಪಾರದ ದೃಷ್ಟಿ ಹೊಂದಿದ್ದ ಬ್ರಿಟಿಷರು ಆಗ ಭಾರತದಲ್ಲಿದ್ದ ರಾಜಕೀಯ ಅನೈಕ್ಯತೆ ಮತ್ತು ಇತರ ಅವ್ಯವಸ್ಥೆಗಳ ಹಾಗೂ ಪರಿಸ್ಥಿತಿಗಳ ಲಾಭ ಪಡೆದು, ಭಾರತವನ್ನು ತಮ್ಮ ವಸಾಹತುವನ್ನಾಗಿ ಮಾರ್ಪಡಿಸಿಕೊಳ್ಳುವಲ್ಲಿ ಯಶಸ್ವಿಯಾದರು. ಕ್ರಮೇಣ ತಮ್ಮದೇ ಆದ ವಸಾಹತು ನೀತಿಗಳಿಂದ ಭಾರತದಲ್ಲಿ ರಾಜಕೀಯ ಪ್ರಭುತ್ವವನ್ನು ಸ್ಥಾಪಿಸಿ, ಸಾಮ್ರಾಜ್ಯಶಾಹಿಗಳಾಗಿ ರೂಪುಗೊಂಡರು. ಈ ಸಾಮ್ರಾಜ್ಯಶಾಹಿ ನೀತಿಯಿಂದ ಭಾರತವು ಬ್ರಿಟಿಷ್ ಭಾರತವಾಗಿ ಪರವರ್ತನೆಗೊಂಡಿತು.

ಬ್ರಿಟಿಷ್ ಸಾಮ್ರಾಜ್ಯಶಾಹಿ ನೀತಿಯಿಂದ ದಬ್ಬಾಳಿಕೆ, ದೌರ್ಜನ್ಯ, ಶೋಷಣೆಗೆ ಒಳಗಾದ ಭಾರತೀಯರು ಬ್ರಿಟಿಷರ ಈ ನೀತಿಗಳ ವಿರುದ್ಧ ಪ್ರತಿರೋಧ ಮನೋಭಾವ ತಾಳಿ, ಪರಕೀಯರ ದಾಸ್ಯದಿಂದ ದೇಶವನ್ನು ಬಿಡುಗಡೆಗೊಳಿಸುವ ನಿಟ್ಟಿನಲ್ಲಿ ಹೋರಾಟಗಳು ಆರಂಭಗೊಂಡವು. ಸಾಮ್ರಾಜ್ಯಶಾಹಿಗಳ ವಿರುದ್ಧ ಭಾರತದಲ್ಲಿ ನಡೆದ ಮೊದಲ ಮತ್ತು ಅತ್ಯಂತ ಪ್ರಮುಖ ಹೋರಾಟವೆಂದರೆ '೧೮೫೭ರ ದಂಗೆ' ಅಥವಾ 'ಪ್ರಥಮ ಸ್ವಾತಂತ್ರ್ಯ ಸಂಗ್ರಾಮ'. ಈ ಸಂಗ್ರಾಮವು ಬ್ರಿಟಿಷರ ವಿರುದ್ಧದ ಹೋರಾಟದಲ್ಲಿ ಭಾರತ ಇತಿಹಾಸದ ಪ್ರಮುಖ ಘಟ್ಟ ಮತ್ತು ತಿರುವಾಗಿದೆ.

ಪ್ರಥಮ ಸಶಸ್ತ್ರಸಜ್ಜಿತ ಹೋರಾಟವೆಂದು ಕರೆಯಲ್ಪಡುವ ೧೮೫೭ರ ಬಂಡಾಯಕ್ಕೆ, ಈಗಾಗಲೇ ಬ್ರಿಟಿಷರು ಜಾರಿಗೊಳಿಸಿದ ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ ಮತ್ತು ಸೈನಿಕ ನೀತಿಗಳಿಂದಾಗಿ, ಆಪತ್ತು ಎದುರಿಸಬೇಕಾಗಿ ಬಂದ ಆಳರಸರು, ಸಂಸ್ಥಾನಿಕರು ರೈತರು, ಜಮೀನುದಾರರು ಹಾಗೂ ಸೈನಿಕರು, ಬ್ರಿಟಿಷರ ವಿರುದ್ಧ ಅಸಮಾಧಾನ ಹೊಂದಿ, ಪ್ರತಿಭಟನೆ ಮತ್ತು ಬಂಡಾಯದ ಮನೋಭಾವನೆಯನ್ನು

ಬೆಳೆಸಿಕೊಂಡಿದ್ದರು. ಇಂತಹ ಸಮಯದಲ್ಲಿ, ಸಿಪಾಯಿಗಳು ಬಳಸುವ ಬಂದೂಕಿನ ತೋಟಾಗಳಿಗೆ ಕೊಬ್ಬು ಸವರಿದ ಅಂಶವೇ ತತ್‌ಕ್ಷಣದ ಕಾರಣವಾಗಿ ಪರಿಣಮಿಸಿ, ಸಿಪಾಯಿಗಳಿಂದ ಮೊದಲು ಉತ್ತರ ಭಾರತದಲ್ಲಿ ಆರಂಭವಾದ ದಂಗೆಯು ಕ್ರಮೇಣ ದಕ್ಷಿಣ ಭಾರತಕ್ಕೂ ವ್ಯಾಪಿಸಿತು.[೧] ಈ ಹೋರಾಟದ ಜ್ವಾಲೆಯು, ಕ್ರಮೇಣ ಕರ್ನಾಟಕಕ್ಕೂ ವ್ಯಾಪಿಸಿ, ಇಲ್ಲಿ ಅನೇಕ ಸ್ಥಳೀಯ ನಾಯಕರು ಮತ್ತು ನಾಗರಿಕರಿಂದ ಪ್ರತಿಭಟನೆ ಮತ್ತು ಬಂಡಾಯಗಳು ಆರಂಭವಾದವು. ಕರ್ನಾಟಕದಲ್ಲಿ ಈ ೧೮೫೮ರ ಹೋರಾಟದಲ್ಲಿ ಬಂಡಾಯವೆದ್ದ ಪ್ರಮುಖರೆಂದರೆ, ಹಲಗಲಿಯ ಬೇಡರು, ಸುರಪುರದ ವೆಂಕಟಪ್ಪನಾಯಕ, ನರಗುಂದದ ಬಾಬಾಸಾಹೇಬ ಮತ್ತು ಮುಂಡರಗಿಯ ಭೀಮರಾಯರು.[೨]

೧೮೫೮ರ ಹೋರಾಟದಲ್ಲಿ ಮುಂಡರಗಿ ಪರಿಸರದ ಸಂಸ್ಥಾನಿಕರು ಮತ್ತು ಮುಂಡರಗಿ ಭೀಮರಾಯರ ಬಂಡಾಯವು ಕರ್ನಾಟಕದ ಇತಿಹಾಸದಲ್ಲಿ ಐತಿಹಾಸಿಕ ಮಹತ್ವವನ್ನು ಪಡೆದಿದೆ. ಪ್ರಸ್ತುತ ಸಂಶೋಧನಾ ಅಧ್ಯಯನದ ವಿಷಯವು ಮುಂಡರಗಿ ಭೀಮರಾಯರ ಹೋರಾಟದ ಬಗ್ಗೆ ಆಗಿರುವುದರಿಂದ ಹಾಗೂ ಮುಂಡರಗಿ ಭೀಮರಾಯರು ಹುತಾತ್ಮರಾಗಿ, ೧೫೦ ವರ್ಷಗಳು ಪೂರ್ಣಗೊಂಡಿರುವ ಈ ಐತಿಹಾಸಿಕ ಸಂದರ್ಭದಲ್ಲಿ ಅವರ ಜೀವನ, ಹೋರಾಟ, ತ್ಯಾಗ, ಬಲಿದಾನಗಳ ಬಗ್ಗೆ ಇನ್ನೂ ಹೆಚ್ಚಿನ ಮಾಹಿತಿಯನ್ನು ಸಂಗ್ರಹಿಸಿ, ಲಭ್ಯವಿರುವ ಮಾಹಿತಿಗಳ ಆಧಾರಗಳ ಮೇಲೆ ಅವರ ವ್ಯಕ್ತಿತ್ವವನ್ನು ವಿಭಿನ್ನ ದೃಷ್ಟಿಕೋನಗಳಿಂದ ವಿಶ್ಲೇಷಣೆ ಮಾಡುವ ಕಾರ್ಯವನ್ನು ಕೈಗೊಳ್ಳಲಾಗಿದೆ.

ಒಂದು ಇತಿಹಾಸದ ಘಟನೆಯನ್ನು ಅದರಲ್ಲೂ ರಾಷ್ಟ್ರೀಯ ಚಳುವಳಿ, ಸ್ವಾತಂತ್ರ್ಯ ಸಂಗ್ರಾಮ ದಂತಹ ಐತಿಹಾಸಿಕ ಘಟನೆಗಳನ್ನು ಇತಿಹಾಸ ರಚನೆಕಾರರು ಹಾಗೂ ಸಂಶೋಧಕರು, ಆಗಾಗ ಪುನರ್‌ವಿಶ್ಲೇಷಣೆಗೆ ಒಳಪಡಿಸಿ, ಸತ್ಯವನ್ನು ಪ್ರತಿಪಾದಿಸಬೇಕು ಮತ್ತು ಇತಿಹಾಸದಂತಹ ವ್ಯಾಪಕ ಶಾಸ್ತ್ರವನ್ನು ವೈಜ್ಞಾನಿಕ ದೃಷ್ಟಿಕೋನದಿಂದ ಅಧ್ಯಯನ ಮಾಡುವ ಅಗತ್ಯತೆ ಹಾಗೂ ಅನಿವಾರ್ಯತೆ ಇಂದಿನದು. ತಾತ್ವಿಕ ಹಾಗೂ ವ್ಯವಸ್ಥಿತ ತಂತ್ರಗಳ ಮೂಲಕ ನೂತನ ವಾಸ್ತವಾಂಶಗಳನ್ನು ಕಂಡು ಹಿಡಿಯುವುದು ಅಥವಾ ಹಳೆಯ ವಾಸ್ತವಾಂಶಗಳನ್ನು ಪರೀಕ್ಷಿಸುವುದು ಹಾಗೂ ಒಂದು ಯುಕ್ತವಾದ ಪರಾಮರ್ಶಕ ಚೌಕಟ್ಟಿನೊಳಗೆ ಅನುಮಾನಿಸಲಾದ ಅವುಗಳ ಅನುಕ್ರಮ, ಪರಸ್ಪರ ಸಂಬಂಧ ಮತ್ತು ಕಾರ್ಯಕಾರಣ ಸಂಬಂಧಗಳ ವಿವರಣೆಗಳನ್ನು ವಿಶ್ಲೇಷಿಸುವುದು ಆಧುನಿಕ ಅಧ್ಯಯನ ಕ್ರಮ.[೩] ಈ ದೃಷ್ಟಿಯಿಂದ ಪ್ರಸ್ತುತ ಸಂಶೋಧನೆಯು ಚದುರಿದ ದತ್ತಾಂಶಗಳನ್ನು ಕ್ರಮಬದ್ಧಗೊಳಿಸಿ ಮತ್ತು ಕಾಲಮಿತಿಗೆ ಒಳಪಡಿಸಿ, ವೈಜ್ಞಾನಿಕ ವಿಮರ್ಶೆಯಿಂದ ವಾಸ್ತವಿಕತೆಯನ್ನು ತಿಳಿಸುವುದೇ ಪ್ರಮುಖವಾಗಿದೆ. ಸತ್ಯಾನ್ವೇಷಣೆಯೇ ಸಂಶೋಧನೆಯ ನೈಜ ಅರ್ಥವನ್ನು ಹೊಂದಿರುವಾಗ, ಪ್ರಸ್ತುತ ಜೀವನ ವೃತ್ತಾಂತದ ಮತ್ತು ಸಂಗ್ರಾಮ ಪಥದ ಹೆಜ್ಜೆಯ ಜಾಡನ್ನು ಹಿಡಿದು ಐತಿಹಾಸಿಕ ಮಹತ್ವವನ್ನು ದೊರಕಿಸಿಕೊಡುವುದು ಈ ಸಂಶೋಧನೆಯ ಉದ್ದೇಶವಾಗಿದೆ. ಬಹುಸತ್ಯಗಳ ಕಡೆಗೆ ಮುಖ ಮಾಡಿರುವ ಇಂದಿನ ಬದಲಾದ ಅಧ್ಯಯನ ಕ್ರಮವನ್ನು ಅಳವಡಿಸಿ ಕೊಳ್ಳುವುದರ ಮೂಲಕ ಒಂದು ಪ್ರದೇಶದ ಹಾಗೂ ವ್ಯಕ್ತಿಯ ಚರಿತ್ರೆಯನ್ನು ಕಟ್ಟುವ ಪ್ರಯತ್ನ ಈ ಸಂಶೋಧನೆಯದು.

## ಉದ್ದೇಶ

ಸಂಶೋಧನೆಗೆ ಆಯ್ಕೆ ಮಾಡಿಕೊಂಡ ವಿಷಯವು ಐತಿಹಾಸಿಕ, ರಾಜಕೀಯ ಮತ್ತು ವೈಚಾರಿಕತೆಗಳ ದೃಷ್ಟಿಯಿಂದ ಅತೀವ ಮಹತ್ವವನ್ನು ಪಡೆದಿದೆ. ೧೮೫೭ರ ಹೋರಾಟದ ಮಹತ್ತರ ಘಟನೆಗೆ ೧೫೦ ವರ್ಷಗಳು ಪೂರ್ಣಗೊಂಡ ಮತ್ತು ಮುಂಡರಗಿ ಭೀಮರಾಯರು ಹುತಾತ್ಮರಾಗಿ ೩೧ ಜೂನ್ ೨೦೦೮ಕ್ಕೆ ೧೫೦ ವರ್ಷಗಳು ತುಂಬುತ್ತಿರುವ ಈ ಐತಿಹಾಸಿಕ ಸಂದರ್ಭದಲ್ಲಿ ಪ್ರಸ್ತುತ ಅಧ್ಯಯನಕ್ಕೆ ವಿಶೇಷ ಮಹತ್ವ ಕೊಡಲಾಗಿದೆ. ದೇಶೀಯ ಸಂಸ್ಥಾನಗಳಲ್ಲೊಂದಾಗಿದ್ದ, ಮುಂಡರಗಿ ನಾಡಿನ ಭೀಮರಾಯರ ಸೂಕ್ಷ್ಮ ಅಧ್ಯಯನವೇ ಪ್ರಸ್ತುತ ಸಂಶೋಧನೆಯ ಮುಖ್ಯ ಉದ್ದೇಶ ಮತ್ತು ಗುರಿಯಾಗಿದೆ. ಬ್ರಿಟಿಷ್ ಸಾಮ್ರಾಜ್ಯಶಾಹಿ ನೀತಿಯ ವಿರುದ್ಧ ಮುಂಡರಗಿ ಭೀಮರಾಯರ ಹೋರಾಟದ ಹೆಜ್ಜೆಗಳನ್ನು ಗುರುತಿಸಿ ದಾಖಲಿಸುವ ಪ್ರಯತ್ನ ಮಾಡಲಾಗಿದೆ. ಸಾಮಾನ್ಯವಾಗಿ ಬ್ರಿಟಿಷರ ವಿರುದ್ಧದ ಹೋರಾಟಗಳನ್ನು ಪೌರ ಹೋರಾಟ, ಆದಿವಾಸಿಗಳು ಹಾಗೂ ಬುಡಕಟ್ಟು ಜನರ ಹೋರಾಟ ಮತ್ತು ರೈತ ಕಾರ್ಮಿಕರ ಹೋರಾಟವೆಂದು ವಿವಿಧ ಆಯಾಮಗಳಿಂದ ನೋಡುತ್ತೇವೆ. ಈ ಸಂಶೋಧನೆಯಲ್ಲಿ ಮುಂಡರಗಿ ಭೀಮರಾಯರನ್ನು ಪೌರ ಹೋರಾಟದ ಬಗೆಯಲ್ಲಿ ಪರಿಗಣಿಸಲಾಗಿದೆ. ಈ ದೃಷ್ಟಿಯಲ್ಲಿ ಪ್ರಸ್ತುತ ಸಂಶೋಧನಾ ಉದ್ದೇಶ ಒಬ್ಬ ಪೌರನಾಗಿ, ಭೀಮರಾಯರ ಹೋರಾಟದ ಗತಿಯನ್ನು ಅಭ್ಯಸಿಸುವ ಉದ್ದೇಶವನ್ನು ಇಲ್ಲಿ ಹೊಂದಲಾಗಿದೆ.

೧೮೫೭ರ ಘಟನೆಯಲ್ಲಿ ಕರ್ನಾಟಕದ ಜನತೆಯ ಹೋರಾಟ, ತ್ಯಾಗ, ಬಲಿದಾನವನ್ನು ಹೊಸ ಹೊಸ ಮೂಲಾಧಾರಗಳಿಂದ ಪುನರ್‌ರಚಿಸಿ, ಕರ್ನಾಟಕದ ಸ್ವಾತಂತ್ರ್ಯ ಚಳುವಳಿಯ ಇತಿಹಾಸ ಭಂಡಾರಕ್ಕೆ ಹೊಸ ದಾಖಲೆಯನ್ನು ಸೇರಿಸುವ ಪ್ರಯತ್ನ ಮಾಡಲಾಗಿದೆ. ಕರ್ನಾಟಕದಲ್ಲಿ ಮುಂಡರಗಿ ಭೀಮರಾಯರು ಬ್ರಿಟಿಷ್ ಸಾಮ್ರಾಜ್ಯಶಾಹಿಗಳ ವಿರುದ್ಧ ಹೋರಾಡಿದ ಘಟನೆಗಳ ಸಮಗ್ರ ಅಧ್ಯಯನ ಕೈಗೊಂಡು, ಸಮಕಾಲೀನ ಇತಿಹಾಸದಲ್ಲಿ ಅವರ ಸ್ಥಾನಮಾನವನ್ನು ನಿರ್ಧರಿಸುವ ಪ್ರಯತ್ನ ಮಾಡಲಾಗಿದೆ. ಹಾಗೆಯೇ ಮುಂಡರಗಿ ಭೀಮರಾಯರ ಬಗ್ಗೆ ಅಧ್ಯಯನ ಮಾಡುವಾಗ, ಇಲ್ಲಿ ಯಾವುದೇ ಧರ್ಮ, ವರ್ಗ, ಪಂಗಡಗಳ ಪೂರ್ವಾಗ್ರಹಿತ ಅಭಿಪ್ರಾಯಕ್ಕೆ ಒಳಗಾಗದೇ, ಭೀಮರಾಯರನ್ನು ವೈಭವೀಕರಿಸುವ ಕಾರ್ಯ ಮಾಡದೇ, ಅವರ ಬಗ್ಗೆ ವಸ್ತುನಿಷ್ಠ ಅಧ್ಯಯನ ಮಾಡಲಾಗಿದೆ ಹಾಗೂ ಬ್ರಿಟಿಷ್ ಸಾಮ್ರಾಜ್ಯಶಾಹಿ ನೀತಿಯು ಯಾವ ರೀತಿಯದಾಗಿತ್ತು, ಈ ನೀತಿಯಿಂದ ನೊಂದವರು ಮತ್ತು ಬಲಿಯಾದವರ್ಯಾರು, ಈ ನೀತಿಗೆ ಪ್ರತಿರೋಧ ಒಡ್ಡಿದವರ್ಯಾರು, ಅದೇ ರೀತಿ ಸ್ಥಳೀಯವಾಗಿ ಹೋರಾಟ ರೂಪಿಸಿದ ನಾಯಕರ್ಯಾರು ಎನ್ನುವ ನಿಟ್ಟಿನಲ್ಲಿ ಮುಂಡರಗಿ ಭೀಮರಾಯರ ಹೋರಾಟದ ಸ್ವರೂಪವನ್ನು ಪತ್ತೆ ಹಚ್ಚುವ ಪ್ರಯತ್ನ ಮಾಡಲಾಗಿದೆ.

ಪ್ರಸ್ತುತ ಸಂದರ್ಭದಲ್ಲಿ ೧೮೫೭ರ ಘಟನೆಯು ಒಂದು ದಂಗೆಯೋ, ಪ್ರಥಮ ಸ್ವಾತಂತ್ರ್ಯ ಸಂಗ್ರಾಮವೋ, ಜನಸಾಮಾನ್ಯರ ಹೋರಾಟವೋ ಎಂಬ ಚರ್ಚೆಗೆ ಒಳಪಟ್ಟಿರುವಾಗಲೇ ಈ ಘಟನೆಯ ಬಗ್ಗೆ ಸಮಗ್ರ ಅಧ್ಯಯನ ಕೈಗೊಂಡು, ಪುನರ್‌ವಿಮರ್ಶೆಗೆ ಒಳಪಡಿಸಿ, ನಾನಾ ದೃಷ್ಟಿಕೋನದಿಂದ ಪರಾಮರ್ಶಿಸಿ, ಘಟನೆಯ ಸ್ವರೂಪದ ಬಗ್ಗೆ ಚರ್ಚಿಸಲಾಗಿದೆ. ಭಾರತ ಸ್ವಾತಂತ್ರ್ಯ ಹೋರಾಟಕ್ಕೆ ಪ್ರೇರಣೆ

ನೀಡಿದ ಈ ೧೮೫೭ರ ಹೋರಾಟವನ್ನು ಇತಿಹಾಸಕಾರರು ಅರ್ಥೈಸಿಕೊಂಡಿರುವ ರೀತಿ ಯಾವುದು ಹಾಗೂ ಸ್ವಾತಂತ್ರ್ಯಪೂರ್ವ ಸಂದರ್ಭದಲ್ಲಿ ಚರಿತ್ರೆಕಾರರ ಧೋರಣೆ ಏನಾಗಿತ್ತು ಮತ್ತು ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ಚರಿತ್ರೆಕಾರರ ಧೋರಣೆ ಏನಾಗಿದೆ ಎನ್ನುವುದರ ಬಗ್ಗೆ ವಿವರವಾಗಿ ವಿಶ್ಲೇಷಣೆ ಮಾಡಲಾಗಿದೆ.

ಸ್ವಾತಂತ್ರ್ಯ ಎಂಬುದು ಭಾರತೀಯರಿಗೆ ಬ್ರಿಟಿಷರು ಉಚಿತವಾಗಿ ನೀಡಿದ ಬಳುವಳಿ ಅಲ್ಲವೆಂಬುದನ್ನು ಮುಂದಿನ ಪೀಳಿಗೆಗೆ ತಿಳಿಸಬೇಕಾಗಿದೆ. ಈ ದೃಷ್ಟಿಯಿಂದ ಸ್ವಾತಂತ್ರ್ಯಕ್ಕಾಗಿ ಹಗಲಿರುಳು ಹೋರಾಡಿ, ತಮ್ಮ ಜೀವನವನ್ನೇ ಬಲಿಗೈದವರ ಸ್ಮರಣೆ ಅವಶ್ಯವಾಗಿದೆ. ಸ್ವಾತಂತ್ರ್ಯ ಗಳಿಸಲು ಬ್ರಿಟಿಷರ ವಿರುದ್ಧ ಹೋರಾಡಿ ಹುತಾತ್ಮರಾದವರ ಸಮಗ್ರವಾದ ಅಧ್ಯಯನವು ಸ್ವಾತಂತ್ರ್ಯ ಗಳಿಸಿ ಅನೇಕ ವರ್ಷಗಳಾದರೂ ಕ್ರಮಬದ್ಧವಾಗಿ, ಸ್ಥಳೀಯವಾಗಿ ನಡೆದಿರುವುದಿಲ್ಲ. ೧೮೫೭ರ ಹೋರಾಟಕ್ಕೆ ೧೫೦ ವರ್ಷಗಳು ಪೂರ್ಣಗೊಂಡ ಈ ಘಟ್ಟದಲ್ಲಿ ಈ ಘಟನೆ ಬಗ್ಗೆ ಮತ್ತಷ್ಟು ಅಧ್ಯಯನ ಮಾಡುವುದು ಅವಶ್ಯಕತೆ ಇದೆ ಎಂದೆನಿಸುತ್ತದೆ. ಈ ದೃಷ್ಟಿಯಿಂದ ದೇಶೀಯ ಸಂಸ್ಥಾನಗಳಲ್ಲಿ ಸಾಮ್ರಾಜ್ಯಶಾಹಿ ವಿರುದ್ಧ ಸಿಡಿದೆದ್ದ ಭೀಮರಾಯರ ಹೋರಾಟದ ವಿವಿಧ ಮುಖಗಳನ್ನು ಪರಿಚಯಿಸುವುದಕ್ಕೆ ಪ್ರಾಮುಖ್ಯತೆ ಕೊಡಲಾಗಿದೆ.

ಆದರೆ ರಾಷ್ಟ್ರೀಯ ಅಂಜೆಂಡಾವನ್ನು ಹೊಂದಿದ್ದ ಪ್ರಸ್ತುತ ಅಧ್ಯಯನವು ರಾಷ್ಟ್ರೀಯ ಮಟ್ಟದಲ್ಲಿ ಹೆಚ್ಚು ಚರ್ಚೆಯಾಗದ, ಸ್ಥಳೀಯವಾದ ಒಂದು ಹೋರಾಟದ ವಿಷಯವನ್ನು ಒಳಗೊಂಡಿದ್ದು, ಚರಿತ್ರೆಯನ್ನು ಅಲಕ್ಷಿತ ನೆಲೆಯಿಂದ ಅಧ್ಯಯನ ನಡೆಸುವ ಸಬಾಲ್ಟರ್ನ್ ಅಧ್ಯಯನ ಕ್ರಮದ ಹಾಗೂ ಮೌಖಿಕ ಆಕರಗಳ ನೆರವಿನಿಂದ ವಾಸ್ತವಾಂಶಗಳನ್ನು ಪತ್ತೆ ಹಚ್ಚುವ ಹಾಗೂ ವಿಶ್ಲೇಷಣೆಗೆ ಒಳಪಡಿಸುವ ಉದ್ದೇಶ ವನ್ನು ಹೊಂದಿದೆ. ೧೮೫೭ರ ಹೋರಾಟ ರಾಷ್ಟ್ರೀಯ ವಿಚಾರವಾದರೂ ಅದು ಕೇವಲ ಉತ್ತರ ಭಾರತದಲ್ಲಿ ನಡೆದ ಘಟನೆಗಳಿಗಷ್ಟೇ ಹೆಚ್ಚು ಸೀಮಿತವಾಗಿದೆ. ಆದರೆ ಅದೇ ಸಂದರ್ಭದಲ್ಲಿ ದಕ್ಷಿಣ ಭಾರತದಲ್ಲಿ ನಡೆದ ಅದೆಷ್ಟೋ ಹೋರಾಟಗಳು ಅಲಕ್ಷಿತವಾಗಿಯೇ ಉಳಿದಿವೆ. ಸ್ಥಳೀಯ ಚರಿತ್ರೆ, ಮೌಖಿಕ ಚರಿತ್ರೆ, ಕೆಳಸ್ತರದ ಅಧ್ಯಯನ ಮುಂತಾದ ಸ್ಥಳೀಯ ನೆಲೆಯಿಂದ ವಿಶ್ವಾತ್ಮಕತೆಯೆಡೆಗೆ ನೋಡುವ ಅಧ್ಯಯನ ಮಾದರಿಗಳು ಹೆಚ್ಚು ಪ್ರಚಾರಗೊಂಡ ಮೇಲೆ ಅನೇಕ ಸ್ಥಳೀಯ ಹೋರಾಟಗಳು ಹಾಗೂ ಪ್ರತಿಭಟನೆಗಳು ಚರಿತ್ರೆಯಲ್ಲಿ ದಾಖಲಾಗುವಂತಾಯಿತು. ಮುಂಡರಗಿಯ ಭೀಮರಾಯರ ಹೋರಾಟದ ಅಧ್ಯಯನವೂ ಈ ವಿಧಾನವನ್ನು ಅನುಸರಿಸಿದೆ.

### ಅಧ್ಯಾಯಗಳು

ಸಂಶೋಧನೆಗೆ ಆಯ್ಕೆ ಮಾಡಿಕೊಂಡಿರುವ ವಿಷಯವು ಬಹುಮುಖ ದೃಷ್ಟಿಕೋನಗಳನ್ನು ಹೊಂದಿದ್ದು, ಹಲವಾರು ಚಿಂತನೆಗಳಿಗೆ, ವಿಮರ್ಶೆಗಳಿಗೆ ದಾರಿ ಮಾಡಿಕೊಟ್ಟಿದೆ ಹಾಗೂ ಪ್ರಸ್ತುತ ಸಮಯದಲ್ಲಿ ಚರ್ಚೆಗೆ ಒಳಗಾಗಿರುವ ವಿಷಯವೂ ಆಗಿದೆ. ಸಂಶೋಧನೆಯ ಸಮಗ್ರ ಸಾರವನ್ನು ಏಳು ಅಧ್ಯಾಯಗಳಲ್ಲಿ ಕ್ರಮಬದ್ಧವಾಗಿ, ವಸ್ತುನಿಷ್ಠವಾಗಿ ಮತ್ತು ಗುಣಾತ್ಮಕತೆಯಿಂದ ದಾಖಲಿಸುವ ಪ್ರಯತ್ನ ಮಾಡಲಾಗಿದೆ. ಇತಿಹಾಸದ ಸಂಶೋಧನೆಯು ಮೂಲಾಧಾರಗಳನ್ನು ಆಧರಿಸಿದ ಜ್ಞಾನವಾಗಿರುವುದರಿಂದ, ಲಭ್ಯ ಮಾಹಿತಿಗಳನ್ನು ಆಧರಿಸಿ ಬರೆಯಲಾಗಿದೆ.

ಮೊದಲನೇ ಅಧ್ಯಾಯದಲ್ಲಿ, ಸಂಶೋಧನೆಯ ಅರ್ಥ, ಉದ್ದೇಶ, ಮೂಲಾಧಾರಗಳು ಮತ್ತು ವ್ಯಾಪ್ತಿಗೆ ಸೀಮಿತಗೊಳಿಸಲಾಗಿದೆ. ಈ ಸಂಶೋಧನೆಯಲ್ಲಿ ಇಲ್ಲಿಯವರೆಗೂ ಮುಂಡರಗಿ ಭೀಮರಾಯರನ್ನು ಕುರಿತು ಆಗಿರುವ ಸಮಗ್ರ ಮಾಹಿತಿಯನ್ನು ಕ್ರೋಢೀಕರಿಸಿ, ವೈಜ್ಞಾನಿಕ ವಿಮರ್ಶೆಗೆ ಒಳಪಡಿಸಿ, ಬ್ರಿಟಿಷ್ ವಸಾಹತುನೀತಿ ಮತ್ತು ಸಾಮ್ರಾಜ್ಯಶಾಹಿತ್ವಗಳ ಅಡಿಯಲ್ಲಿ, ಭೀಮರಾಯರ ಪಾತ್ರವನ್ನು ಗುರುತಿಸುವ ಮತ್ತು ಸ್ಥಳೀಯ ಹೋರಾಟಗಾರನಾಗಿ ಗುರುತಿಸುವ ಪ್ರಯತ್ನ ಮಾಡಲಾಗಿದೆ.

ಎರಡನೇ ಅಧ್ಯಾಯದಲ್ಲಿ, 'ಬ್ರಿಟಿಷ್ ಸಾಮ್ರಾಜ್ಯಶಾಹಿ ನೀತಿ' ಶೀರ್ಷಿಕೆಯಡಿ ಮಾಹಿತಿ ಸಂಗ್ರಹಿಸಲಾಗಿದೆ. ಯುರೋಪಿಯನ್ನರ ಆಗಮನಕ್ಕಿಂತ ಪೂರ್ವದ ಭಾರತದ ರಾಜಕೀಯ ಸ್ಥಿತಿಗತಿಗಳು, ಆಳರಸರ ಸ್ವಾರ್ಥ, ರಾಜಕೀಯ ಅನೈಕ್ಯತೆ ಪರಸ್ಪರ ದ್ವೇಷ, ಅಸೂಯೆಗಳನ್ನು ಚರ್ಚಿಸಲಾಗಿದೆ ಮತ್ತು ಭಾರತಕ್ಕೆ ಯುರೋಪಿಯನ್ನರ ಆಗಮನ, ಆಗಮನದ ಉದ್ದೇಶ, ಗುರಿ, ವಸಾಹತು ಮತ್ತು ವಸಾಹತುಶಾಹಿಯ ಅರ್ಥ, ಸಾಮ್ರಾಜ್ಯಶಾಹಿಗಳ ನೀತಿಯನ್ನು ವಿವರಿಸಲಾಗಿದೆ. ಯುರೋಪಿಯನ್ನರ ಅನ್ವೇಷಣ ಮನೋಭಾವ ಮತ್ತು ಅಂದಿನ ಭಾರತದ ರಾಜಕೀಯ, ಸಾಮಾಜಿಕ ಸ್ಥಿತಿಗತಿಗಳ ಬಗ್ಗೆ ಗಮನಹರಿಸಲಾಗಿದೆ. ರಾಷ್ಟ್ರೀಯತೆ, ಸಾಮ್ರಾಜ್ಯಶಾಹಿತ್ವ ಮತ್ತು ವಸಾಹತು ನೀತಿಗಳ ಕುರಿತಾದ ಆಧುನಿಕ ಸಿದ್ಧಾಂತಗಳ ಕುರಿತು ಚರ್ಚಿಸಲಾಗಿದೆ. ಸಾಮ್ರಾಜ್ಯಶಾಹಿತ್ವದ ಪರ ಮತ್ತು ವಿರೋಧ ನಿಲುವುಗಳ ಬಗ್ಗೆಯೂ ಗಮನಹರಿಸಲಾಗಿದೆ. ಭಾರತದ ಅನೈಕ್ಯತೆಯು ಯುರೋಪಿನ ಪ್ರಭುತ್ವ ಯಶಸ್ವಿಯಾಗಲು ಎಷ್ಟರಮಟ್ಟಿಗೆ ಕಾರಣವಾಯಿತು ಎಂಬುದನ್ನು ದಾಖಲಿಸಲಾಗಿದೆ. ಹಾಗೆಯೇ ಪ್ರಾದೇಶಿಕ ಮತ್ತು ವ್ಯಕ್ತಿಗತವಾಗಿ ಬ್ರಿಟಿಷ್ ನೀತಿಗಳು ಯಾವ ರೀತಿ ಪ್ರಭಾವವನ್ನು ಬೀರಿದವು ಮತ್ತು ಇದರ ಪರಿಣಾಮಗಳೇನು ಎಂಬುದನ್ನು ಸಹ ಈ ಅಧ್ಯಾಯದಲ್ಲಿ ತಿಳಿಸುವ ಪ್ರಯತ್ನ ಮಾಡಲಾಗಿದೆ.

ಮೂರನೇ ಅಧ್ಯಾಯದಲ್ಲಿ, ''೧೮೫೭ರ ಹೋರಾಟದ ಸ್ವರೂಪ''ದ ಕುರಿತು ಚರ್ಚಿಸಲಾಗಿದೆ. ಈ ಅಧ್ಯಾಯದಲ್ಲಿ ೧೮೫೭ರ ಸಿಪಾಯಿ ದಂಗೆ ಅಥವಾ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ಬಗ್ಗೆ ಸಾಮ್ರಾಜ್ಯಶಾಹಿಗಳ ನಿಲುವುಗಳು, ರಾಷ್ಟ್ರೀಯವಾದಿಗಳ ನಿಲುವುಗಳು, ಮಾರ್ಕ್ಸ್‌ವಾದಿ ನಿಲುವುಗಳು, ಸಬಾಲ್ಟರ್ನ್ ನಿಲುವುಗಳು ಏನಾಗಿದ್ದವು ಎಂಬುದನ್ನು ಅವಲೋಕಿಸಲಾಗಿದೆ. ೧೮೫೭ರ ಘಟನೆಯು ರಾಷ್ಟ್ರಮಟ್ಟದಲ್ಲಿ ಮತ್ತು ಕರ್ನಾಟಕದಲ್ಲಿ ವ್ಯಾಪಿಸಿದ ಪ್ರದೇಶಗಳು ಮತ್ತು ಆ ಪ್ರದೇಶಗಳಲ್ಲಿ ನಾಯಕತ್ವ ವಹಿಸಿದವರ್‍ಯಾರು, ಅವರ ಉದ್ದೇಶಗಳೇನು, ಕಾರಣಗಳೇನು ಮತ್ತು ಈ ಘಟನೆ ಯಾವ ರೀತಿಯ ಪ್ರಭಾವ ಬೀರಿತು ಎಂಬುದರ ಬಗ್ಗೆ ಅವಲೋಕಿಸಲಾಗಿದೆ. ಕರ್ನಾಟಕದಲ್ಲಿ ೧೮೫೭ರಲ್ಲಿ ಹಲಗಲಿ ಬೇಡರು, ಸುರಪುರದ ವೆಂಕಟಪ್ಪನಾಯಕ, ನರಗುಂದದ ಬಾಬಾಸಾಹೇಬ ಹಾಗೂ ಮುಂಡರಗಿಯ ಭೀಮರಾಯ ನಡೆಸಿದ ಹೋರಾಟ ಹಾಗೂ ಇದು ಇತರೆ ಸಂಸ್ಥಾನಗಳ ಮೇಲೆ ಬೀರಿದ ಪರಿಣಾಮಗಳನ್ನು ವಿಶ್ಲೇಷಿಸಲಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ, 'ಮುಂಡರಗಿ ಪರಿಸರ' ಎಂಬ ಶೀರ್ಷಿಕೆಯಡಿ, ಮುಂಡರಗಿ ಹಾಗೂ ಸುತ್ತಮುತ್ತಲಿನ ಪರಿಸರ, ಸಂಸ್ಥಾನಗಳ ಪ್ರಾಮುಖ್ಯತೆಯನ್ನು ವಿವರಿಸಲಾಗಿದೆ. ಮುಂಡರಗಿ ಮತ್ತು

ಮುಂಡರಗಿ ಸುತ್ತಮುತ್ತಲಿನ ಪ್ರದೇಶಗಳಲ್ಲಿ ೧೮೫೭ರ ಹೋರಾಟವು ಬೀರಿದ ಪ್ರಭಾವವನ್ನು ಚರ್ಚಿಸಲಾಗಿದೆ. ಮುಂಡರಗಿಯ ಐತಿಹಾಸಿಕ ಹಿನ್ನೆಲೆ, ಭೌಗೋಳಿಕತೆ, ಭೀಮರಾಯರಿಗಿಂತ ಪೂರ್ವದಲ್ಲಿ ಕಂಡು ಬರುವ ಮುಂಡರಗಿ ಇತಿಹಾಸ ಹಾಗೂ ಅಲ್ಲಿನ ಹೋರಾಟಗಾರರ ಬಗ್ಗೆ ಪ್ರಸ್ತಾಪಿಸಲಾಗಿದೆ.

ಐದನೇ ಅಧ್ಯಾಯದಲ್ಲಿ, 'ಮುಂಡರಗಿ ಭೀಮರಾಯ' ಎಂಬ ಶೀರ್ಷಿಕೆಯಡಿ ಭೀಮರಾಯರ ಕೌಟುಂಬಿಕ ಹಿನ್ನೆಲೆ, ಬಾಲ್ಯ ಮತ್ತು ಶಿಕ್ಷಣದ ಬಗ್ಗೆ ಸಂಕ್ಷಿಪ್ತವಾಗಿ ತಿಳಿಸಲಾಗಿದೆ. ಪ್ರಸ್ತುತ ಕೈಗೊಂಡಿರುವ ಸಂಶೋಧನಾ ಅಧ್ಯಯನದಲ್ಲಿ ಈ ಅಧ್ಯಾಯವೇ ಅತ್ಯಂತ ಪ್ರಮುಖವಾದುದಾಗಿದೆ. ಬ್ರಿಟಿಷ್ ಸರಕಾರದ ನೌಕರನಾಗಿದ್ದು (ಸೇವೆಯಲ್ಲಿದ್ದು) ಬ್ರಿಟಿಷರ ಶೋಷಣೆ ಮತ್ತು ಸಾಮ್ರಾಜ್ಯಶಾಹಿ ನೀತಿಯಿಂದ ಬೇಸತ್ತು, ಸೇವೆಗೆ ರಾಜೀನಾಮೆ ನೀಡಿ, ಇತರ ದೇಶೀಯ ಸಂಸ್ಥಾನಗಳ ಜೊತೆ ಸಂಪರ್ಕ ಸಾಧಿಸಿ, ಜನರ ವಿಶ್ವಾಸ ಮತ್ತು ಬೆಂಬಲ ಗಳಿಸಿ, ಕೆಲವರ ಮನವೊಲಿಸಿ, ಸಾಮ್ರಾಜ್ಯಶಾಹಿಗಳ ವಿರುದ್ಧ ಹೋರಾಡಿದ ಘಟನೆಗಳ ವಿವರಗಳಿಗೆ ಹೆಚ್ಚಿನ ಮಹತ್ವವನ್ನು ಕೊಡಲಾಗಿದೆ.

ಆರನೆಯ ಅಧ್ಯಾಯದಲ್ಲಿ, 'ಮೌಖಿಕ ಕಥನಗಳಲ್ಲಿ ಮುಂಡರಗಿ ಭೀಮರಾಯ' ಎಂಬ ಶೀರ್ಷಿಕೆಯಡಿ ಸ್ಥಳೀಯ ಚರಿತ್ರೆಯ ದೃಷ್ಟಿಯಿಂದ ಮೌಖಿಕ ಕಥನಗಳಿಗೆ ಹೆಚ್ಚಿನ ಮಹತ್ವ ನೀಡಿ ಭೀಮರಾಯರ ಹೋರಾಟವನ್ನು ತಿಳಿಯುವ ಪ್ರಯತ್ನ ಮಾಡಲಾಗಿದೆ. ಭೀಮರಾಯರ ಕುರಿತು ಅಂದಿನ ಕಾಲದ ಜನಸಾಮಾನ್ಯರು ತಮ್ಮ ಒಡಲಾಳದಿಂದ ವ್ಯಕ್ತಪಡಿಸಿರುವ ಲಾವಣಿಗಳ ಬಗ್ಗೆಯೂ ಸಹ ವಿಶೇಷ ಮಹತ್ವವನ್ನು ನೀಡಿ ಮಾಹಿತಿ ಸಂಗ್ರಹಿಸಲಾಗಿದೆ. ಮೂಲಾಧಾರಗಳು ವೈಜ್ಞಾನಿಕವಾಗಿ ಇತಿಹಾಸದ ರಚನೆಗೆ ಅವಶ್ಯಕ. ಆದರೆ, ಮೌಖಿಕ ಕಥನಗಳು ಇತಿಹಾಸದ ಮೂಲಾಧಾರಗಳ ದೃಷ್ಟಿಯಿಂದ ಕೆಲವೊಮ್ಮೆ ಕಲ್ಪಿತ ಎನಿಸಿದರೂ ಮತ್ತು ಕೆಲವು ಊಹೆಗಳಿಂದ, ಉತ್ಪ್ರೇಕ್ಷೆಯಿಂದ ಕೂಡಿದ್ದರೂ, ಇವುಗಳನ್ನು ಅಲಕ್ಷಿಸುವಂತಿಲ್ಲ. ಈ ದೃಷ್ಟಿಯಿಂದ ಲಾವಣಿ ಪದಗಳನ್ನು ಮತ್ತು ಸ್ಥಳೀಯರ, ವಿದ್ವಾಂಸರ, ವಂಶಜರ ಮೌಖಿಕ ಕಥನಗಳನ್ನು ವಿಮರ್ಶೆಗೆ ಒಳಪಡಿಸುವ ಪ್ರಯತ್ನ ಮಾಡಲಾಗಿದೆ. ಜೊತೆಗೆ ಸ್ಥಳೀಯವಾಗಿ ಆ ಪ್ರದೇಶದ ಜನತೆ ಯಾವ ರೀತಿ ಮುಂಡರಗಿ ಭೀಮರಾಯರಿಗೆ ಸ್ಪಂದಿಸಿ ಸಹಾಯ ಮಾಡಿದರು ಮತ್ತು ಬ್ರಿಟಿಷ್ ಪ್ರಭುತ್ವವನ್ನು ವಿರೋಧಿಸಿದರು ಎಂಬುದರ ಬಗ್ಗೆ ತಿಳಿಸಲಾಗಿದೆ.

ಏಳನೆಯ ಅಧ್ಯಾಯದಲ್ಲಿ, ಒಟ್ಟಾರೆಯಾಗಿ ಈ ಅಧ್ಯಯನದಲ್ಲಿ ಕಂಡುಕೊಂಡ ವಿಚಾರಗಳನ್ನು ಮಂಡಿಸಲಾಗಿದೆ. ೧೮೫೭ರ ಹೋರಾಟವು ಬ್ರಿಟಿಷ್ ಸರಕಾರ ತನ್ನ ನೀತಿಯನ್ನು ಬದಲಾಯಿಸಿಕೊಳ್ಳುವಂತೆ ಮಾಡಿದ್ದು ಹಾಗೂ ಮುಂದಿನ ರಾಷ್ಟ್ರೀಯ ಹೋರಾಟಕ್ಕೆ ದಿಕ್ಸೂಚಿಯಾಗಿ ಕಂಡುಬಂದ ವಿಚಾರದ ಕುರಿತು ಇಲ್ಲಿ ಚರ್ಚಿಸಲಾಗಿದೆ.

**ಸಂಶೋಧನಾ ಅಧ್ಯಯನದ ಮೂಲಾಧಾರಗಳು**

'ಬ್ರಿಟಿಷ್ ಸಾಮ್ರಾಜ್ಯಶಾಹಿ ವಿರುದ್ಧ ಮುಂಡರಗಿ ಹೋರಾಟ' ಎಂಬ ಸಂಶೋಧನಾ ಅಧ್ಯಯನಕ್ಕೆ ಹಲವಾರು ಮೂಲಾಧಾರಗಳನ್ನು ಬಳಸಿಕೊಳ್ಳಲಾಗಿದೆ. ಮೂಲಾಧಾರಗಳೇ ಸಂಶೋಧನೆಯ ಬೆನ್ನೆಲು

ಬಾಗಿರುವುದರಿಂದ, ಗುಣಾತ್ಮಕವಾದ ಮೂಲಾಧಾರಗಳನ್ನು ಪತ್ತೆಹಚ್ಚುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಈ ವಿಷಯಕ್ಕನುಗುಣವಾಗಿ ಸಂದರ್ಶನಗಳು, ರಾಷ್ಟ್ರೀಯ ಮತ್ತು ಪ್ರಾದೇಶಿಕ ವೃತ್ತ ಪತ್ರಿಕೆಗಳು, ಲೇಖನಗಳು, ಐತಿಹ್ಯಗಳು, ಹೇಳಿಕೆಗಳು, ಪತ್ರಗಾರದ ದಾಖಲಾತಿಗಳು, ವಂಶಾವಳಿಗಳು, ಸಂಘ-ಸಂಸ್ಥೆಗಳ ಮಾಹಿತಿಗಳು, ಕಂದಾಯ ಇಲಾಖೆಯ ದಾಖಲೆಗಳು, ಪ್ರಕಟಿತ ಗ್ರಂಥಗಳು, ಲಾವಣಿ ಪದಗಳು - ಹೀಗೆ ಹಲವಾರು ಮಾಹಿತಿಗಳ ಆಧಾರದ ಮೇಲೆ ಸಂಶೋಧನೆಯನ್ನು ಕೈಗೊಳ್ಳಲಾಗಿದೆ. ಪ್ರಸ್ತುತ ಮುಂಡರಗಿಯಲ್ಲಿರುವ 'ಮುಂಡರಗಿ ತಾಲೂಕು ಸ್ವಾತಂತ್ರ್ಯ ಹೋರಾಟಗಾರರ ಸಂಘದ', ಸದಸ್ಯರ ಅಭಿಪ್ರಾಯಗಳು ಮತ್ತು ಅದರ ಪ್ರಕಟಣೆಗಳನ್ನು ಇಲ್ಲಿ ವ್ಯಾಪಕವಾಗಿ ಬಳಸಿಕೊಳ್ಳಲಾಗಿದೆ. ಈ ಎಲ್ಲಾ ಮೂಲಾಧಾರಗಳನ್ನು ಆಧರಿಸಿ, ಕ್ರಮಬದ್ಧವಾದ ಮತ್ತು ಗುಣಾತ್ಮಕ ವಿಷಯ ವಿಶ್ಲೇಷಣೆಯನ್ನು ಮಾಡಲಾಗಿದೆ.

ವಿಭಿನ್ನ ವ್ಯಕ್ತಿತ್ವ ಹಾಗೂ ಸ್ವಾತಂತ್ರ್ಯ ಹೋರಾಟಗಾರರಾಗಿದ್ದ ಮುಂಡರಗಿ ಭೀಮರಾಯರ ಜೀವನ, ವ್ಯಕ್ತಿತ್ವ ಮತ್ತು ಬ್ರಿಟಿಷರ ವಿರುದ್ಧ ಅವರ ಹೋರಾಟದ ಬಗ್ಗೆ ಅನೇಕ ಅಧ್ಯಯನಗಳು ನಡೆಯುತ್ತಾ ಬಂದಿವೆ. ಈಗಾಗಲೇ ಭೀಮರಾಯರ ಕುರಿತು ನಡೆದಿರುವ ಮುಖ್ಯ ಅಧ್ಯಯನಗಳಲ್ಲಿ, ಸೂರ್ಯನಾಥ್ ಯು ಕಾಮತ್ ಸಂಪಾದಕತ್ವದ "ಕರ್ನಾಟಕ ಸ್ಟೇಟ್ ಗೆಝೆಟಿಯರ್",[೪] ಜಿ.ಎಸ್. ಹಾಲಪ್ಪ ಮತ್ತು ಎಂ.ವಿ. ಕೃಷ್ಣರಾವ್‌ರ "ಹಿಸ್ಟರಿ ಆಫ್ ಫ್ರೀಡಂ ಮೂವ್‌ಮೆಂಟ್ ಇನ್ ಕರ್ನಾಟಕ',[೫] ಪಿ.ಎಸ್. ಜೋಷಿ ಮತ್ತು ಎಸ್.ವಿ. ಗೋಲ್ಕರ್‌ರವರ "ಹಿಸ್ಟರಿ ಆಫ್ ಮಾಡ್ರನ್ ಇಂಡಿಯಾ,[೬] ದುರ್ಗಪ್ಪ ಎಂ.ಕೆ. ಇವರ "ಫ್ರೀಢಂ ಮೂವ್‌ಮೆಂಟ್ ಇನ್ ಬಳ್ಳಾರಿ ಡಿಸ್ಟ್ರಿಕ್ಟ್",[೭] ಮ್ಯಾಕ್‌ಲಿನ್ ಸಿ.ಡಿ. ಇವರ "ಮ್ಯಾನುಯಲ್ ಆಫ್ ಅಡ್‌ಮಿನಿಸ್ಟ್ರೇಷನ್ ಆಫ್ ಮದ್ರಾಸ್ ಪ್ರೆಸಿಡೆನ್ಸಿ",[೮] ಸೇತುರಾಂ ಇ. ಆರ್ ಬರೆದ "ದ ಸಾಗ ಆಫ್ ಫ್ರೀಡಂ ಸ್ಟ್ರಗಲ್",[೯] ಮುದವೀಡು ಕೃಷ್ಣರಾಯರ "ಮುಂಡರಗಿ ಗಂಡುಗಲಿ",[೧೦] ಮಹಾಲಿಂಗ ಯಾಳಗಿ ಸಂಪಾದಕತ್ವದ "ಮುಂಡರಗಿ ನಾಡ ಸ್ವಾತಂತ್ರ್ಯ ಸಂಗ್ರಾಮ",[೧೧] ಬಿ. ಶೇಷಾದ್ರಿ ಮತ್ತು ಟಿ.ಆರ್. ಚಂದ್ರಶೇಖರ್ ಸಂಪಾದಕತ್ವದ "ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ",[೧೨] ಗೋಪಾಲರಾವ್ ಎಚ್.ಎಸ್. ಅವರ "ಕರ್ನಾಟಕ ಏಕೀಕರಣ ಇತಿಹಾಸ",[೧೩] ಬಾ.ರಾ. ಗೋಪಾಲರವರ "ಕರ್ನಾಟಕದ ಇತಿಹಾಸ",[೧೪] ಸೂರ್ಯನಾಥ್ ಕಾಮತ್‌ರ "ಸ್ವಾತಂತ್ರ್ಯ ಹೋರಾಟದ ಸ್ಮೃತಿಗಳು",[೧೫] ಚಂದ್ರಶೇಖರ ಎಸ್. ಸಂಪಾದಕತ್ವದ "ಕರ್ನಾಟಕ ಚರಿತ್ರೆ, ಸಂಪುಟ-೭",[೧೬] ಸೂರ್ಯನಾಥ ಕಾಮತ್‌ರ "ಕರ್ನಾಟಕದ ಸಂಕ್ಷಿಪ್ತ ಇತಿಹಾಸ",[೧೭] ತಿರುಮಲ ತಾತಾಚಾರ್ಯಶರ್ಮರ "ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ",[೧೮] ಸೆಬಾಸ್ಟಿಯನ್ ಜೋಸೆಫ್ ಅವರ ಸಂಪಾದಕತ್ವದ "ಕರ್ನಾಟಕ ಚರಿತ್ರೆ, ಸಂಪುಟ-೬",[೧೯] ರಂಗಸಾಮಯ್ಯರವರ "ದಕ್ಷಿಣ ಭಾರತದ ಇತಿಹಾಸ",[೨೦] ಕೊರಟಗೆರೆ ಶ್ರೀನಿವಾಸರಾವ್ ಬರೆದ ಮುಂಡರಗಿ ಭೀಮರಾಯ"[೨೧] ಮತ್ತು ಈ ಕೃತಿಗಳ ಜೊತೆಗೆ, ದೆಹಲಿ ಪತ್ರಾಗಾರ ಇಲಾಖೆಯ ದಾಖಲೆಗಳು, ಗೋವಿಂದ ಮೂರ್ತಿ ದೇಸಾಯಿಯವರ ಸಂಯುಕ್ತ ಕರ್ನಾಟಕದಲ್ಲಿ ಪ್ರಕಟವಾದ ಲೇಖನಗಳು, ಭೀಮರಾಯರ ಮೇಲಿರುವ ಲಾವಣಿ ಪದಗಳು, ಭೀಮರಾಯರ ವಂಶಜರ ಹೇಳಿಕೆಗಳನ್ನು ಬಳಸಿಕೊಳ್ಳಲಾಗಿದೆ.

**ಗ್ರಂಥಗಳ ವಿಶ್ಲೇಷಣೆ** - ಎಂ.ವಿ. ಕೃಷ್ಣರಾವ್, ಜಿ.ಎಸ್. ಹಾಲಪ್ಪ ಬರೆದಿರುವ 'ಹಿಸ್ಟರಿ ಆಫ್ ಫ್ರೀಡಂ ಮೂವ್‌ಮೆಂಟ್ ಇನ್ ಕರ್ನಾಟಕ' ಎನ್ನುವ ಗ್ರಂಥದಲ್ಲಿ, ಮುಂಡರಗಿ ಭೀಮರಾಯರ ವ್ಯಕ್ತಿತ್ವ, ಅವರ ಹೋರಾಟ, ಸೇವೆ, ಪತ್ರಾಗಾರಗಳ ದಾಖಲೆಗಳ ವಿವರಗಳು ಭೀಮರಾಯ ಮತ್ತು ಸುತ್ತಮುತ್ತಲಿನ ಸಂಸ್ಥಾನಿಕರ ಸಂಬಂಧ, ಭೀಮರಾಯರ ಹೋರಾಟದ ಉದ್ದೇಶ, ವಿವರಿಸುತ್ತ ಭೀಮರಾಯರ ಹೋರಾಟ ವನ್ನು ಪೌರ ಪ್ರತಿಭಟನೆ ಎಂದು ವಿಶ್ಲೇಷಿಸಿದ್ದಾರೆ.

ಬಿ. ಶೇಷಾದ್ರಿ ಮತ್ತು ಟಿ.ಆರ್. ಚಂದ್ರಶೇಖರ ಅವರು ಸಂಪಾದಿಸಿರುವ 'ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ' ಎನ್ನುವ ಪುಸ್ತಕದಲ್ಲಿ ಮುಂಡರಗಿ ಭೀಮರಾಯರ ಬಂಡಾಯ - ಹೋರಾಟದ ನೆಲೆ ಎಂಬ ಶೀರ್ಷಿಕೆಯಲ್ಲಿ ವಿವರವಾಗಿ ಬರೆಯುತ್ತಾ, ೧೮೫೭ರಲ್ಲಿ ಉತ್ತರ ಭಾರತದಲ್ಲಿ ನಡೆದ ಸಿಪಾಯಿ ದಂಗೆಗೂ, ಭೀಮರಾಯರ ಬಂಡಾಯಕ್ಕೂ ಒಂದು ಸಂಬಂಧವಿದ್ದುದನ್ನು ಗುರುತಿಸಿದ ಬಗ್ಗೆ ವಿಶೇಷ ಗಮನ ಸೆಳೆದಿದ್ದಾರೆ.

ಟಿ.ಬಿ. ಕೇಶವರಾವ್ ಅವರು 'ಇಜಾರಿ ವಸುಪಾಲಪ್ಪನವರು' ಎಂಬ ಗ್ರಂಥದಲ್ಲಿ ಭೀಮರಾಯರ ಹೋರಾಟವನ್ನು ದಾಖಲಿಸುವ ಪ್ರಯತ್ನ ಮಾಡಿದ್ದಾರೆ. ಲೇಖಕರು ರಾಷ್ಟ್ರ ಮತ್ತು ಪ್ರಾಂತ್ಯಮಟ್ಟದಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಹೆಜ್ಜೆಗಳನ್ನು ಗುರುತಿಸುವ ಪ್ರಯತ್ನ ಮಾಡಿದ್ದಾರೆ. ಪ್ರತಿಯೊಂದು ಪ್ರಾದೇಶಿಕ ಹೋರಾಟವು ರಾಷ್ಟ್ರೀಯ ಸ್ವರೂಪವನ್ನು ಹೊಂದಿದ್ದಿತು ಎನ್ನುವುದನ್ನು ಸ್ಪಷ್ಟವಾಗಿ ನಿರ್ದಿಷ್ಟಪಡಿಸಿದ್ದಾರೆ.

**ವ್ಯಾಪ್ತಿ**

ಪ್ರಸ್ತುತ ಅಧ್ಯಯನವು ಮುಂಡರಗಿಯ ಭೀಮರಾಯರು ಬ್ರಿಟಿಷ್ ಸಾಮ್ರಾಜ್ಯಶಾಹಿ ಧೋರಣೆಯ ವಿರುದ್ಧ ನಡೆಸಿದ ಹೋರಾಟದ ವಿವಿಧ ಹಂತಗಳನ್ನು ಒಳಗೊಂಡಿದೆ. ೧೮೫೭ರ ಹೋರಾಟ ಭಾರತದೆಲ್ಲೆಡೆ ನಡೆದ ರೀತಿ, ಕರ್ನಾಟಕದಲ್ಲಿ ಕಾಣಿಸಿಕೊಂಡ ಬಗೆ ಹಾಗೂ ಮುಂಡರಗಿ ಪ್ರದೇಶ ಭೀಮರಾಯರ ನೇತೃತ್ವದಲ್ಲಿ ಬ್ರಿಟಿಷರಿಗೆ ಮುಖಾಮುಖಿಯಾಗಿರುವುದು ಈ ಅಧ್ಯಯನದ ಪ್ರಮುಖ ವಿಚಾರ. ಭೀಮರಾಯರು ತಮ್ಮ ಸುತ್ತಮುತ್ತಲಿನ ಸಂಸ್ಥಾನಿಕರೊಂದಿಗೆ ಸಂಪರ್ಕ ಬೆಳೆಸಿ ಬ್ರಿಟಿಷರಿಗೆ ಪ್ರಬಲ ಪ್ರತಿರೋಧವನ್ನು ಒಡ್ಡುವ ಪ್ರಯತ್ನ ಮಾಡಿದರು. ಹೀಗಾಗಿ ಭೀಮರಾಯರ ಹೋರಾಟದ ಕಿಡಿ ಮುಂಡರಗಿ, ನರಗುಂದ, ಸುರಪುರ, ಕೊಪ್ಪಳ, ಗದಗ, ಡಂಬಳ, ಹಮ್ಮಿಗೆ, ಮುಂತಾದ ಪ್ರದೇಶಗಳಿಗೆ ಪಸರಿಸಿತು. ಹೋರಾಟದ ವ್ಯಾಪ್ತಿ ಭೌಗೋಳಿಕವಾಗಿ ಹಾಗೂ ಕಾಲದ ನೆಲೆಯಿಂದ ನೋಡುವಾಗ ಅಷ್ಟೊಂದು ವಿಸ್ತಾರ ವಾಗಿ ಕಂಡು ಬರದಿದ್ದರೂ, ಹೋರಾಟದ ಪರಿಣಾಮಗಳು ಭೌಗೋಳಿಕ ಹಾಗೂ ಕಾಲದ ಚೌಕಟ್ಟಿಗೆ ನಿಲುಕದ ರೀತಿಯದ್ದಾಗಿದ್ದವು. ಇದಕ್ಕೆ ೧೮೫೭ ರಿಂದ ೧೮೫೮ರವರೆಗೆ ನಡೆದ ಘಟನೆಗಳೇ ಉದಾಹರಣೆ ಗಳಾಗಿವೆ. ಈ ಎಲ್ಲ ವಿಚಾರಗಳನ್ನು ಕೂಲಂಕಷವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

## ಕೊನೆಟಿಪ್ಪಣಿಗಳು


೧. ಕಾರ್ಲ್‌ಮಾರ್ಕ್ಸ್, ದಿ ರಿವೋಲ್ಟ್ ಇನ್ ದಿ ಇಂಡಿಯನ್ ಆರ್ಮಿ, ಆರ್ಟಿಕಲ್ ನ್ಯೂಯಾರ್ಕ್ ಡೈಲಿ ಟ್ರಿಬ್ಯೂನಲ್.

೨. ದಸ್ತಗೀರ್ ಎಂ., ರಾಷ್ಟ್ರೀಯ ಸ್ವಾತಂತ್ರ್ಯ ಸಂಗ್ರಾಮ, ಪು.೫೭.

೩. ಶಿರೂರ ಬಿ.ವ್ಹಿ., ಸಂಶೋಧನ ಸ್ವರೂಪ, ಪು. ೮.

೪. ಸೂರ್ಯನಾಥ್ ಯು ಕಾಮತ್ (ಸಂ), ಕರ್ನಾಟಕ ಸ್ಟೇಟ್ ಗೆಝೆಟಿಯರ್, ಗೌವರ್ನಮೆಂಟ್ ಆಫ್ ಕರ್ನಾಟಕ, ಬೆಂಗಳೂರು, ೧೯೮೨.

೫. ಹಾಲಪ್ಪ ಜಿ.ಎಸ್., ಕೃಷ್ಣರಾವ್ ಎಂ.ವಿ., ಹಿಸ್ಟರಿ ಆಫ್ ಫ್ರೀಡಂ ಮೂವ್‌ಮೆಂಟ್ ಇನ್ ಕರ್ನಾಟಕ, ಸಂಪುಟ-೨, ಗೌರ್ನಮೆಂಟ್ ಆಫ್ ಮೈಸೂರು, ೧೯೯೪.

೬. ಗ್ರೋಲ್ಕರ್ ಎಸ್.ವಿ., ಜೋಷಿ ಪಿ.ಎಸ್., ಹಿಸ್ಟರಿ ಆಫ್ ಮಾಡ್ರನ್ ಇಂಡಿಯಾ, ಎಸ್ ಚಾಂದ್ ಅಂಡ್ ಕಂಪನಿ ಲಿಮಿಟೆಡ್, ನ್ಯೂ ಡೆಲ್ಲಿ, ೧೯೮೩.

೭. ದುರ್ಗಪ್ಪ ಎಂ.ಕೆ., ಫ್ರೀಡಂ ಮೂವ್‌ಮೆಂಟ್ ಇನ್ ಬಳ್ಳಾರಿ ಡಿಸ್ಟ್ರಿಕ್ಟ್.

೮. ಮ್ಯಾಕ್‌ಲಿನ್ ಸಿ.ಡಿ., ಮ್ಯಾನುಯಲ್ ಆಫ್ ಅಡ್‌ಮಿನಿಸ್ಟ್ರೇಷನ್ ಆಫ್ ಮದ್ರಾಸ್ ಪ್ರೆಸಿಡೆನ್ಸಿ.

೯. ಸೇತುರಾಂ ಇ.ಆರ್., ದಿ ಸಾಗ ಆಫ್ ಫ್ರೀಡಂ ಸ್ಟ್ರಗಲ್, ಬೆಂಗಳೂರು, ೧೯೮೦.

೧೦. ಮುದವೀಡು ಕೃಷ್ಣರಾಯ, ಮುಂಡರಗಿ ಗಂಡುಗಲಿ, ಧಾರವಾಡ, ೧೯೮೬.

೧೧. ಮಹಾಲಿಂಗ ಯಾಳಗಿ (ಸಂ), ಮುಂಡರಗಿ ನಾಡ ಸ್ವಾತಂತ್ರ್ಯ ಸಂಗ್ರಾಮ, ಮುಂಡರಗಿ ತಾಲೂಕು ಸ್ವಾತಂತ್ರ್ಯ ಹೋರಾಟಗಾರರ ಸಂಘ, ಮುಂಡರಗಿ, ೧೯೯೯.

೧೨. ಚಂದ್ರಶೇಖರ್ ಟಿ.ಆರ್., ಶೇಷಾದ್ರಿ ಬಿ., ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೧೯೯೮.

೧೩. ಗೋಪಾಲರಾವ್ ಹೆಚ್.ಎಸ್. (ಸಂ), ಕರ್ನಾಟಕದ ಏಕೀಕರಣ ಇತಿಹಾಸ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೯.

೧೪. ಗೋಪಾಲ್ ಬಾ.ರಾ., ಕರ್ನಾಟಕ ಇತಿಹಾಸ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೬.

೧೫. ಸೂರ್ಯನಾಥ ಕಾಮತ್ (ಸಂ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂಪುಟ-೧, ಗೀತಾ ಬುಕ್ ಹೌಸ್, ಮೈಸೂರು, ೧೯೭೪.

೧೬. ಚಂದ್ರಶೇಖರ ಎಸ್. **ಸಂಪಾದಕತ್ವದ ಕರ್ನಾಟಕ ಚರಿತ್ರೆ, ಸಂಪುಟ-೭,** ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೧೭. ಸೂರ್ಯನಾಥ ಕಾಮತ್ (ಸಂ), **ಕರ್ನಾಟಕ ಸಂಕ್ಷಿಪ್ತ ಇತಿಹಾಸ,** ಎಂ.ಸಿ.ಸಿ. ಪಬ್ಲಿಕೇಷನ್ಸ್, ಬೆಂಗಳೂರು, ೨೦೦೫.

೧೮. ತಿರುಮಲ ತಾತಾಚಾರ್ಯಶರ್ಮ, **ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ,** ಮೈಸೂರು ಸಂಸ್ಥಾನ ಸರಕಾರ, ಬೆಂಗಳೂರು, ೧೯೫೭.

೧೯. ಸೆಬಾಸ್ಟಿಯನ್ ಜೋಸೆಫ್ (ಸಂಪುಟ ಸಂಪಾದಕರು), **ಕರ್ನಾಟಕ ಚರಿತ್ರೆ ಮಾಲೆ-೬,** ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೨೦. ರಂಗಸಾಮಯ್ಯ, **ದಕ್ಷಿಣ ಭಾರತದ ಇತಿಹಾಸ,** ಚೇತನ್ ಬುಕ್ ಹೌಸ್, ಬೆಂಗಳೂರು, ೨೦೦೧.

೨೧. ಕೊರಟಗೆರೆ ಶ್ರೀನಿವಾಸರಾವ್, **ಮುಂಡರಗಿ ಭೀಮರಾಯ,** ಐ.ಬಿ.ಎಚ್. ಪ್ರಕಾಶನ ಬೆಂಗಳೂರು.

• • •

ಅಧ್ಯಾಯ ೨

# ಬ್ರಿಟಿಷ್ ಸಾಮ್ರಾಜ್ಯಶಾಹಿ ನೀತಿ

೨.೧. ಯುರೋಪಿಯನ್ನರ ಆಗಮನ ಹಾಗೂ ಭಾರತದ ಸ್ಥಳೀಯ ರಾಜಕಾರಣ

೨.೨. ಬ್ರಿಟಿಷ್ ಸಾಮ್ರಾಜ್ಯಶಾಹಿ ನೀತಿ

೨.೩. ಸಾಮ್ರಾಜ್ಯಶಾಹಿಯ ಪರ ಹಾಗೂ ವಿರುದ್ಧ ನಿಲುವುಗಳು

## ಅಧ್ಯಾಯ ೨

# ಬ್ರಿಟಿಷ್ ಸಾಮ್ರಾಜ್ಯಶಾಹಿ ನೀತಿ

### ೨.೧. ಯುರೋಪಿಯನ್ನರ ಆಗಮನ ಹಾಗೂ ಭಾರತದ ಸ್ಥಳೀಯ ರಾಜಕಾರಣ

ಭಾರತಕ್ಕೆ ಯುರೋಪಿಯನ್ನರ ಆಗಮನ ಮೇಲ್ನೋಟಕ್ಕೆ ಆಕಸ್ಮಿಕವಾಗಿ ಕಂಡು ಬಂದರೂ, ಯುರೋಪಿಯನ್ನರ ಪ್ರತಿಯೊಂದು ನಡೆಯೂ ಯೋಜನಾಬದ್ಧವಾಗಿತ್ತು. ಯುರೋಪಿಯನ್ನರು ಅನ್ವೇಷಣಾ ಮನೋಭಾವದವರಾಗಿದ್ದುದ್ದರ ಜೊತೆಗೆ 'ಅವಶ್ಯಕತೆಯೇ ಅನ್ವೇಷಣೆಯ ಮೂಲ' ಎಂಬಂತೆ ಕೆಲವೊಂದು ಅನಿವಾರ್ಯತೆಗಳು ಯುರೋಪಿಯನ್ನರನ್ನು ಅಲೆದಾಡುವಂತೆ ಹಾಗೂ ಅನ್ವೇಷಿಸುವಂತೆ ಪ್ರಚೋದಿಸಿದವು. ಈ ಉದ್ದೇಶದಿಂದ ಅವರು ಭಾರತವನ್ನು ಪ್ರವೇಶಿಸಿದರು. ಭೌತಿಕ ಆಸಕ್ತಿ ಹೊಂದಿದ್ದ ಯುರೋಪಿಯನ್ನರು, ಭೌತಿಕ ವಸ್ತುಗಳ ಹುಡುಕಾಟಕ್ಕಾಗಿ ಸಾಹಸಮಯ ಅನ್ವೇಷಣೆಗೆ ಇಳಿದರು. 'ಮಾನವನು ಪ್ರಪಂಚದಲ್ಲಿ ಜನ್ಮ ತಾಳಿರುವುದೆ ಮಹತ್‌ಕಾರ್ಯಗಳನ್ನು ಮಾಡಲಿಕ್ಕಾಗಿ' ಎಂದು ಹೇಳಿದ 'ಮೆಗಲಾನ್' ಜಲಮಾರ್ಗದ ಮುಖಾಂತರ ಇಡೀ ವಿಶ್ವವನ್ನೇ ಪರ್ಯಟನೆ ಮಾಡಿದ ಸಾಹಸ ಆತನದು. ಇಂತಹ ನೂರಾರು ಮಂದಿ ಯುರೋಪಿಯನ್ ಸಾಹಸಿಗಳು ಜಗತ್ತನ್ನು ಭೇದಿಸುವಲ್ಲಿ ಪ್ರಯತ್ನಶೀಲರಾದರು. ಕ್ರಿ.ಶ. ೧೭ ಮತ್ತು ೧೮ನೆಯ ಶತಮಾನದಲ್ಲಿ ಇಂತಹ ಹಲವಾರು ಪ್ರಯತ್ನಗಳನ್ನು ನಡೆಸಿದ ಯುರೋಪಿಯನ್ನರು ಹೊಸ ಅಧ್ಯಾಯಕ್ಕೆ ನಾಂದಿ ಹಾಡಿದರು.

ಪಾಶ್ಚಾತ್ಯ ಮತ್ತು ಪೌರ್ವಾತ್ಯ ರಾಷ್ಟ್ರಗಳಿಗೆ ಇದ್ದ ಏಕೈಕ ಭೂಮಾರ್ಗದ ದ್ವಾರವಾಗಿದ್ದ ಕಾನ್‌ಸ್ಟಂಟಿನೋಪಲ್‌ನ್ನು ಕ್ರಿ.ಶ. ೧೪೫೩ರಲ್ಲಿ ತುರ್ಕರು ವಶಪಡಿಸಿಕೊಂಡು, ಭೂಮಾರ್ಗವನ್ನು ಮುಚ್ಚಿದ್ದು ಪ್ರಪಂಚದ ಇತಿಹಾಸದಲ್ಲಿ ಮಹತ್ತರವಾದ ಘಟನೆಯಾಯಿತು. ಅಲ್ಲದೆ ಪ್ರಪಂಚದ ಇತಿಹಾಸದಲ್ಲಿ ಅನೇಕ ರೀತಿಯ ಬದಲಾವಣೆಗಳು ಮತ್ತು ಪರಿಣಾಮಗಳಿಗೂ ಕಾರಣವಾಗಿ ಮಹತ್ವದ ತಿರುವನ್ನು ಪಡೆಯಿತು. ಪಾಶ್ಚಿಮಾತ್ಯರು ತಾವು ಅವಲಂಬಿಸಿದ್ದ ವ್ಯಾಪಾರ, ವಾಣಿಜ್ಯದ ಮುಂದುವರಿಕೆಗೆ ಪೌರ್ವಾತ್ಯ ರಾಷ್ಟ್ರಗಳಿಗೆ ಹೊಸ ಜಲಮಾರ್ಗ ಶೋಧಿಸುವುದು ಅನಿವಾರ್ಯವಾಗಿ ಪೋರ್ಚುಗೀಸರ ಸತತ ಪ್ರಯತ್ನದಿಂದ ವಿಶ್ವದ ನಾನಾ ಭಾಗಗಳಿಗೆ ಹೊಸ ಜಲಮಾರ್ಗಗಳನ್ನು ಕಂಡು ಹಿಡಿಯುವಲ್ಲಿ ಯಶಸ್ವಿಯಾದರು.[೧] ಅದರಲ್ಲಿ ಭಾರತವು ಸಹ ಒಂದು. ಕ್ರಿ.ಶ. ೧೪೯೮ರಲ್ಲಿ ವಾಸ್ಕೋಡಿಗಾಮನು ಕಲ್ಲಿಕೋಟೆಯನ್ನು ತಲುಪಿ ಭಾರತಕ್ಕೆ ಹೊಸ ಜಲಮಾರ್ಗವನ್ನು ಕಂಡು ಹಿಡಿದನು. ಕ್ರಮೇಣ ಭಾರತದತ್ತ ಆಗಮಿಸಿದ ಪ್ರಮುಖ ಯುರೋಪಿಯನ್ನರೆಂದರೆ ಪೋರ್ಚುಗೀಸರು, ಫ್ರೆಂಚರು, ಡಚ್ಚರು ಮತ್ತು ಬ್ರಿಟಿಷರು.

ಭಾರತದ ಸರಕುಗಳಿಗೆ ಮತ್ತು ವಸ್ತುಗಳಿಗೆ ಯುರೋಪಿನಲ್ಲಿ ಅಪಾರವಾದ ಬೇಡಿಕೆ ಇದ್ದುದರಿಂದ ಅನೇಕ ಪದಾರ್ಥಗಳನ್ನು ಭಾರೀ ಪ್ರಮಾಣದಲ್ಲಿ ಯುರೋಪಿಗೆ ಸಾಗಿಸತೊಡಗಿದರು. ಕೆಲವೇ ದಿನಗಳಲ್ಲಿ ವ್ಯಾಪಾರಕ್ಕಾಗಿ ಪೈಪೋಟಿಯೇ ಆರಂಭವಾಯಿತು. ಈ ರೀತಿ ಜಲಮಾರ್ಗದ ಸಂಶೋಧನೆಯಿಂದ ಭಾರತದ ಸರಕುಗಳು ಜಲಮಾರ್ಗವಾಗಿ ಯುರೋಪಿನ ಮಾರುಕಟ್ಟೆಯನ್ನು ಸೇರುತ್ತಿದ್ದವು. ಭಾರತಕ್ಕೆ ಯುರೋಪಿಯನ್ನರ ಆಗಮನದ ಸಂದರ್ಭ ಮತ್ತು ಪರಿಸ್ಥಿತಿಗಳನ್ನು ನೋಡಿದಾಗ, ಯುರೋಪಿಯನ್ನರು ಆರಂಭದಲ್ಲಿ ಭಾರತದಲ್ಲಿ ಸಾಮ್ರಾಜ್ಯ ವಿಸ್ತರಣೆ ಮಾಡುವ ಉದ್ದೇಶಕ್ಕೆ ಕೈಹಾಕಲಿಲ್ಲ, ವರ್ತಕರಾಗಿ ಬಂದು, ವ್ಯಾಪಾರವನ್ನೇ ವೃತ್ತಿಯನ್ನಾಗಿ ಮಾಡಿಕೊಂಡು ಭಾರತದಲ್ಲಿ ಬೆಲೆಬಾಳುವ ಮತ್ತು ಅತೀ ಬೇಡಿಕೆಯುಳ್ಳ ಪದಾರ್ಥಗಳನ್ನು ತಮ್ಮ ರಾಷ್ಟ್ರಕ್ಕೆ ಕಳುಹಿಸುವ ವ್ಯಾಪಾರದಲ್ಲಿ ತೊಡಗಿದರು.[೨] ಆರಂಭದಲ್ಲಿ ಯುರೋಪಿಯನ್ನರ ವ್ಯಾಪಾರದ ನೀತಿ ಭಾರತೀಯರನ್ನು ಆಕರ್ಷಿಸಿತು. ಆರ್ಥಿಕವಾಗಿ ಹೊಸ ಸಂಚಲನ ಉಂಟಾಯಿತು. ಹೆಚ್ಚಾಗಿ ಅದಲು-ಬದಲು ವ್ಯವಸ್ಥೆಗೆ ಹೊಂದಿಕೊಂಡಿದ್ದ ಜನತೆ, ಯುರೋಪಿಯನ್ನರ ವ್ಯಾಪಾರ ಕ್ರಮ, ನೀತಿಯಿಂದಾಗಿ ಹೊಸ ಬದಲಾವಣೆಗಳನ್ನು ಕಾಣುವಂತಾಯಿತು. ಭಾರತದೊಂದಿಗಿನ ವ್ಯಾಪಾರ ಯುರೋಪಿಯನ್ನರಿಗೆ ಹೆಚ್ಚು ಲಾಭದಾಯಕವಾಗಿದ್ದರಿಂದ ವ್ಯಾಪಾರೀಕರಣದ ಸರಳೀಕರಣಕ್ಕಾಗಿ ತಮ್ಮಲ್ಲಿಯೇ ವ್ಯಾಪಾರಿ ಕೋಠಿಗಳನ್ನು ಕಟ್ಟಿಕೊಳ್ಳತೊಡಗಿದರು. ಈ ವ್ಯಾಪಾರ ಕೋಠಿಗಳೇ ಬರುಬರುತ್ತಾ ವಸಾಹತುಗಳಾದವು. ಆರಂಭದಲ್ಲಿ ಯುರೋಪಿಯನ್ನರು ವ್ಯಾಪಾರಿ ಕೋಠಿಗಳನ್ನು ಸ್ಥಾಪಿಸುವ ಸಂದರ್ಭದಲ್ಲಿ ಅನೇಕ ಸ್ಥಳೀಯ ಅರಸರಿಂದ ಪ್ರತಿರೋಧಗಳು ವ್ಯಕ್ತವಾದವು. ಇಂತಹ ಪ್ರತಿರೋಧಗಳನ್ನು ಸಮರ್ಥವಾಗಿಯೇ ಎದುರಿಸಿದ ಯುರೋಪಿಯನ್ನರು, ಅವರನ್ನು ಸೋಲಿಸಿ ಮತ್ತಷ್ಟು ಬಲಿಷ್ಟರಾದರು. ಇದು ಮುಂದೆ ವಸಾಹತುನೀತಿ ಅಳವಡಿಸಿಕೊಳ್ಳಲು ಕಾರಣವಾಯಿತು.

**ಪೋರ್ಚುಗೀಸರು, ಡಚ್ಚರು ಹಾಗೂ ಫ್ರೆಂಚರು**

ಭಾರತಕ್ಕೆ ಆಗಮಿಸಿದ ಯುರೋಪಿಯನ್ನರಲ್ಲಿ ಪೋರ್ಚುಗೀಸರೇ ಮೊದಲಿಗರು. ಕ್ರಿ.ಶ. ೧೪೯೭ರಲ್ಲಿ ವಾಸ್ಕೋಡಿಗಾಮನು ಪೋರ್ಚುಗಲ್‌ನ ಲಿಸ್ಬನ್ ಬಂದರಿನಿಂದ ಪ್ರಯಾಣವನ್ನು ಆರಂಭಿಸಿ ಗುಡ್ ಹೋಪ್ ಭೂಶಿರವನ್ನು ದಾಟಿ, ಮೊಜಾಂಬಿಕ್‌ಗೆ ತಲುಪಿದ. ಅಲ್ಲಿ ಭಾರತೀಯ ನಾವಿಕನೊಬ್ಬನ ಸಹಾಯದಿಂದ ಕ್ರಿ.ಶ. ೧೪೯೮ ಮೇ ೧೭ರಂದು ಭಾರತದ ಕಲ್ಲಿಕೋಟೆಯ ಬಂದರನ್ನು ತಲುಪಿದನು. ಕಲ್ಲಿಕೋಟೆಯ ಹಿಂದೂ ದೊರೆ ಜಾಮೊರಿನ್, ವಾಸ್ಕೋಡಿಗಾಮನಿಗೆ ಸ್ವಾಗತ ನೀಡಿ, ಪಾಶ್ಚಿಮಾತ್ಯ ವಾಣಿಜ್ಯದ ಸೌಲಭ್ಯವನ್ನು ಪಡೆಯಲು ಇಚ್ಛಿಸಿದನು. ವಾಸ್ಕೋಡಿಗಾಮನು ಜಾಮೊರಿನ್‌ನ ಸಹಾಯದಿಂದ, ಮಲಬಾರ್ ತೀರದಲ್ಲಿ ದೊರೆಯುವ ಸಂಬಾರ ಪದಾರ್ಥಗಳು, ಬಟ್ಟೆ, ಹತ್ತಿ, ರೇಷ್ಮೆ, ಶ್ರೀಗಂಧ, ಬೆಳ್ಳಿ, ಬಂಗಾರ, ಕಲಾತ್ಮಕ ವಸ್ತುಗಳು, ಮುಂತಾದವುಗಳ ಸಮೀಕ್ಷೆ ನಡೆಸಿದನು. ಮೂರು ತಿಂಗಳ ವಾಸ್ತವ್ಯದ ನಂತರ, ಕ್ರಿ.ಶ. ೧೪೯೮ ಆಗಸ್ಟ್‌ನಲ್ಲಿ ಪೋರ್ಚುಗಲ್‌ಗೆ ಹಿಂತಿರುಗಿದನು.[೩] ಇವನು ಮರಳಿ ಹೋಗುವಾಗ ತನ್ನ ಪ್ರಯಾಣದ ವೆಚ್ಚದ ಹಲವಾರು ಪಟ್ಟು ಹೆಚ್ಚಿನ ಸಂಪತ್ತನ್ನು ತೆಗೆದುಕೊಂಡು ಹೋದನು. ನಂತರ ಕ್ರಿ.ಶ. ೧೫೦೦ರಲ್ಲಿ ಮತ್ತೊಬ್ಬ ನಾವಿಕ ಕೆಬ್ರಾಲನು ಭಾರತದ ಕಲ್ಲಿಕೋಟೆಗೆ

ಬಂದು ಅಲ್ಲಿ ವ್ಯಾಪಾರಿ ಕೋಠಿಯನ್ನು ಸ್ಥಾಪಿಸುವ ಪ್ರಯತ್ನವನ್ನು ಮಾಡಿದನು. ಆದರೆ ಜಾಮೋರಿನ್ ದೊರೆ ಮತ್ತು ಅರಬ್ ವರ್ತಕರ ವಿರೋಧದಿಂದ ಇದು ಯಶಸ್ವಿಯಾಗಲಿಲ್ಲ. ವಾಸ್ಕೋಡಿಗಾಮನು ಕ್ರಿ.ಶ. ೧೫೦೧ರಲ್ಲಿ ಎರಡನೆ ಬಾರಿಗೆ ಭಾರತಕ್ಕೆ ಬಂದನು. ಈ ಬಾರಿ ದುರಾಸೆ, ಅಮಾನುಷತೆಗಳೊಂದಿಗೆ ದೊಡ್ಡ ನೌಕಾಪಡೆಗಳೊಂದಿಗೆ ಬಂದು, ಅರಬ್ ವರ್ತಕರನ್ನು ಬೆದರಿಸಿ, ಕೊಚ್ಚಿನ್, ಕಲ್ಲಿಕೋಟೆ, ಕಣ್ಣಾನೂರುಗಳಲ್ಲಿ ಪೋರ್ಚುಗೀಸರ ವ್ಯಾಪಾರ ಕೇಂದ್ರಗಳನ್ನು ಸ್ಥಾಪಿಸಿದನು. ನಂತರ ಪೋರ್ಚುಗೀಸರು ತಮ್ಮ ವಾಣಿಜ್ಯ ನೀತಿಗೆ ಸೀಮಿತರಾಗಿರದೇ ಇತರ ರಾಷ್ಟ್ರಗಳ ವರ್ತಕರಿಗೆ ವಾಣಿಜ್ಯ ಸೌಲಭ್ಯಗಳನ್ನು ಬಲಾತ್ಕಾರದಿಂದ ನಿರಾಕರಿಸತೊಡಗಿದರು. ಸಮುದ್ರದಲ್ಲಿ ತಮ್ಮ ಪ್ರಾಬಲ್ಯ ಸ್ಥಾಪಿಸುವ ಉದ್ದೇಶದಿಂದ ಕ್ರಿ.ಶ. ೧೫೦೨ರಲ್ಲಿ 'ಪೋಪ್'ನಿಂದ ಒಂದು ಸನ್ನದನ್ನು ಪಡೆದು, ಅರೇಬಿಯಾ, ಪರ್ಶಿಯಾ ಮತ್ತು ಭಾರತಗಳ 'ಸಮುದ್ರ ದೊರೆ' ಎಂದು ಕರೆದುಕೊಳ್ಳಬಹುದೆಂಬ ಒಪ್ಪಿಗೆ ಪಡೆದರು.

ಭಾರತದಲ್ಲಿ ಪೋರ್ಚುಗೀಸರ ವ್ಯಾಪಾರ, ವಾಣಿಜ್ಯ ಚಟುವಟಿಕೆಗಳು ಅಧಿಕವಾದಂತೆ, ಅವುಗಳ ಮೇಲು ಉಸ್ತುವಾರಿಗಾಗಿಯೇ ಒಬ್ಬ ಅಧಿಕಾರಿಯನ್ನು ನೇಮಿಸಲಾಯಿತು. ಈ ರೀತಿ ಭಾರತಕ್ಕೆ ಬಂದ ಮೊದಲ ಪೋರ್ಚುಗಲ್ ವೈಸರಾಯ್ ಎಂದರೆ ಫ್ರಾನ್ಸಿಸ್ಕೋ-ಡಿ-ಆಲ್ಮಿಡ. ನೌಕಾಬಲವನ್ನು ಹೆಚ್ಚಿಸುವುದರ ಮೂಲಕ ಭಾರತದಲ್ಲಿ ಪೋರ್ಚುಗೀಸರ ವ್ಯಾಪಾರವನ್ನು ವೃದ್ಧಿಸುವುದು ಈತನ ಉದ್ದೇಶವಾಗಿತ್ತು. ಈತ 'ನಾವು ಸಮುದ್ರದಲ್ಲಿ ಪ್ರಬಲವಾಗಿದ್ದರೆ ಮಾತ್ರ ಭಾರತದಲ್ಲಿ ಸ್ಥಿರತೆಯನ್ನು ಪಡೆಯುತ್ತೇವೆ' ಎಂಬ ಇವನ ನೀತಿಯನ್ನೇ 'ಬ್ಲೂ ವಾಟರ್ ಪಾಲಸಿ' ಎಂದು ಕರೆಯಲಾಗಿದೆ.[೪] ಕ್ರಿ.ಶ. ೧೫೦೮ರಲ್ಲಿ ಇವನು ಜಾಮೊರಿನ್ ದೊರೆಯನ್ನು ಸೋಲಿಸಿದನು. ಮುಂದೆ ಭಾರತದಲ್ಲಿ ಪೋರ್ಚುಗೀಸರ ಪ್ರಾಬಲ್ಯಕ್ಕೆ ವಾಸ್ತವವಾಗಿ ಬುನಾದಿ ಹಾಕಿದವನು ಅಲ್ಬುಕರ್ಕ್. ಭಾರತದಲ್ಲಿ ಪೋರ್ಚುಗೀಸರ ವಸಾಹತು ಸಾಮ್ರಾಜ್ಯದ ನಿರ್ಮಾಪಕ ಎಂಬ ಕೀರ್ತಿ ಈತನದು. ವ್ಯಾಪಾರ ವೃದ್ಧಿಗಾಗಿ ವಸಾಹತುಗಳನ್ನು ಹೆಚ್ಚಾಗಿ ಸ್ಥಾಪಿಸುವುದು ಮತ್ತು ಕೋಠಿಗಳನ್ನು ನಿರ್ಮಿಸುವುದು ಇವನ ಉದ್ದೇಶವಾಗಿತ್ತು. ಕ್ರಿ.ಶ. ೧೫೦೯ರಲ್ಲಿ ಪೋರ್ಚುಗೀಸರ ವ್ಯವಹಾರಗಳ ಗವರ್ನರ್ ಆಗಿ ಇವನನ್ನು ನೇಮಿಸಲಾಯಿತು. ಕ್ರಿ.ಶ. ೧೫೧೦ರಲ್ಲಿ ಬಿಜಾಪುರದ ಸುಲ್ತಾನನ ವಶದಲ್ಲಿದ್ದ ಗೋವಾವನ್ನು ವಶಪಡಿಸಿಕೊಂಡನು. ಮುಂದೆ ಗೋವಾ ಪೋರ್ಚುಗೀಸರ ಪೌರ್ವಾತ್ಯ ವಸಾಹತುಗಳ ಮುಖ್ಯ ಆಡಳಿತ ಕೇಂದ್ರವಾಯಿತು. ಕೊಚ್ಚಿನ್‌ನಲ್ಲಿ ಕೋಟೆಯನ್ನು ನಿರ್ಮಿಸಿ, ಗೆದ್ದುಕೊಂಡ ಪ್ರದೇಶಗಳಲ್ಲಿ ಉತ್ತಮ ಆಡಳಿತಕ್ಕಾಗಿ ಪೋರ್ಚುಗೀಸ್ ಅಧಿಕಾರಿಗಳನ್ನೇ ನೇಮಿಸಿದನು. ಮುಂದೆ ಇತರ ಅಧಿಕಾರಿಗಳು ಡಿಯು, ಡಾಮನ್, ಸಾಲ್ಸೆಟ್, ಬೇಸ್ಸಿನ್, ಬೊಂಬಾಯಿ, ಮದ್ರಾಸ್ ಸಮೀಪದ ಸ್ಯಾನ್‌ಥೋಮ್, ಬಂಗಾಳದ ಹೂಗ್ಲಿಗಳು ಪೋರ್ಚುಗೀಸರ ಮುಖ್ಯ ವಸಾಹತುಗಳಾದವು.[೫] ಕರ್ನಾಟಕದಲ್ಲಿ ಮಂಗಳೂರು, ಹೊನ್ನಾವರ, ಕುಂದಾಪುರ, ಕಾರವಾರ, ಭಟ್ಕಳ ಇವು ಪೋರ್ಚುಗೀಸರ ವ್ಯಾಪಾರ ನೆಲೆಗಳಾಗಿದ್ದವು. ಪೋರ್ಚುಗೀಸರು ವಿಜಯನಗರ ಸಾಮ್ರಾಜ್ಯಗಳೊಂದಿಗೆ ಉತ್ತಮ ವ್ಯಾಪಾರ ಸಂಪರ್ಕ ವನ್ನು ಹೊಂದಿದ್ದರು ಹಾಗೂ ಈ ವ್ಯಾಪಾರ ಸಂಬಂಧವು ಪೋರ್ಚುಗೀಸರಿಗೆ ಸಾಕಷ್ಟು ಲಾಭದಾಯಕವಾಗಿತ್ತು. ಸಾಂಬಾರ ಮತ್ತು ಮಸಾಲೆ ವಸ್ತುಗಳ ವ್ಯಾಪಾರಕ್ಕೆ ಹೆಚ್ಚು ಮಹತ್ವ ಕೊಟ್ಟಿದ್ದ ಪೋರ್ಚುಗೀಸರು,

ಕರ್ನಾಟಕದಿಂದ, ಅಕ್ಕಿ, ಸಕ್ಕರೆ, ಕರಿಮೆಣಸು, ಶುಂಠಿ, ಕೊಬ್ಬರಿ, ಮಸಾಲೆ ಪದಾರ್ಥಗಳನ್ನು ತಮ್ಮ ದೇಶಕ್ಕೆ ರವಾನಿಸುತ್ತಿದ್ದರು.[೬]

ಆದರೆ ಕ್ರಿ.ಶ. ೧೭ನೇ ಶತಮಾನದ ಹೊತ್ತಿಗೆ ವಿಜಯನಗರ ಸಾಮ್ರಾಜ್ಯದ ಅವನತಿಯು ಪೋರ್ಚುಗೀಸರ ವ್ಯಾಪಾರಕ್ಕೆ ಹಿನ್ನಡೆಯಾಗಿ, ಮೊಗಲ್ ದೊರೆಗಳ ಪ್ರತಿರೋಧದ ಜೊತೆಗೆ ಡಚ್ಚರೂ ಸಹ ಭಾರತದಲ್ಲಿ ವಸಾಹತು ಸ್ಥಾಪನೆಗೆ ಪೈಪೋಟಿಗಿಳಿದಿದ್ದರಿಂದ, ಕ್ರಮೇಣ ಪೋರ್ಚುಗೀಸರು ತಮ್ಮ ವಸಾಹತುಗಳನ್ನು ಕಳೆದುಕೊಳ್ಳಬೇಕಾಯಿತು. ಡಿಯು, ಡಾಮನ್ ಮತ್ತು ಗೋವಾಗಳು ಮಾತ್ರ ಅವರಲ್ಲಿ ಉಳಿದವು. ಕ್ರಿ.ಶ. ೧೯೬೧ರವರೆಗೂ ಇವು ಪೋರ್ಚುಗೀಸರ ವಶದಲ್ಲಿದ್ದವು. ಈ ರೀತಿ ಭಾರತಕ್ಕೆ ಆಗಮಿಸಿದ ಯುರೋಪಿಯನ್ನರಲ್ಲಿ ಪೋರ್ಚುಗೀಸರೆ ಮೊದಲಿಗರಾಗಿ ವ್ಯಾಪಾರದ ಜೊತೆಗೆ ವಸಾಹತುಗಳ ಸ್ಥಾಪನೆ ಮಾಡಿ, ಆಳ್ವಿಕೆ ನಡೆಸಿ ಕೊನೆಯವರಾಗಿ ಭಾರತದಿಂದ ನಿರ್ಗಮಿಸಿದರು.

ಪೋರ್ಚುಗೀಸರ ನಂತರ ವ್ಯಾಪಾರಕ್ಕಾಗಿ ಭಾರತಕ್ಕೆ ಆಗಮಿಸಿದ ಯುರೋಪಿಯನ್ನರೆಂದರೆ ಡಚ್ಚರು. ಮೊದಲು ಆಗ್ನೇಯ ಏಷ್ಯಾದ ಸಂಬಾರ ಪದಾರ್ಥಗಳ ಮಾರುಕಟ್ಟೆಗಳಿಗೆ ನೇರ ಪ್ರವೇಶ ಪಡೆಯುವ ದೃಷ್ಟಿಯಿಂದ ಕ್ರಿ.ಶ. ೧೫೯೬ರಲ್ಲಿ ಸಮುದ್ರಯಾನಗಳನ್ನು ಕೈಗೊಂಡರು. ಕ್ರಿ.ಶ. ೧೬೦೨ರಲ್ಲಿ 'ಡಚ್ ಈಸ್ಟ್ ಇಂಡಿಯಾ ಕಂಪನಿ'ಯು ಸ್ಥಾಪಿತವಾಗಿ, ಪೂರ್ವದ ದೇಶಗಳೊಂದಿಗೆ ವ್ಯಾಪಾರ ಮಾಡುವ ಏಕಸ್ವಾಮ್ಯವನ್ನು ಪಡೆಯಿತು. ಕಂಪನಿಯು ತನ್ನ ವ್ಯಾಪಾರವನ್ನು ಸಿಲೋನ್, ಜಾವಾ, ಸುಮಾತ್ರ, ಮಲಕ್ಕಾ ದ್ವೀಪಗಳೊಡನೆ ಆರಂಭಿಸಿ ಕ್ರಮೇಣ ಭಾರತದ ಕೋರಮಂಡಲ ತೀರ, ಗುಜರಾತ್, ಗಂಗಾ ಕಣಿವೆಯ ಒಳಭಾಗವನ್ನು ಪ್ರವೇಶಿಸಿ, ಒರಿಸ್ಸಾಗಳಲ್ಲಿ ಕೋಠಿಗಳನ್ನು ಸ್ಥಾಪಿಸಿದರು. ಪೋರ್ಚುಗೀಸರಿಗೆ ಪ್ರಬಲ ಪೈಪೋಟಿ ನೀಡಿದ ಡಚ್ಚರು, ಕೆಲವೇ ವರ್ಷಗಳಲ್ಲಿ ಮಚಲಿಪಟ್ಟಣ, ಪುಲಿಕಾಟ್, ಸೂರತ್ ಕಾರೈಕಲ್, ಕಲ್ಲಿಕೋಟೆ, ನಾಗಪಟ್ಟಣಂ, ಚಿನ್ಸುರಗಳಲ್ಲಿ ಕೋಠಿಗಳನ್ನು ಸ್ಥಾಪಿಸಿದರು. ಕ್ರಿ.ಶ. ೧೬೧೦ರಲ್ಲಿ ಪುಲಿಕಾಟ್ ಇವರ ರಾಜಧಾನಿಯಾಯಿತು. ಡಚ್ಚರು ತಮ್ಮ ವಸಾಹತುಗಳ ಮೂಲಕ ಕಚ್ಚಾ ರೇಷ್ಮೆ, ನೀಲಿ, ಪೆಟ್ಲುಪ್ಪು, ಉಪ್ಪು, ಅಕ್ಕಿ, ಬಟ್ಟೆ, ಸಾಂಬಾರ ಪದಾರ್ಥಗಳು, ಅಫೀಮು ಮುಂತಾದವುಗಳನ್ನು ಭಾರೀ ಪ್ರಮಾಣದಲ್ಲಿ ತಮ್ಮ ರಾಷ್ಟ್ರಕ್ಕೆ ರಫ್ತು ಮಾಡುತ್ತಿದ್ದರು. ಕ್ರಮೇಣ ಡಚ್ಚರು ಬ್ರಿಟಿಷರೊಡನೆ ಸಂಘರ್ಷಕ್ಕಿಳಿದರಾದರೂ, ಬ್ರಿಟಿಷರೊಡನೆ ಪೈಪೋಟಿ ನಡೆಸಲಾಗದೆ, ಕ್ರಿ.ಶ. ೧೭೫೯ರಲ್ಲಿ ರಾಬರ್ಟ್ ಕ್ಲೈವ್‌ನಿಂದ ಬಿಧಾ್ರ ಕದನದಲ್ಲಿ ಸೋತು ಡಚ್ಚರು ಭಾರತದಿಂದ ನಿರ್ಗಮಿಸಿದರು.[೭]

ಪೌರ್ವಾತ್ಯ ರಾಷ್ಟ್ರಗಳಲ್ಲಿ ವ್ಯಾಪಾರದ ಉದ್ದೇಶಕ್ಕಾಗಿ ಕೊನೆಯವರಾಗಿ ಬಂದವರೆಂದರೆ ಫ್ರೆಂಚರು. ಫ್ರಾನ್ಸಿನ ದೊರೆ ೧೪ನೇ ಲೂಯಿ ಮತ್ತು ಅವನ ಅರ್ಥ ಸಚಿವ ಕೋಲ್ಬರ್ಟ್ ಸೇರಿ ಕ್ರಿ.ಶ. ೧೬೬೪ರಲ್ಲಿ 'ಫ್ರೆಂಚ್ ಈಸ್ಟ್ ಇಂಡಿಯ ಕಂಪನಿಯನ್ನು' ಸ್ಥಾಪಿಸಿದರು. ಕ್ರಿ.ಶ. ೧೬೬೮ರಲ್ಲಿ ಭಾರತದಲ್ಲಿ ಮೊದಲಿಗೆ ಸೂರತ್‌ನಲ್ಲಿ ತಮ್ಮ ವ್ಯಾಪಾರ ಕೋಠಿಯನ್ನು ಸ್ಥಾಪಿಸಿದರು. ಕ್ರಿ.ಶ. ೧೬೬೯ರಲ್ಲಿ ಗೋಲ್ಕಂಡ ಸುಲ್ತಾನನ ಅನುಮತಿ ಪಡೆದು ಮಚಲಿಪಟ್ಟಣಂನಲ್ಲಿ ಮತ್ತೊಂದು ವ್ಯಾಪಾರ ಕೋಠಿಯನ್ನು ತೆರೆದರು. ಕ್ರಿ.ಶ.

೧೬೭೪ರಲ್ಲಿ ಫ್ರಾಂಕೋಯಿಸ್ ಮಾರ್ಟಿನ್‌ನು ಬಿಜಾಪುರದ ಸುಲ್ತಾನ ಷೇರ್‌ಖಾನ್ ಲೂದಿಯಿಂದ ವಾಲಿಕರಿಡಪುರಂ ಬಳಿ ಒಂದು ಗ್ರಾಮವನ್ನು ದಾನ ಪಡೆದು ಒಂದು ಕೋಠಿ ಸ್ಥಾಪಿಸಿದನು. ಇದೇ ಮುಂದೆ ಪಾಂಡಿಚೇರಿ ಎಂದಾಯಿತಲ್ಲದೆ ಕ್ರಿ.ಶ. ೧೬೭೪ರಲ್ಲಿ ಪಾಂಡಿಚೇರಿಯು ಫ್ರೆಂಚರ ರಾಜಧಾನಿ ಯಾಯಿತು. ಹೀಗಾಗಿ 'ಮಾರ್ಟಿನನ್ನು ಫ್ರೆಂಚ್ ವಸಾಹತುಗಳ ನಿರ್ಮಾಪಕ' ಎಂದು ಕರೆಯಲಾಗಿದೆ.[೮] ನಂತರ ಚಂದ್ರನಾಗೂರ್, ಕಾರೈಕಲ್, ಮಾಹೆ, ಬಾಲಸೊರಾ, ಕಾಸಿಂಬಜಾರ್, ಹೂಗ್ಲಿ, ಪಾಂಡಿಚೇರಿ, ಯಾನಂ, ಗೋಲ್ಕಂಡ, ಮಚಲಿಪಟ್ಟಣಂ, ಇವರ ವ್ಯಾಪಾರ ಕೇಂದ್ರಗಳಾದವು. ಕ್ರಿ.ಶ. ೧೭೬೪ರಲ್ಲಿ ಡೂಪ್ಲೆ ಪಾಂಡಿಚೇರಿಯ ಗವರ್ನರ್ ಜನರಲ್ ಆಗಿ ಬಂದನು. ಮಹತ್ವಾಕಾಂಕ್ಷಿಯಾಗಿದ್ದ ಈತನು ಭಾರತದಲ್ಲಿ ಫ್ರೆಂಚ್ ಸಾಮ್ರಾಜ್ಯ ಸ್ಥಾಪಿಸುವ ಘನ ಉದ್ದೇಶ ಹೊಂದಿದ್ದನು. ಹೀಗಾಗಿ ಭಾರತದ ಸ್ವಾಮ್ಯಕ್ಕಾಗಿ ದಖನ್ನಿನಲ್ಲಿ ಇಂಗ್ಲಿಷರು ಮತ್ತು ಫ್ರೆಂಚರ ನಡುವಣ ಹೋರಾಟಗಳು ಆರಂಭವಾದವು. ಈ ಹೋರಾಟವನ್ನೇ 'ಕರ್ನಾಟಕದ ಯುದ್ಧಗಳು' ಎಂದು ಕರೆಯಲಾಗಿದೆ.[೯] (ಕೋರಮಂಡಲದ ಕರಾವಳಿ ಮತ್ತು ಅದರ ಹಿನ್ನಾಡಿನ ಪ್ರದೇಶಕ್ಕೆ ಕರ್ನಾಟಕ ಎಂಬುದಾಗಿ ಯುರೋಪಿಯನ್ನರು ಕರೆದಿದ್ದರು.) ಮೊದಲೆರೆಡು ಕರ್ನಾಟಕ ಯುದ್ಧಗಳಲ್ಲಿ ಫ್ರೆಂಚರು ಸೋಲನ್ನನುಭವಿಸಿದ್ದರಿಂದ ಡೂಪ್ಲೆ ವಾಪಸ್ ಫ್ರಾನ್ಸ್‌ಗೆ ಹಿಂತಿರುಗಿದನು. ಕೊನೆಗೆ ಕ್ರಿ.ಶ. ೧೭೬೩ರಲ್ಲಿ ಮೂರನೇ ಕರ್ನಾಟಕ ಯುದ್ಧದಲ್ಲಿ ಫ್ರೆಂಚರು ಸಂಪೂರ್ಣವಾಗಿ ಸೋತು ಭಾರತದಿಂದಲೇ ಹೊರಹೋಗಬೇಕಾಯಿತು. ಫ್ರೆಂಚರ ವಿಫಲತೆಗೆ ಕಾರಣಗಳಲ್ಲಿ, ಮೊದಲನೆಯದಾಗಿ, ಫ್ರೆಂಚರ ಬಳಿ ಪ್ರಬಲವಾದ ನೌಕಾಶಕ್ತಿ ಇರಲಿಲ್ಲ. ಫ್ರಾನ್ಸ್‌ನಲ್ಲಿ ಲೂಯಿ ಅರಸರ ಅಸಮರ್ಥ ಆಳ್ವಿಕೆಯಿಂದ ಸದಾ ಆರ್ಥಿಕ ಮುಗ್ಗಟ್ಟಿಗೆ ಸಿಲುಕಿದ್ದರಿಂದ ಭಾರತದ ಕಡೆ ಹೆಚ್ಚಿನ ಗಮನ ಕೊಡಲಾಗಲಿಲ್ಲ.[೧೦]

ಕರ್ನಾಟಕದಲ್ಲಿ ಹೈದರ್‌ಅಲಿ ಮತ್ತು ಟಿಪ್ಪುಸುಲ್ತಾನರು ಫ್ರೆಂಚರೊಂದಿಗೆ ಉತ್ತಮ ಸಂಬಂಧವನ್ನು ಹೊಂದಿದ್ದರು. ಬ್ರಿಟಿಷರ ಯುದ್ಧ ತಂತ್ರವನ್ನು ಅರಿತಿದ್ದ ಹೈದರ್‌ಅಲಿ ಬ್ರಿಟಿಷರನ್ನು ಎದುರಿಸಲು ಫ್ರೆಂಚರೊಂದಿಗೆ ಉತ್ತಮ ಸಂಬಂಧ ಹೊಂದಿದ್ದನು. ಫ್ರೆಂಚ್ ಯುದ್ಧ ತಂತ್ರಜ್ಞರನ್ನು ಕರೆಸಿ ತನ್ನ ಸೈನ್ಯಕ್ಕೆ ತರಬೇತಿ ನೀಡಿದ್ದನು. ಕ್ರಿ.ಶ. ೧೭೮೦ರಲ್ಲಿ ಯುರೋಪಿನಲ್ಲಿ ಫ್ರೆಂಚರಿಗೂ, ಬ್ರಿಟಿಷರಿಗೂ ಯುದ್ಧ ಆರಂಭವಾದಾಗ, ಭಾರತದಲ್ಲಿ ಬ್ರಿಟಿಷರು, ಫ್ರೆಂಚರ ನೆಲೆಯಾಗಿದ್ದ 'ಮಾಹೆ'ಯನ್ನು ಆಕ್ರಮಿಸಲು ಯತ್ನಿಸಿದಾಗ ಹೈದರ್‌ಅಲಿ ಬ್ರಿಟಿಷರಿಗೆ ಮಾಹೆಯನ್ನು ಆಕ್ರಮಿಸದಂತೆ ಎಚ್ಚರಿಕೆ ನೀಡಿ ಫ್ರೆಂಚರ ಪರವಾಗಿ ನಿಂತನು.

ಹೈದರ್‌ಅಲಿಯ ಮಗ ಟಿಪ್ಪುಸುಲ್ತಾನನು ಸಹ ಫ್ರೆಂಚರೊಂದಿಗೆ ಉತ್ತಮ ಸಂಬಂಧವನ್ನು ಹೊಂದಿದ್ದನು. ಕ್ರಿ.ಶ. ೧೭೮೪ರಲ್ಲಿ ಟಿಪ್ಪುಸುಲ್ತಾನನು ಬ್ರಿಟಿಷರ ವಿರುದ್ಧ ಹೋರಾಟಕ್ಕಿಳಿದಾಗ, ಫ್ರಾನ್ಸಿನ ೧೬ನೇ ಲೂಯಿಯ ಸಹಾಯವನ್ನು ಯಾಚಿಸಿ ಫ್ರಾನ್ಸ್‌ಗೆ ಒಬ್ಬ ರಾಯಭಾರಿಯನ್ನು ಕಳುಹಿಸಿದ್ದನು. ಆದರೆ ಆಂತರಿಕ ಕ್ರಾಂತಿ ಮತ್ತು ಆರ್ಥಿಕ ಮುಗ್ಗಟ್ಟನ್ನು ಎದುರಿಸುತ್ತಿದ್ದ ಲೂಯಿ, ಟಿಪ್ಪುಸುಲ್ತಾನನ ಸಹಾಯಕ್ಕೆ ತನ್ನ ಸೈನ್ಯವನ್ನು ಭಾರತಕ್ಕೆ ಕಳುಹಿಸಲಾಗಲಿಲ್ಲ. ಬ್ರಿಟಿಷರ ವಿರುದ್ಧದ ತನ್ನ ಹೋರಾಟಕ್ಕೆ

ಬೆಂಬಲ ಯಾಚಿಸಿ ಟಿಪ್ಪುಸುಲ್ತಾನನು ಫ್ರಾನ್ಸಿನ ನೆಪೋಲಿಯನ್‌ನೊಂದಿಗೂ ಸಂಧಾನ ನಡೆಸಿದ್ದನು. ಆಗ ಬ್ರಿಟಿಷರ ವಿರುದ್ಧ ಈಜಿಪ್ಟಿನಲ್ಲಿ ಹೋರಾಡುತ್ತಿದ್ದ ನೆಪೋಲಿಯನ್ ಟಿಪ್ಪುವಿನ ಸಹಾಯಕ್ಕೆ ಬರುವುದಾಗಿ ಒಪ್ಪಿಕೊಂಡಿದ್ದನು. ಆದರೆ 'ನೈಲ್ ನದಿ' ಕದನದಲ್ಲಿ ಬ್ರಿಟಿಷ್ ಅಡ್ಮಿರಲ್ ನೆಲ್ಸನ್‌ನಿಗೆ ನೆಪೋಲಿಯನ್ ಸೋತು ಹೋಗಿದ್ದರಿಂದ, ನೆಪೋಲಿಯನ್ ಭಾರತಕ್ಕೆ ಬರುವ ಯೋಜನೆಯನ್ನು ಕೈಬಿಡಬೇಕಾಯಿತು.[೧೧]

### ಇಂಗ್ಲಿಷ್ ಈಸ್ಟ್ ಇಂಡಿಯಾ ಕಂಪನಿ

ಭಾರತಕ್ಕೆ ಆಗಮಿಸಿದ ಯುರೋಪಿಯನ್ನರಲ್ಲಿ ಅತ್ಯಂತ ಪ್ರಮುಖರಾದವರೆಂದರೆ ಇಂಗ್ಲಿಷರು. ಏಕೆಂದರೆ ಭಾರತಕ್ಕೆ ಬಂದು ಎಲ್ಲಾ ವಿದೇಶಿಯರನ್ನು ಹೊರಹಾಕಿ ಇಡೀ ಭಾರತವನ್ನೇ ಆಕ್ರಮಿಸಿ, ಸಾಮ್ರಾಜ್ಯಶಾಹಿಗಳಾಗಿ ಮೆರೆದ ಕೀರ್ತಿ ಇವರದು. ಇಂಗ್ಲಿಷ್ ವರ್ತಕರು ಪೌರ್ವಾತ್ಯ ದೇಶಗಳೊಡನೆ ವ್ಯಾಪಾರ ಸಂಪರ್ಕ ಹೊಂದಲು ಮೊದಲಿನಿಂದಲೂ ಆಸಕ್ತಿ ಹೊಂದಿದ್ದರು. ಭಾರತದ ವಸ್ತುಗಳಿಗೆ ಇಂಗ್ಲೆಂಡಿನಲ್ಲಿ ಅಪಾರ ಬೇಡಿಕೆ ಇತ್ತು. ಪೋರ್ಚುಗೀಸರು ಭಾರತದೊಂದಿಗೆ ವ್ಯಾಪಾರ ಮಾಡಿ ಸಂಪತ್ತನ್ನು ಗಳಿಸಿದ್ದು, ಬ್ರಿಟಿಷರಿಗೆ ಪ್ರೇರಣೆ ನೀಡಿತು. ಇದೇ ಸಮಯದಲ್ಲಿ ಇಂಗ್ಲೆಂಡಿನ ನಾವಿಕ 'ಡ್ರೇಕನು ವಿಶ್ವಪರ್ಯಟನೆ' ಮಾಡಿದ್ದು ಮತ್ತು ಕ್ರಿ.ಶ. ೧೫೮೭ರಲ್ಲಿ ಇಂಗ್ಲಿಷರು ಸ್ಪಾನಿಷ್ ಆರ್ಮಿಡಾದ ಮೇಲೆ ನೌಕಾ ದಿಗ್ವಿಜಯ ಪಡೆದದ್ದು, ಇಂಗ್ಲಿಷರಿಗೆ ಸ್ಫೂರ್ತಿದಾಯಕವಾಗಿದ್ದವಲ್ಲದೇ, ಆಂಗ್ಲರ ಗಮನವನ್ನು ಭಾರತದತ್ತ ಸೆಳೆದವು. ಭಾರತದೊಂದಿಗೆ ನೇರವಾಗಿ ವ್ಯಾಪಾರ ಮಾಡಲು ಲಂಡನ್ನಿನ ವರ್ತಕರು ಒಂದು ಸಂಘವನ್ನು ಕಟ್ಟಿಕೊಂಡು ಭಾರತದತ್ತ ನೌಕಾಯಾನ ಕೈಗೊಂಡರು. ಕ್ರಿ.ಶ. ೧೫೯೯ರಲ್ಲಿ ಲಂಡನ್‌ನ ಸಾಹಸಿ ವರ್ತಕ ಜಾನ್‌ಮಿಲ್ಡ್‌ನ್‌ಹಾಲ್ ಮೆಡಿಟರೇನಿಯನ್ ಸಮುದ್ರ ಮಾರ್ಗವಾಗಿ ಭಾರತವನ್ನು ತಲುಪಿದನು. ಕ್ರಿ.ಶ. ೧೬೦೦ ಡಿಸೆಂಬರ್ ೩೧ರಂದು ಇಂಗ್ಲೆಂಡ್ ಭಾರತದಲ್ಲಿ ವ್ಯಾಪಾರ ಬೆಳವಣಿಗೆಯತ್ತ ಮೊದಲ ಹೆಜ್ಜೆ ಇಟ್ಟಿತು. ಅಂದರೆ ಆ ದಿನದಂದು, ಇಂಗ್ಲೆಂಡಿನ ಮಹಾರಾಣಿ ೧ನೇ ಎಲಿಜಬೆತ್. ಏಷ್ಯಾದ ದೇಶಗಳೊಂದಿಗೆ ವ್ಯಾಪಾರ ಮಾಡುವ ಸನ್ನದನ್ನು, ಈಸ್ಟ್ ಇಂಡಿಯಾ ಕಂಪನಿಗೆ ನೀಡಿದಳು. ಈ ಅನುಮತಿಯು ೧೫ ವರ್ಷಕ್ಕೆ ಸೀಮಿತವಾಗಿತ್ತು.[೧೨]

ಕ್ರಿ.ಶ. ೧೬೦೮ರಲ್ಲಿ ಕ್ಯಾಪ್ಟನ್ ಹಾಕಿನ್ಸ್‌ನು ಜಹಾಂಗೀರನ ಆಸ್ಥಾನಕ್ಕೆ ಬಂದು, ಸೂರತ್‌ನಲ್ಲಿ ವ್ಯಾಪಾರವನ್ನು ಆರಂಭಿಸಲು ಅನುಮತಿ ಕೇಳಿದನು. ಆದರೆ ಸೂರತ್ ವರ್ತಕರ ವಿರೋಧ ಮತ್ತು ಪೋರ್ಚುಗೀಸರ ಕಾರ್ಯಾಚರಣೆಗಳಿಂದ ಮನವಿಯನ್ನು ಜಹಂಗೀರ್ ತಳ್ಳಿ ಹಾಕಿದ್ದನು. ಕ್ರಿ.ಶ. ೧೬೧೩ರಲ್ಲಿ ಸೂರತ್‌ನಲ್ಲಿ ಒಂದು ಖಾಯಂ ವ್ಯಾಪಾರಿ ಕೋಠಿಯನ್ನು ನಿರ್ಮಿಸಲು ಇಂಗ್ಲಿಷರಿಗೆ ಮೊಗಲ್ ದೊರೆ ಜಹಂಗೀರ್ ರಹದಾರಿ ಪತ್ರ (ಫರ್ಮಾನ್) ನೀಡಿದ. ಹೀಗಾಗಿ ಮೊಗಲ್ ದೊರೆಯೊಂದಿಗೆ ವ್ಯಾಪಾರ ಒಪ್ಪಂದ ಮಾಡಿಕೊಳ್ಳುವ ಉದ್ದೇಶದಿಂದ ಇಂಗ್ಲೆಂಡಿನ ರಾಜ ೧ನೇ ಜೇಮ್ಸ್‌ನು ಕ್ರಿ.ಶ. ೧೬೧೫ರಲ್ಲಿ 'ಸರ್‌ಥಾಮಸ್‌ರೋ' ಎಂಬ ರಾಯಭಾರಿಯನ್ನು ಜಹಂಗೀರನ ಆಸ್ಥಾನಕ್ಕೆ ಕಳುಹಿಸಿದನು. ಸರ್‌ಥಾಮಸ್‌ರೋ ಮೂರು ವರ್ಷಗಳ ಕಾಲ ಜಹಾಂಗೀರನ ಆಸ್ಥಾನದಲ್ಲಿದ್ದು, ಕಂಪನಿಗಾಗಿ ಹಲವಾರು

ಸೌಲಭ್ಯಗಳನ್ನು ಮತ್ತು ಅವನ ಸಾಮ್ರಾಜ್ಯಗಳಲ್ಲಿ ಕೋಠಿಗಳ ಸ್ಥಾಪನೆಗೆ ಅನುಮತಿ ಗಳಿಸಿಕೊಂಡನು. ಈತನ ಪ್ರಯತ್ನದಿಂದ ಕ್ರಿ.ಶ. ೧೬೧೮ರ ವೇಳೆಗೆ ಬ್ರಿಟಿಷರು ಸೂರತ್, ಆಗ್ರಾ, ಅಹಮದಬಾದ್, ಬ್ರೋಚ್‌ಗಳಲ್ಲಿ ವ್ಯಾಪಾರ ಕೋಠಿಗಳನ್ನು ಸ್ಥಾಪಿಸಿದರು. ಇವುಗಳನ್ನು ಸೂರತ್ ಕೋಠಿಯ ಅಧ್ಯಕ್ಷ ಹಾಗೂ ಕೌನ್ಸಿಲ್‌ನ ಅಧಿಕಾರಕ್ಕೆ ವಹಿಸಲಾಯಿತು. ಕಂಪನಿಯ ವಾಣಿಜ್ಯ ನಿಯಂತ್ರಣವು ಇವರ ಕೈಯಲ್ಲಿತ್ತು. ವಿಜಯನಗರ ಸಾಮ್ರಾಜ್ಯದ ಅವನತಿಯ ನಂತರ ಅದರ ಪ್ರತಿನಿಧಿಯಾಗಿದ್ದ ಚಂದ್ರಗಿರಿಯ ರಾಜನಿಂದ ಫ್ರಾನ್ಸಿಸ್‌ಡೇ ಎಂಬುವವನು ಕ್ರಿ.ಶ. ೧೬೩೯ರಲ್ಲಿ ಮದ್ರಾಸ್‌ನ್ನು ಪಡೆದು ಅಲ್ಲಿ ಪೋರ್ಟ್ ಸೇಂಟ್ ಜಾರ್ಜ್ ಎನ್ನುವ ಬಲವಾದ ಕೋಟೆಯನ್ನು ಕಟ್ಟಿದನು. ಮುಂದೆ ಇಂಗ್ಲಿಷ್ ವಸಹಾತುಗಳ ಪ್ರಧಾನ ಕೇಂದ್ರವಾಗಿ ಪೋರ್ಟ್ ಸೇಂಟ್ ಜಾರ್ಜ್ ಸ್ಥಾನಗಳಿಸಿಕೊಂಡಿತು.[೧೩] ನಂತರ ಕ್ರಿ.ಶ. ೧೬೫೧ರಲ್ಲಿ ಬ್ರಿಡ್ಜ್‌ಮನ್‌ನ ನೇತೃತ್ವದಲ್ಲಿ ಹೂಗ್ಲಿಯಲ್ಲಿ ಕೋಠಿಯನ್ನು ನಂತರ ಪಾಟ್ನಾ, ಖಾಸಿಂ ಬಜಾರ್‌ಗಳಲ್ಲಿ ಕೋಠಿಗಳನ್ನು ಕಟ್ಟಲಾಯಿತು. ಕ್ರಿ.ಶ. ೧೬೫೮ರ ಹೊತ್ತಿಗೆ ಬಂಗಾಳ, ಬಿಹಾರ, ಒರಿಸ್ಸಾ ಹಾಗೂ ಕೋರಮಂಡಲದ ಕರಾವಳಿಯಲ್ಲಿನ ಎಲ್ಲ ವಸಾಹತುಗಳನ್ನು ಪೋರ್ಟ್ ಸೇಂಟ್ ಜಾರ್ಜ್‌ನ ಅಧೀನ ದಲ್ಲಿಡಲಾಯಿತು.

ಕ್ರಿ.ಶ. ೧೬೬೮ರಲ್ಲಿ ಇಂಗ್ಲೆಂಡಿನ ರಾಜ ೨ನೇ ಚಾರ್ಲ್ಸ್‌ನು ಪೋರ್ಚುಗೀಸ್ ರಾಜಕುಮಾರಿ ಕ್ಯಾಥರೀನ್‌ಳನ್ನು ವಿವಾಹವಾದಾಗ ಪೋರ್ಚುಗೀಸ್ ದೊರೆಯಿಂದ ವರದಕ್ಷಿಣೆ ರೂಪದಲ್ಲಿ ಬಂದ ಬೊಂಬಾಯಿಯನ್ನು ವರ್ಷಕ್ಕೆ ೧೦ ಪೌಂಡ್‌ಗಳ ಬಾಡಿಗೆಯ ಆಧಾರದ ಮೇಲೆ ಕಂಪನಿಗೆ ವಹಿಸಿಕೊಟ್ಟನು. ಬೊಂಬಾಯಿ ಕ್ರಮೇಣ ಅಭಿವೃದ್ಧಿಯಾಗಿ ಪಶ್ಚಿಮ ಕರಾವಳಿಯಲ್ಲಿ ಆಂಗ್ಲರ ಪ್ರಮುಖ ನೆಲೆಯಾಯಿತು. ಬ್ರಿಟಿಷರು ಈ ರೀತಿ ಭಾರತದಲ್ಲಿ ವ್ಯಾಪಾರ ಕೋಠಿಗಳನ್ನು ಸ್ಥಾಪಿಸುವುದರ ಜೊತೆಗೆ, ಆದ ಇನ್ನೊಂದು ಮಹತ್ವದ ಬೆಳವಣಿಗೆಯೆಂದರೆ ಕ್ರಿ.ಶ. ೧೬೬೧ರಲ್ಲಿ ಇಂಗ್ಲೆಂಡ್ ದೊರೆ ೨ನೇ ಚಾರ್ಲ್ಸ್‌ನು ಕಂಪನಿಗೆ ನೂತನ ಶಾಸನವನ್ನು ಪಾಲಿಸಿದನು. ಇದರ ಅನ್ವಯ ಕಂಪನಿಯು ತನ್ನ ನೆಲೆಗಳ ರಕ್ಷಣೆಗಾಗಿ ಯುದ್ಧ ನೌಕೆಗಳನ್ನು, ಸೈನ್ಯ ಮತ್ತು ಶಸ್ತ್ರಾಸ್ತ್ರಗಳನ್ನು ಹೊಂದಲು ಅನುಮತಿ ನೀಡಲಾಯಿತು. ಮುಂದೆ ೧೬೮೩ರಲ್ಲಿ ಚಾರ್ಟರ್ ಕಾಯ್ದೆ ಅನ್ವಯ ಭಾರತದಲ್ಲಿ ಕಂಪನಿಯು ದಾಳಿ ಮಾಡುವ, ಶಾಂತಿಯನ್ನು ಏರ್ಪಡಿಸುವ, ಸೈನ್ಯ ಮತ್ತು ಕೋಟೆಗಳನ್ನು ಕಟ್ಟುವ ಸಂಪೂರ್ಣ ಅಧಿಕಾರ ಪಡೆಯಿತು.[೧೪] ಇದೇ ಸಮಯದಲ್ಲಿ ಭಾರತದಲ್ಲಿ ತಲೆದೋರಿದ್ದ ರಾಜಕೀಯ ಅವ್ಯವಸ್ಥೆ ಬದಲಾಗುತ್ತಿದ್ದ ಪರಿಸ್ಥಿತಿಯಿಂದ ಈ ಕಾಯ್ದೆ ಸಹಾಯಕವಾಯಿತಲ್ಲದೇ, ಕಂಪನಿಯ ನೀತಿ-ಧೋರಣೆಗಳು ಬದಲಾದವು. ಹೀಗೆ ಇಲ್ಲಿನ ಅವ್ಯವಸ್ಥೆಗಳ ಲಾಭ ಪಡೆದ ಕಂಪನಿಯು ಪ್ರದೇಶಗಳನ್ನು ಸ್ವಾಧೀನಪಡಿಸಿಕೊಳ್ಳುವ ಅಧಿಕಾರಾಕಾಂಕ್ಷೆ ಸಂಸ್ಥೆಯಾಗಿ ಪರಿವರ್ತನೆಗೊಂಡಿತು. ಕೆಲವೇ ವರ್ಷಗಳಲ್ಲಿ ಕಂಪನಿಯ ನೀತಿಯಲ್ಲಿನ ಈ ಬದಲಾವಣೆಯನ್ನು ಡೈರಕ್ಟರುಗಳು ಅನುಮೋದಿಸಿದರು.

ಕ್ರಿ.ಶ. ೧೬೯೦ರ ಸುಮಾರಿಗೆ ಹೂಗ್ಲಿ ನದಿ ತೀರದಲ್ಲಿ ಸುತಮತಿ, ಕಾಲಿಕಟ್, ಗೋವಿಂದಪುರ ಎಂಬ ಹಳ್ಳಿಗಳನ್ನು ಜಮೀನ್ದಾರರಿಂದ ಕೊಂಡುಕೊಂಡಿತು. ಈ ಹಳ್ಳಿಗಳ ಸುತ್ತಲೂ ಕಲ್ಕತ್ತ ಮಹಾನಗರ

ನಿರ್ಮಾಣಗೊಂಡಿತು. ಅಲ್ಲಿಯೇ ಫೋರ್ಟ್ ವಿಲಿಯಂ ಕೋಟೆಯನ್ನು ನಿರ್ಮಿಸಲಾಯಿತು. ಇದು ಪೂರ್ವ ಕೋಠಿಗಳ ಕೇಂದ್ರವಾಗಿದ್ದಲ್ಲದೆ ೧೯೧೧ರವರೆಗೆ ಬ್ರಿಟಿಷರ ಭಾರತದ ರಾಜಧಾನಿಯಾಗಿ ಮುಂದುವರೆಯಿತು.[೧೫] ಕ್ರಿ.ಶ. ೧೭೧೭ರಲ್ಲಿ ಮೊಗಲ್ ಸಾಮ್ರಾಟ ಫರುಕ್‌ಷಿಯರ್ ಕಂಪನಿಗೆ ಅನೇಕ ರಿಯಾಯಿತಿಗಳನ್ನು ನೀಡಿದ. ಕಂಪನಿಗೆ ಬಂಗಾಲದಲ್ಲಿ ಸುಂಕರಹಿತ ವ್ಯಾಪಾರಕ್ಕೆ ಅನುಮತಿ ನೀಡಿದ. ಕಂಪನಿ ವಾರ್ಷಿಕವಾಗಿ ಕೊಡುತ್ತಿದ್ದ ೨೦೦೦ ರೂ. ತೆರಿಗೆಯನ್ನು ರದ್ದುಪಡಿಸಿದ. ಈ ರೀತಿಯ ವ್ಯಾಪಾರ ಭಾರತದ ಆರ್ಥಿಕ ವ್ಯವಸ್ಥೆಗೆ ಹೊಸದಾಯಿತು. ನಿರ್ದಿಷ್ಟ ಪ್ರದೇಶಗಳಲ್ಲಿ ನೈಸರ್ಗಿಕವಾಗಿ ದೊರೆಯುವ ಸಂಪನ್ಮೂಲಗಳ ಕ್ರೋಢೀಕರಣಕ್ಕಾಗಿ ಯುರೋಪಿಯನ್ನರು ಆಯಕಟ್ಟಿನ ಸ್ಥಳಗಳಲ್ಲಿ ಕೋಟೆಗಳನ್ನು ಕಟ್ಟಿಕೊಂಡರು. ಈ ಪರಿಸ್ಥಿತಿಯೇ ಬರುಬರುತ್ತ ಗಟ್ಟಿಯಾಗಿ ತಮ್ಮದೇ ಆದ ಸಾಮ್ರಾಜ್ಯಶಾಹಿತ್ವವನ್ನು ಸ್ಥಾಪಿಸಬಹುದೆಂಬ ತೀರ್ಮಾನಕ್ಕೆ ಇಂಗ್ಲಿಷರು ಬಂದರು. ದೇಶೀಯ ಅರಸರು ದೂರದೃಷ್ಟಿತ್ವದ ಕೊರತೆಯಿಂದಾಗಿ ಮುಂದೊದಗಬಹುದಾದ ಪರಿಣಾಮಗಳ ಬಗ್ಗೆ ಚಿಂತಿಸಲಿಲ್ಲ. ಇದರ ಪರಿಣಾಮವೇ ಬ್ರಿಟಿಷ್ ಸಾಮ್ರಾಜ್ಯಶಾಹಿ ಧೋರಣೆ ಅನುಷ್ಠಾನಗೊಂಡಿರುವುದು.

ವಸಾಹತುಪೂರ್ವ ರಾಜಕೀಯ ಸ್ಥಿತಿಗತಿಗಳ ಬಗ್ಗೆ ಅಧ್ಯಯನ ಮಾಡುವಾಗ ಮೊಗಲರ ಆಳ್ವಿಕೆ, ಮೊಗಲ್ ಸಾಮ್ರಾಜ್ಯದ ಅವನತಿ, ಭಾರತ ಎನ್ನುವ ರಾಷ್ಟ್ರದ ಛಿದ್ರೀಕರಣ ಹಂತಗಳು ಬಹಳ ಸೂಕ್ಷ್ಮವಾದ ವಿಚಾರಗಳಾಗಿ ಕಂಡು ಬರುತ್ತವೆ. ಅಂತೋನವ, ಜಿ ಕತೋವ್‌ಸ್ಕಿ, ಅವರು ಹೇಳುವಂತೆ, ಔರಂಗಜೇಬನ ಕಾಲದಲ್ಲಿ ಧಾರ್ಮಿಕ ಅಸಹನೆ, ಪ್ರಾಂತಾಧಿಕಾರಿಗಳ ದಬ್ಬಾಳಿಕೆ, ಸಾಮಾನ್ಯ ಜನರ ಮೇಲೆ ಶೋಷಣೆ, ಹಿಂದೂ ವಿರೋಧ ನೀತಿ, ಜಿಜಿಯಾ ತೆರಿಗೆ, ಭಾರತವನ್ನು ಇಸ್ಲಾಂನ ನಾಡನ್ನಾಗಿ ಪರಿವರ್ತಿಸುವ ದುಸ್ಸಾಹಸ, ಬಲತ್ಕಾರದ ಮತಾಂತರ, ದೇವ ಮಂದಿರಗಳ ನಾಶ ಮುಂತಾದ ಧರ್ಮಾಂಧತೆಗಳು ಅತಿಯಾಗಿದ್ದವು.[೧೬] ಈ ಮೇಲಿನ ಅಂಶಗಳನ್ನು ನೋಡಿದರೆ ಯಾವ ತೆರನಾದ ರಾಜಕೀಯ ಸ್ಥಿತಿಗತಿ ಅಂದು ಭಾರತದಲ್ಲಿ ಸ್ಥಾಪಿತವಾಗಿದ್ದಿತು ಎಂಬುದು ತಿಳಿಯುತ್ತದೆಯಲ್ಲದೆ, ಖಡ್ಗ ಬಲವೇ ಸಿಂಹಾಸನದ ಹಕ್ಕುದಾರಿಕೆಯನ್ನು ನಿರ್ಧರಿಸುವ ಏಕಮೇವ ಸಾಧನವಾದ ಕಾಲವಾಗಿತ್ತು. ಔರಂಗಜೇಬನ ಆಳ್ವಿಕೆಯ ಕಾಲದಲ್ಲಿಯೇ ಮೊಗಲ್ ಸಾಮ್ರಾಜ್ಯದ ಅವನತಿಯ ಬಗ್ಗೆ ಕಾರ್ಲ್‌ಮಾರ್ಕ್ಸ್, ಅವರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾ, 'ಔರಂಗಜೇಬನ ಆಳ್ವಿಕೆಯ ಅಂತ್ಯದ ಪೂರ್ವದಲ್ಲಿಯೇ ಹಿಂದೂಸ್ತಾನದಲ್ಲಿ ಅಜಾಗರೂಕತೆ ತಲೆದೋರಿ ಸಾಮ್ರಾಜ್ಯದ ವಿಭಜನೆಯ ಸಂಕೇತಗಳು ಕಾಣತೊಡಗಿದ್ದವಲ್ಲದೇ, ಸಾಮ್ರಾಜ್ಯದ ವಿಘಟನೆಯನ್ನು ತಪ್ಪಿಸಲು ಸಾಧ್ಯವೇ ಇರಲಿಲ್ಲ ಎಂದಿದ್ದಾರೆ.'[೧೭]

ಈ ರೀತಿ ಮೊಗಲರ ವಿಶಾಲವಾದ ಗಡಿಭಾಗಗಳು, ಪ್ರಬಲ ಮಿಲಿಟರಿ ಶಕ್ತಿ, ಸಾಂಸ್ಕೃತಿಕ ಚಟುವಟಿಕೆಗಳಿಂದ ಪ್ರಾವೀಣ್ಯತೆ ಹೊಂದಿದ್ದ ಮೊಗಲ್ ಸಾಮ್ರಾಜ್ಯವು ಔರಂಗಜೇಬನ ಮರಣದೊಂದಿಗೆ ಛಿದ್ರಗೊಂಡು ಶಕ್ತಿಹೀನವಾಯಿತು. ರಾಜಕೀಯ ಅಜಾಗರೂಕತೆ, ಅಸ್ಥಿರತೆ ತಲೆದೋರಿ ಕೇವಲ ೫೦ ವರ್ಷಗಳಲ್ಲಿ ೯ ಸುಲ್ತಾನರು ಅಧಿಕಾರಕ್ಕೆ ಬಂದರಲ್ಲದೆ ಯಾರೊಬ್ಬರು ಸ್ಥಿರ ಸರಕಾರ ಕೊಡುವುದರಲ್ಲಿ ವಿಫಲರಾದರು.

ಮೊಗಲ್ ಸಾಮ್ರಾಜ್ಯದ ಪತನವು ಸ್ವತಂತ್ರ ರಾಜ್ಯಗಳ ಉದಯಕ್ಕೆ ನಾಂದಿಯಾಯಿತು. ಔರಂಗಜೇಬನ ನಂತರ ಸಿಂಹಾಸನ ಏರಿದ ಅವನ ಉತ್ತರಾಧಿಕಾರಿಗಳು ಅಶಕ್ತ, ಅಸಮರ್ಥರಾಗಿದ್ದರಿಂದ ಕ್ರಿ.ಶ. ೧೭೦೭ರಲ್ಲಿ ಮೊಗಲ್ ಸಾಮ್ರಾಜ್ಯ ಪತನ ಹೊಂದಿ ಆ ಜಾಗದಲ್ಲಿ ಸ್ವತಂತ್ರ ರಾಜ್ಯಗಳು ಉದಯವಾದವು. ಅವುಗಳಲ್ಲಿ ಮುಖ್ಯವಾದುವೆಂದರೆ, ಬಂಗಾಳ, ಬಿಹಾರ, ಓರಿಸ್ಸ, ಜಾದ್, ರಜಪೂತರು, ಸಿಖ್ಖರು, ಜಾಟರು ಹಾಗೂ ದಖಿನ್. ಹೀಗಾಗಿ ಬ್ರಿಟಿಷರ ವ್ಯಾಪಾರ ವಿಸ್ತರಣೆ, ವಸಾಹತು ನೀತಿಗೆ ಇದ್ದ ಪ್ರಬಲವಾದ ತಡೆಗೋಡೆ (ಮೊಗಲರು) ಇಲ್ಲದಂತಾಯಿತು.[೧೮]

ದಕ್ಷಿಣ ಭಾರತದಲ್ಲಿ ಅದರಲ್ಲೂ ವಿಶೇಷವಾಗಿ ಕರ್ನಾಟಕದಲ್ಲೂ ಪರಿಸ್ಥಿತಿ ಭಿನ್ನವಾಗೇನೂ ಇರಲಿಲ್ಲ. ಕ್ರಿ.ಶ. ೧೩೩೬ರಲ್ಲಿ ತುಂಗಭದ್ರ ನದಿ ದಂಡೆಯ ಮೇಲೆ ಸ್ಥಾಪಿತವಾದ ವಿಜಯನಗರ ಸಾಮ್ರಾಜ್ಯ ಎರಡು ಶತಮಾನಗಳ ಕಾಲ ಮುಸ್ಲಿಂರ ಚಿಕ್ಕಪುಟ್ಟ ಅರಸರ ಮತ್ತು ವಿದೇಶಿಯರ ದಾಳಿಗಳನ್ನು ಎದುರಿಸಿ, ದಕ್ಷಿಣದಲ್ಲಿ ಸ್ವಲ್ಪಮಟ್ಟಿನ ಐಕ್ಯತೆ ಹಾಗೂ ರಾಜಕೀಯ ಸ್ಥಿರತೆಯನ್ನು ಸ್ಥಾಪಿಸಿತ್ತು. ಆದರೆ ಕ್ರಿ.ಶ. ೧೫೬೫ರಲ್ಲಿ ತಾಳೀಕೋಟೆ ಕದನದಲ್ಲಿ ಮುಸ್ಲಿಂ ರಾಜ್ಯಗಳ ಒಕ್ಕೂಟದ ಎದುರು ಸಂಪೂರ್ಣವಾಗಿ ಸೋತು ಹೋಯಿತು. ಅರವೀಡು ವಂಶಸ್ಥರು ಸಾಮ್ರಾಜ್ಯವನ್ನು ಪುನರ್‌ಸ್ಥಾಪಿಸುವಲ್ಲಿ ಸಂಪೂರ್ಣವಾಗಿ ವಿಫಲರಾದರು. ಇದರ ಲಾಭ ಪಡೆದ ಸಾಮಂತ ರಾಜ್ಯಗಳು, ಪಾಳೆಪಟ್ಟುಗಳು ಸ್ವತಂತ್ರರಾಗತೊಡಗಿದರು. ಇವರಲ್ಲಿ ಕೆಳದಿ ನಾಯಕರು, ಚಿತ್ರದುರ್ಗದ ಪಾಳೇಗಾರರು, ಯಲಹಂಕ ಪ್ರಭುಗಳು, ಉಮ್ಮತ್ತೂರು, ತರೀಕೆರೆ, ರಾಯದುರ್ಗ ನಾಯಕರು ಪ್ರಮುಖರು. ಆದರೆ ವಿಷಾದಕರ ಸಂಗತಿ ಎಂದರೆ ಸ್ವಾತಂತ್ರ್ಯ ಘೋಷಿಸಿಕೊಂಡ ಈ ಪಾಳೇಗಾರರು, ನಾಯಕರು ಪರಸ್ಪರ ದ್ವೇಷ, ಅಸೂಯೆ, ಸ್ವಾರ್ಥ, ಗಡಿ ವಿಸ್ತರಣೆ, ಹೀಗೆ ಒಂದಲ್ಲಾ ಒಂದು ಕಾರಣದಿಂದ ಪರಸ್ಪರ ಕಾದಾಡತೊಡಗಿದರು. ಹಾಗಾಗಿ ಪಾಳೆಪಟ್ಟುಗಳಲ್ಲಿ ತಮ್ಮ ರಕ್ಷಣೆ ಹಾಗೂ ವಿಸ್ತರಣೆಗಾಗಿ ಯುದ್ಧದ ಪ್ರವೃತ್ತಿಯು ತಲೆದೋರಿತು. ಕಾಲಕ್ರಮದಲ್ಲಿ ಇವುಗಳ ನಡುವೆ ಸಂಭವಿಸಿದ ಯುದ್ಧಗಳಿಂದಾಗಿ ಸಣ್ಣ ಪಾಳೆಪಟ್ಟುಗಳು ದೊಡ್ಡ ಪಾಳೆಪಟ್ಟುಗಳಲ್ಲಿ ವಿಲೀನವಾಗ ತೊಡಗಿದವು. ಈ ಯತ್ನದಲ್ಲಿ ಯಶಸ್ವಿಯಾದವುಗಳೆಂದರೆ ಕೆಳದಿ ಮತ್ತು ಮೈಸೂರು ಸಂಸ್ಥಾನಗಳು.

ಕ್ರಿ.ಶ. ೧೮ನೇ ಶತಮಾನದಲ್ಲಿ ಪ್ರವರ್ಧಮಾನಕ್ಕೆ ಬಂದ ಮರಾಠರು, ದಕ್ಷಿಣದ ರಾಜಕೀಯದಲ್ಲಿ ಮುಖ್ಯ ಪಾತ್ರವಹಿಸತೊಡಗಿದ್ದರು. ಶಿವಾಜಿಯ ನಾಯಕತ್ವದಲ್ಲಿ ರಾಷ್ಟ್ರೀಯ ರಾಜ್ಯವಾಗಿ ಸಂಘಟಿತರಾಗಿ ಔರಂಗಜೇಬನ ಮರಣದ ನಂತರ ಪರಮಾಧಿಕಾರಕ್ಕಾಗಿ ಪ್ರಯತ್ನ ಮಾಡಿದ ಮರಾಠರು, ಪೇಶ್ವೆಗಳ ಕಾಲದಲ್ಲಿ ಒಂದನೇ ಬಾಜೀರಾಯ 'ಹಿಂದೂ-ಪಾದ್-ಬಾದ್ ಷಾಹಿ' ಅಥವಾ ಹಿಂದೂ ಸಾಮ್ರಾಜ್ಯ ಸ್ಥಾಪನೆಯ ಪ್ರಯತ್ನ ಮಾಡಿದ್ದ. ಆದರೆ ಕ್ರಿ.ಶ. ೧೭೬೧ರಲ್ಲಿ 'ಮೂರನೇ ಪಾಣಿಪತ್ ಕದನದಲ್ಲಿ' ಬಾಲಾಜಿ ಬಾಜೀರಾಯ ಅಹಮದ್ ಷಾ ಅಬ್ದಾಲಿ ಎದುರು ಸಂಪೂರ್ಣವಾಗಿ ಸೋತು ಹೋದನು. ಕಾರ್ಲ್‌ಮಾರ್ಕ್ಸ್ ಈ ಸೋಲಿನ ಪರಿಣಾಮದ ಬಗ್ಗೆ ಹೇಳುತ್ತಾ, ಮೂರನೇ ಪಾಣಿಪತ್ ಕದನದಲ್ಲಿ ಮರಾಠರ ಸೇನೆಯು ಸಂಪೂರ್ಣವಾಗಿ ಸೋತು, ಮರಾಠರು ಸ್ಥಾಪಿಸಿಕೊಂಡಿದ್ದಂತ ಒಕ್ಕೂಟವೇ ಕಣ್ಮರೆ

ಯಾಯಿತು. ಅಲ್ಲದೇ ಭಾರತದಲ್ಲಿ ಬ್ರಿಟಿಷರ ಅಧಿಪತ್ಯ ತನ್ನ ಅಧಿಕಾರವನ್ನು ಬಲಪಡಿಸಿಕೊಳ್ಳಲು ಮತ್ತು ಕ್ರೋಢೀಕರಿಸಲು ಬೇಕಾದ ಅವಕಾಶ ಪಡೆಯಿತು.[೧೯]

ಹೀಗಾಗಿ ಕ್ರಿ.ಶ. ೧೮ನೇ ಶತಮಾನದ ರಾಜಕೀಯ ಸ್ಥಿತಿಗತಿಗಳನ್ನು ಗಮನಿಸಿದಾಗ, ವಾಸ್ತವವಾಗಿ ಭಾರತ ಎನ್ನುವ ರಾಷ್ಟ್ರದ ಅಸ್ತಿತ್ವವೇ ಇರಲಿಲ್ಲ. ಭಾರತ ಎನ್ನುವ ಒಂದು ದೇಶದ ಕಲ್ಪನೆಯು ಸಾಧ್ಯವಿಲ್ಲದಷ್ಟು ಛಿದ್ರವಾಗಿತ್ತು. ಸ್ವತಂತ್ರ ಆಳ್ವಿಕೆಯನ್ನು ಆರಂಭಿಸಿದ್ದ, ಅರಸರು, ಸಂಸ್ಥಾನಿಕರು, ಪಾಳೇಗಾರರು, ನಾಯಕರು ತಮ್ಮ ಪ್ರದೇಶಗಳ, ಗಡಿಗಳ ಚೌಕಟ್ಟಿನಲ್ಲಿ ತಮ್ಮದೇ ನಾಡಿನ ಸ್ವತಂತ್ರ ರಾಜ್ಯಗಳ ಕಲ್ಪನೆಯಲ್ಲಿ ಆಳತೊಡಗಿದರು. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಈ ಎಲ್ಲ ರಾಜ್ಯಗಳು, ಸಂಸ್ಥಾನಗಳು, ವಿಭಿನ್ನ ಭಾಷೆ, ಸಂಸ್ಕೃತಿ, ಧರ್ಮ ಉದ್ದೇಶಗಳನ್ನು ಹೊಂದಿದ್ದರಿಂದ, ಇವು ಪ್ರತ್ಯೇಕ ರಾಷ್ಟ್ರಗಳಂತೆ ಗೋಚರವಾಗುತ್ತಿದ್ದವು. ಈ ರೀತಿ ಆಳ್ವಿಕೆಗೆ ಒಳಪಟ್ಟ ಪ್ರದೇಶಗಳು, ಈ ಹಿಂದೆ ಒಂದೇ ಸಾಮ್ರಾಜ್ಯದ ಅಡಿಯಲ್ಲಿದ್ದವು ಎನ್ನುವ ಕಲ್ಪನೆ ಮಾಡಿಕೊಳ್ಳುವುದು ಅಸಾಧ್ಯವಾಗುವಷ್ಟರ ಮಟ್ಟಿಗೆ ಸ್ವತಂತ್ರವಾಗಿದ್ದವು. ಪ್ರತಿಯೊಬ್ಬರು ತಮ್ಮದೇ ಆದ ನೆಲೆಯನ್ನು ಕಂಡುಕೊಳ್ಳುವ, ಗಟ್ಟಿಗೊಳಿಸಿಕೊಳ್ಳುವ ಪ್ರಯತ್ನದಲ್ಲಿದ್ದವು. ಅದರಲ್ಲೂ ಬಂಗಾಳದ ನವಾಬರು, ಮರಾಠರು, ಹೈದ್ರಾಬಾದ್‌ನ ನಿಜಾಮ ತಮ್ಮದೇ ಆದ ಸ್ವತಂತ್ರ ರಾಜ್ಯಗಳ ಕನಸನ್ನೇ ಮೂಡಿಸತೊಡಗಿದ್ದರು. ಈ ರೀತಿ ಪ್ರತಿಯೊಬ್ಬರು ತಮ್ಮದೇ ನಾಡುಗಳನ್ನು ಕಟ್ಟುವ ಮನೋಭಾವ ಒಂದೆಡೆಯಾದರೆ, ನೆರೆಹೊರೆಯ ರಾಜ್ಯಗಳ ಜೊತೆ ಪ್ರೀತಿ, ವಿಶ್ವಾಸ, ಶಾಂತಿ, ಸಹಕಾರ ಕಾಪಾಡಿಕೊಳ್ಳುವುದರ ಬದಲಾಗಿ ದ್ವೇಷ, ಅಸೂಯೆ, ಸ್ವಾರ್ಥ, ಪೈಪೋಟಿ ಮನೋಭಾವದಿಂದ ಪರಸ್ಪರ ದಾಳಿ ಲೂಟಿ, ಯುದ್ಧಗಳಲ್ಲಿಯೇ ನಿರತರಾಗಿದ್ದರು. ಯಾವೊಬ್ಬ ಆಳರಸನು ನೆರೆಹೊರೆಯವರೊಂದಿಗೆ ಸಹಾಯ, ಶಾಂತಿಯಿಂದ ಬಾಳಿ ಬದುಕಿದ ಉದಾಹರಣೆಗಳು ಸಿಗುವುದಿಲ್ಲ. ಪ್ರತಿಯೊಬ್ಬರು ನೆರೆ-ಹೊರೆಯ ರಾಜ್ಯಗಳನ್ನು, ಅರಸರನ್ನು ಸೋಲಿಸಲು ಅವರ ಸಂಪತ್ತನ್ನು ದೋಚಲು ತಂತ್ರ-ಕುತಂತ್ರಗಳಲ್ಲಿ ತೊಡಗಿದ್ದರು. ತಮ್ಮ ರಾಜ್ಯಗಳ ಮೇಲೆ ಅನ್ಯರು, ವಿದೇಶೀಯರು ದಾಳಿ ಮಾಡಿದಾಗಲೂ ಸಹ ಇವರೆಲ್ಲ ಒಗ್ಗಟ್ಟಾಗಿ ಅವರನ್ನು ಎದುರಿಸುವ ಬದಲು, ಅವರ ದಾಳಿಗಳನ್ನು ತಮ್ಮ ಸ್ವಾರ್ಥಕ್ಕೆ ತಮ್ಮ ಕಾರ್ಯ ಸಾಧಿಸಿಕೊಳ್ಳಲು ನೆರೆಹೊರೆಯ ರಾಜ್ಯಗಳ ನಾಶಕ್ಕೆ ಬಳಸಿಕೊಂಡರು. ಬಹಳಷ್ಟು ಸಲ ನೆರೆಹೊರೆಯವರ ಮೇಲೆ ದಾಳಿ ಮಾಡುವಂತೆ ವಿದೇಶಿಯರಿಗೆ ಇವರೇ ಆಹ್ವಾನ ನೀಡಿದ ಉದಾಹರಣೆಗಳಿವೆ.[೨೦]

ಬಂಗಾಳದ ನವಾಬ, ಔಧ್‌ನ ವಜೀರ, ರಜಪೂತರು, ಮರಾಠರ ನಡುವಿನ ಕದನಗಳು, ದಾಳಿಗಳಿಂದ ಬೇಸತ್ತವರು. ಅದರಲ್ಲೂ ಮರಾಠರು ಚೌತ್ ಮತ್ತು ಸರ್ದೇಶ್‌ಮುಖ್ ತೆರಿಗೆ ಸಂಗ್ರಹಕ್ಕಾಗಿ ನೆರೆಹೊರೆಯವರ ಮೇಲೆ ನಡೆಸುತ್ತಿದ್ದ ನಿರಂತರ ದಾಳಿ ಲೂಟಿಗಳಿಂದ ಬೇಸತ್ತ ಚಿಕ್ಕಪುಟ್ಟ ಆಳರಸರು. ಇವರಿಂದ ರಕ್ಷಣೆ ಪಡೆಯಲು ಇವರನ್ನು ಮಟ್ಟಹಾಕಲು ವಿದೇಶಿಯರನ್ನೇ ಅವಲಂಬಿಸುವುದು ಅನಿವಾರ್ಯವು ಆಗಿರಬಹುದು. ಹೀಗೆ ಯುರೋಪಿಯನ್ನರು ದಾಳಿ ಮಾಡಲು ಇವರೇ ಹಾದಿಯನ್ನು ನಿರ್ಮಿಸಿಕೊಟ್ಟಂತಾಗಿತ್ತು. ಬ್ರಿಟಿಷರು ದಕ್ಷಿಣ ಭಾರತವನ್ನು ಆಕ್ರಮಿಸಲು ಆರಂಭಿಸಿದಾಗಲೂ ಸಹ ಮರಾಠರು, ಹೈದ್ರಾಬಾದ್ ನಿಜಾಮ, ಹೈದರ್‌ಅಲಿ ಒಂದಾಗಿ ಅವರನ್ನು ಎದುರಿಸಲಿಲ್ಲ. ಈ ಮೂವರು

ತಮ್ಮಲ್ಲಿ ಒಪ್ಪಂದ ಮಾಡಿಕೊಂಡಂತಹ ಪ್ರಯತ್ನಗಳು ಕಂಡು ಬಂದರೂ ಅದು ಕೇವಲ ಹಣದಾಸೆಗೆ, ಸ್ವಾರ್ಥಕ್ಕೆ ಮತ್ತು ತಾತ್ಕಾಲಿಕವಾದುದಾಗಿತ್ತು. ಇವರೆಲ್ಲರ ರಾಜ್ಯಗಳು ಪರಸ್ಪರ ಗಡಿಗೆ ಹೊಂದಿಕೊಂಡಿದ್ದರೂ, ಒಗ್ಗಟ್ಟಿನಿಂದ ಏಕೋದ್ದೇಶದಿಂದ ಬ್ರಿಟಿಷರನ್ನು ಎದುರಿಸುವ, ಹೊಡೆದೋಡಿಸುವ ಮನೋಭಾವನೆ ಆಗಲಿ ಪ್ರಯತ್ನಗಳಾಗಲಿ ನಡೆಯಲಿಲ್ಲ.

ಈ ನಿಟ್ಟಿನಲ್ಲಿ ಹೈದರ್‌ಅಲಿ ಮತ್ತು ಟಿಪ್ಪುಸುಲ್ತಾನ್ ಇತರರಿಗಿಂತ ಭಿನ್ನವಾಗಿಯೇ ಕಂಡು ಬರುತ್ತಾರೆ. ಇವರು ಬ್ರಿಟಿಷರನ್ನು ಸಂಪೂರ್ಣವಾಗಿ ಸೋಲಿಸಿ ದೇಶದಿಂದ ಹೊರದಬ್ಬಲು ಅನೇಕ ಪ್ರಯತ್ನಗಳನ್ನು ಮಾಡಿದರು. ಅದರಲ್ಲೂ ಬ್ರಿಟಿಷರ ವಿರುದ್ಧ ಬೆಂಬಲ ಗಳಿಸಲು ಅರೇಬಿಯ, ಕಾಬೂಲ್, ಫ್ರಾನ್ಸ್, ಕಾನ್‌ಸ್ಟೆಂಟಿನೋಪಲ್ ದೇಶಗಳ ಸಹಾಯ ಪಡೆಯಲು ಪ್ರಯತ್ನಿಸಿದ್ದರು. ದೇಶೀಯ ಅರಸರನ್ನು ಬ್ರಿಟಿಷರ ವಿರುದ್ಧ ಸಂಘಟಿಸಲು ಪ್ರಯತ್ನಿಸಿದ್ದರು. ಆದರೆ, ಮರಾಠರು, ಹೈದರಾಬಾದಿನ ನಿಜಾಮ, ಆರ್ಕಾಟಿನ ನವಾಬ ಹಾಗೂ ತಿರುವಾಂಕೂರಿನ ಅರಸರ ಸ್ವಾರ್ಥ, ಹಣದಾಸೆ, ಸ್ವಹಿತಾಸಕ್ತಿಗಳಿಂದಾಗಿ ಅವರ ಪ್ರಯತ್ನ ಕೈಗೂಡಲಿಲ್ಲ. ಒಂದು ವೇಳೆ ಹೈದರ್‌ಅಲಿ ಬಯಸಿದಂತೆ ಹೈದ್ರಾಬಾದ್ ನಿಜಾಮ ಆಲಿಖಾನ್, ತನ್ನ ಮಗಳನ್ನು ಟಿಪ್ಪುಸುಲ್ತಾನನಿಗೆ ಧಾರೆಯೆರೆದು ಕೊಟ್ಟಿದ್ದರೆ ಅಥವಾ ಅಂದಿನ ರಾಜಕಾರಣದಲ್ಲಿ ನೆರವನ್ನು ನೀಡಿದ್ದರೆ ಬಹುಶಃ ದಖ್ಖನ್ನಿನ ಇತಿಹಾಸವೇ ಬದಲಾಗುತ್ತಿತ್ತೇನೊ. ಆದರೆ ನಿಜಾಮನ ಒಣಪ್ರತಿಷ್ಠೆ, ಸ್ವಾರ್ಥ, ದ್ವೇಷ ಇದಕ್ಕೆ ಅವಕಾಶ ಕೊಡಲಿಲ್ಲ. ಹೀಗಾಗಿ ಬ್ರಿಟಿಷರ ವಿರುದ್ಧ ಹೈದರ್‌ಅಲಿ ಮತ್ತು ಟಿಪ್ಪು ಏಕಾಂಗಿಗಳಾಗಿ ಹೋರಾಡುವಂತಾಯಿತು. ಕೊನೆಗೆ ಕ್ರಿ.ಶ. ೧೭೯ರಲ್ಲಿ ೪ನೇ ಆಂಗ್ಲೋ ಮೈಸೂರು ಯುದ್ಧದಲ್ಲಿ ಟಿಪ್ಪುವಿನ ಮರಣದೊಂದಿಗೆ ಮೈಸೂರು ಬ್ರಿಟಿಷರ ವಶಕ್ಕೆ ಬಂದಿತಲ್ಲದೇ, ಮೈಸೂರು ಸಂಸ್ಥಾನವನ್ನು ಸಹಾಯಕ ಸೈನ್ಯ ಪದ್ಧತಿಗೆ ಒಳಪಡಿಸಿ, ಬ್ರಿಟಿಷ್ ನಿಯಂತ್ರಣದಲ್ಲಿಟ್ಟುಕೊಳ್ಳಲಾಯಿತು. ಟಿಪ್ಪುವಿನ ಮರಣದ ನಂತರ ಹೈದ್ರಾಬಾದಿನ ನಿಜಾಮನನ್ನು ಸಹಾಯಕ ಸೈನ್ಯ ಪದ್ಧತಿಗೆ ಕ್ರಿ.ಶ. ೧೮೦೦ರಲ್ಲಿ ಸಹಿ ಹಾಕಿಸಿಕೊಂಡು ತಮ್ಮ ಕೈಗೊಂಬೆಯನ್ನಾಗಿಸಿ ಕೊಂಡರು.

ಇದೇ ರೀತಿ, ಬ್ರಿಟಿಷರು ಮರಾಠರ ಆಂತರಿಕ ವಿಚಾರದಲ್ಲಿ ತಲೆ ಹಾಕಿ ಮರಾಠ ರಾಜ್ಯದ ವಶಕ್ಕೆ ಯೋಜನೆ ರೂಪಿಸತೊಡಗಿದರು. ಅದೇ ಸಮಯಕ್ಕೆ ಸರಿಯಾಗಿ ಮರಾಠರಲ್ಲಿ ಪೇಶ್ವೆಗಳ ಆಂತಃಕಲಹದಿಂದ ಸಿಂಧ್ಯ, ಹೋಳ್ಕರರ ಭಯದಿಂದ ೨ನೇ ಬಾಜೀರಾಯ ಬ್ರಿಟಿಷರೊಡನೆ ಕ್ರಿ.ಶ. ೧೮೦೧ರಲ್ಲಿ ಸಹಾಯಕ ಸೈನ್ಯ ಪದ್ಧತಿಗೆ ಸಮ್ಮತಿ ನೀಡಿದನು. ಆದರೆ ಸ್ವಲ್ಪ ಸಮಯದಲ್ಲೇ ಬ್ರಿಟಿಷರ ನೀತಿಯನ್ನು ತಿಳಿದ ಪೇಶ್ವೆ ಅವರನ್ನು ಹೊರದೂಡಲು ಪ್ರಯತ್ನಿಸಿದನಾದರೂ, ತನ್ನವರ, ನೆರೆಹೊರೆಯವರ ಬೆಂಬಲ ಸಿಗದೆ ಮೂರನೇ ಆಂಗ್ಲೋ ಮರಾಠ ಕದನದಲ್ಲಿ ಸೋತು ಹೋದನು. ಬ್ರಿಟಿಷರು ಸೋತ ಮರಾಠ ಪೇಶ್ವೆಯನ್ನು ಪದಚ್ಯುತಗೊಳಿಸಿ, ವಾರ್ಷಿಕ ೮ ಲಕ್ಷ ರೂ. ವಿಶ್ರಾಂತಿ ವೇತನ ನೀಡುವ ಒಪ್ಪಂದ ಮಾಡಿಕೊಂಡರು. ಮರಾಠ ರಾಜ್ಯದ ಜೊತೆಗೆ ಅವರ ಶಾಖೆಗಳು, ಪಾಳೆಪಟ್ಟುಗಳು, ಸಂಸ್ಥಾನಗಳು, ಬ್ರಿಟಿಷರ ವಶವಾದವು. ಈ ರೀತಿ ಸಾಮ್ರಾಜ್ಯಶಾಹಿಗಳು ಇಡೀ ದಕ್ಷಿಣ ಭಾರತವನ್ನೇ ತಮ್ಮ ನಿಯಂತ್ರಣಕ್ಕೆ ತಂದುಕೊಂಡರು.

## ೨.೨. ಬ್ರಿಟಿಷ್ ಸಾಮ್ರಾಜ್ಯಶಾಹಿ ನೀತಿ

ಭಾರತದ ಚರಿತ್ರೆಯಲ್ಲಿ ನಾವು ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ ಯುರೋಪ್ ರಾಷ್ಟ್ರಗಳು ಬಂದು ತಮ್ಮ ರಾಜಕೀಯ ನೆಲೆಯನ್ನು ಸ್ಥಾಪಿಸಿದ ನಂತರ ವಸಾಹತುಶಾಹಿಯ ಒಂದು ಪರಿಕಲ್ಪನೆ ಮತ್ತು ಅನುಭವ ಭಾರತೀಯರಿಗಾಯಿತು. ಸಾಮಾನ್ಯ ಅರ್ಥದಲ್ಲಿ ವಸಾಹತುಶಾಹಿ ಎಂದರೆ 'ಒಂದು ಪ್ರಬಲ ರಾಷ್ಟ್ರವು ಇತರ ರಾಷ್ಟ್ರಗಳನ್ನು ತನ್ನ ಸ್ವಾಮ್ಯಕ್ಕೆ ಒಳಪಡಿಸಿಕೊಂಡು, ತನ್ನ ಹಿತಾಸಕ್ತಿಗೆ ಬಳಸಿಕೊಳ್ಳುವ ಒಂದು ಪದ್ಧತಿ ಎಂದು ಹೇಳಬಹುದು.' ಶೂಮನ್ ಅವರ ಪ್ರಕಾರ, ವಸಾಹತುಶಾಹಿಯ ಮುಖ್ಯ ಲಕ್ಷಣ ಎಂದರೆ, "ಇತರ ರಾಷ್ಟ್ರೀಯ ರಾಜ್ಯಗಳನ್ನು ಬಲಪ್ರಯೋಗದ ಮೂಲಕ ತನ್ನ ಅಂಕಿತದಲ್ಲಿ ಇಟ್ಟುಕೊಳ್ಳುವುದು."[೨] ವಸಾಹತುಶಾಹಿ ರಾಷ್ಟ್ರವು ಇತರ ರಾಷ್ಟ್ರಗಳನ್ನು ಶೋಷಣೆಯ ಮೂಲಕ ತನ್ನ ಸ್ವಹಿತವನ್ನು ಸಾಧಿಸುವ ನೀತಿಯನ್ನು ಹೊಂದಿರುತ್ತದೆ ಎಂದು ಯಾವ ಅನುಮಾನವಿಲ್ಲದೆ ಹೇಳಬಹುದು. ಬ್ರಿಟಿಷ್ ವಸಾಹತುಶಾಹಿಯ ಪ್ರಭಾವದ ಸ್ವರೂಪವನ್ನು ಹಾಗೂ ಅದರ ಧೋರಣೆಗಳನ್ನು ಅರ್ಥೈಸಿಕೊಳ್ಳುವಾಗ, ವಸಾಹತುಶಾಹಿ ಎನ್ನುವುದು ಆಧುನಿಕವಾದ, ಸಂಕೀರ್ಣವಾದ ಬಂಡವಾಳ ಕೇಂದ್ರಿಕೃತ ವಾದ ಹಾಗೂ ವಿರೋಧಭಾಸಗಳಿಂದ ಕೂಡಿದ ಪರಿಕಲ್ಪನೆಯಾಗಿದೆ. ಅದು ಒಡಂಬಡಿಕೆ, ಹೇರಿಕೆ, ಬಲಪ್ರಯೋಗ ಮುಂತಾದ ಲಕ್ಷಣಗಳನ್ನು ಮೈಗೂಡಿಸಿಕೊಂಡು ಬೆಳೆದು ಬಂದಿರುವಂತದ್ದು.

ವಸಾಹತುಶಾಹಿ ಎನ್ನುವುದು ಬಂಡವಾಳದೊಂದಿಗೆ ತಳುಕು ಹಾಕಿಕೊಂಡಿರುವಂತದ್ದು. ಬಂಡವಾಳ ಶೇಖರಣೆಯೇ ಅದರ ಮೂಲಮಂತ್ರ. ಅದಕ್ಕಾಗಿಯೇ ಅದು ಹೊಸ ವಿಧಾನಗಳನ್ನು ಅಳವಡಿಸಿಕೊಳ್ಳುತ್ತಾ, ತನ್ನ ಗಡಿಯನ್ನು ಸದಾ ವಿಸ್ತರಿಸಿಕೊಳ್ಳುತ್ತ ಸಾಗುತ್ತದೆ. ಸ್ಥಳೀಯ ಸಮುದಾಯಗಳನ್ನು ಅವರ ಚರಿತ್ರೆ ಮತ್ತು ಸಂಸ್ಕೃತಿಗಳನ್ನು ತನ್ನ ಉದ್ದೇಶಗಳಿಗೆ ಅನುಗುಣವಾಗಿ ಬಳಸಿಕೊಳ್ಳುತ್ತದೆ. ಇದು ಬಂಡವಾಳ ಶಾಹಿಯು ಹುಟ್ಟು ಹಾಕಿರುವ ಆರ್ಥಿಕ ವ್ಯವಸ್ಥೆ. ಈ ವ್ಯವಸ್ಥೆಯಲ್ಲಿ ಬಂಡವಾಳಿಗರ ಆರ್ಥಿಕ ಅಭ್ಯುದಯ ವಷ್ಟೇ ಪ್ರಧಾನವಾಗಿರುತ್ತದೆ.[೩]

ಭಾರತಕ್ಕೆ ಆಗಮಿಸಿದ ಯುರೋಪಿಯನ್ನರಲ್ಲಿ ಬ್ರಿಟಿಷರು ಅತ್ಯಂತ ಪ್ರಬಲ ಸಾಮ್ರಾಜ್ಯಶಾಹಿ ಗಳಾದರು. ಅವರ ಈ ಪ್ರಯತ್ನ ಒಂದು ದಿನದಲ್ಲಿ ಸಾಧಿಸುದುದಲ್ಲ. ಸುಮಾರು ಎರಡು ಶತಮಾನಗಳ ವರೆಗೆ ಅವಿರತವಾದ ಪ್ರಯತ್ನದಿಂದ, ಪರಿಶ್ರಮದಿಂದ ತಮ್ಮದೇ ಆದ ಸಾರ್ವಭೌಮತ್ವವನ್ನು ಬ್ರಿಟಿಷರು ಸ್ಥಾಪಿಸಿದರು. ಈಸ್ಟ್ ಇಂಡಿಯಾ ಕಂಪನಿ ಸ್ಥಾಪನೆ ಆಗಿ ಭಾರತದೊಡನೆ ವ್ಯಾಪಾರ ಆರಂಭಿಸಿದ್ದ ಬ್ರಿಟಿಷರ ಮೂಲ ಉದ್ದೇಶ ಬಂಡವಾಳದ ಕ್ರೋಢೀಕರಣ. ಇದಕ್ಕೆ ಒಂದು ಉದಾಹರಣೆ ಎಂದರೆ, ಕ್ರಿ.ಶ. ೧೬೦೦ರಲ್ಲಿ ಈಸ್ಟ್ ಇಂಡಿಯಾ ಕಂಪನಿ ನಿರ್ದೇಶಕರು, ಸೂತ್ರದಾರರು ತಮ್ಮ ಪ್ರಭುಗಳನ್ನು ವೃತ್ತಿ ರಹದಾರಿಗೆ ಬೇಡಿಕೊಂಡರು. ಆಗ ಬ್ರಿಟನ್ ರಾಣಿ ಉತ್ತಮರನ್ನು, ಸದ್ಗೃಸ್ಥರನ್ನು ನಿಮ್ಮ ಆಡಳಿತ ಸಮಿತಿಗೆ ನೇಮಿಸಿಕೊಳ್ಳಿ ಎಂದಾಗ, ಕಂಪನಿಯು ಈ ರೀತಿಯಾಗಿ ವಿಜ್ಞಾಪಿಸಿಕೊಂಡಿತು, "ನಮ್ಮ ಕಂಪನಿಯಲ್ಲಿ; ಯಾವ ಉನ್ನತ ಸ್ಥಾನಕ್ಕೂ ಸದ್ಗೃಸ್ಥರನ್ನು ನೇಮಿಸಿಕೊಳ್ಳಬಾರದೆಂದು ನಿರ್ಣಯ ಮಾಡಿದ್ದೇವೆ. ನಮ್ಮ ವ್ಯಾಪಾರಕ್ಕೆ ನಮ್ಮ ಮನಸ್ಸಿಗೆ ಒಪ್ಪಿಗೆಯಾಗುವಂತಹ ಗುಣಗಳುಳ್ಳವರನ್ನೇ ನೇಮಿಸಿ

ಕೊಳ್ಳಲು ಅವಕಾಶ ಕೊಡತಕ್ಕದ್ದು ಎಂದು ಕೋರಿದರು."[೨೩] ಇದರಿಂದ ಬ್ರಿಟಿಷರ ನೀತಿ ಆರಂಭದಲ್ಲಿ ಯಾವ ಧೋರಣೆಯನ್ನು ಹೊಂದಿತ್ತು ಎಂಬುದನ್ನು ತಿಳಿದುಕೊಳ್ಳಬಹುದಾಗಿದೆ. ಕಂಪನಿ ಸರಕಾರದ ಭ್ರಷ್ಟತೆ ಮತ್ತು ಕೆಟ್ಟ ಆಡಳಿತದ ಬಗ್ಗೆ ಸರ್ ಲಿವೀಸ್ ಕೊಟ್ಟಿರುವ ಹೇಳಿಕೆ ಹೀಗಿದೆ, "ಕ್ರಿ.ಶ. ೧೭೬೫ರಿಂದ ೧೮೦೦ರವರೆಗೆ ಭಾರತದಲ್ಲಿದ್ದ ಈಸ್ಟ್ ಇಂಡಿಯಾ ಕಂಪನಿ ಸರಕಾರದಲ್ಲಿದ್ದಷ್ಟು ಭ್ರಷ್ಟತೆ, ಅಪರಿಪೂರ್ಣತೆ, ಅತ್ಯಾಚಾರದಿಂದ ಕೂಡಿದ ಇಂತಹ ಸರಕಾರಕ್ಕಿಂತ ಕೆಟ್ಟ ಕೀಳುಮಟ್ಟದ ಸರಕಾರವು ಈ ಭೂಲೋಕದಲ್ಲಿಯೇ ಎಂದೂ ಅಸ್ತಿತ್ವದಲ್ಲಿರಲಿಲ್ಲ."[೨೪]

ಭಾರತಕ್ಕೆ ಕಾಲಿಟ್ಟ ಬ್ರಿಟಿಷರ ಮೂಲ ಉದ್ದೇಶ, ಅವರ ಗುರಿ ಹಾಗೂ ಕಾರ್ಯ ಸಾಧನೆಗೆ ಹಿಡಿದ ಮಾರ್ಗ ಪೂರ್ವಯೋಜಿತವಾಗಿದ್ದು, ಅದು ಸ್ಥಳೀಯ ರಾಜಕಾರಣವನ್ನು ಬುಡ ಮೇಲಾಗಿಸಿತು. ಭಾರತದಲ್ಲಿಯ ಪ್ರಭುತ್ವಗಳ ಅಸ್ಥಿರತೆಗಳು ಹಾಗೂ ಅರಮನೆ ಬಂಡಾಯಗಳು ಸಾಮ್ರಾಜ್ಯಶಾಹಿತ್ವ ಸ್ಥಾಪಿಸಲು ದಾರಿ ಮಾಡಿಕೊಟ್ಟವು. ಉದಾಹರಣೆಗೆ ಮೊಗಲ್ ಸಾಮ್ರಾಜ್ಯದ ಚಕ್ರವರ್ತಿಯಾದ ಔರಂಗಜೇಬ್ ೧೭೦೭ ಮಾರ್ಚ್ ೩ರಂದು ತೀರಿಕೊಂಡಾಗ, ಮೊಗಲ್ ಸಾಮ್ರಾಜ್ಯ ಛಿದ್ರವಾಗಿ ಸಣ್ಣ ಪುಟ್ಟ ಸಂಸ್ಥಾನಿಕರು ಸ್ವಾತಂತ್ರ್ಯ ಘೋಷಿಸಿಕೊಂಡರು. ಇದು ಬ್ರಿಟಿಷ್ ಸಾಮ್ರಾಜ್ಯಶಾಹಿತ್ವದ ಹೊಸ ಯುಗಕ್ಕೆ ಕಾರಣವಾಯಿತು. ಕ್ರಿ.ಶ. ೧೭೫೭ರ ಪ್ಲಾಸಿ ಕದನ ಮತ್ತು ಬಕ್ಸಾರ್ ಕದನಗಳು ಬ್ರಿಟಿಷ್ ಸಾಮ್ರಾಜ್ಯಶಾಹಿತ್ವದ ನಿರ್ಣಾಯಕ ಘಟನೆಗಳಾಗಿವೆ. ೧೭೫೭ರ ಪ್ಲಾಸಿ ಕದನದ ಕಾರಣಗಳನ್ನು ನೋಡಿದಾಗ, ಬಂಗಾಲದಲ್ಲಿ ಬ್ರಿಟಿಷರಿಗೆ ನೀಡಿದ್ದ ತೆರಿಗೆ ರಹಿತ ವ್ಯಾಪಾರದ ಅನುಮತಿ ಪತ್ರ ದಸ್ತಕ್‌ಗಳನ್ನು ದುರುಪಯೋಗಪಡಿಸಿಕೊಳ್ಳತೊಡಗಿದರು. ನವಾಬನಿಗೆ ತೆರಿಗೆ ಕೊಡದೆ ವಂಚಿಸಿದರು. ಕಲ್ಕತ್ತಾದ ಸುತ್ತ ಕಂದಕಗಳನ್ನು ತೋಡಿ ಕೋಟೆಯ ಮೇಲೆ ಫಿರಂಗಿಗಳನ್ನು ಇಟ್ಟು, ಕಲ್ಕತ್ತದ ಫೋರ್ಟ್ ವಿಲಿಯಂ ಕೋಟೆಯನ್ನು ಬಲಪಡಿಸಿಕೊಂಡರು. ನವಾಬನನ್ನು ಅಧಿಕಾರದಿಂದ ಕೆಳಗಿಳಿಸಲು ನವಾಬನ ವಿರೋಧಿಗಳ ಜೊತೆ ಒಳಸಂಚು ನಡೆಸತೊಡಗಿದರು. ಅವರಲ್ಲಿ ದಂಡನಾಯಕ ಮೀರ್‌ಜಾಫರ್, ರಾಯ್‌ದುರ್ಲಬ್ ಪ್ರಮುಖರು. ಬ್ರಿಟಿಷರ ಈ ಚಟುವಟಿಕೆಗಳನ್ನು ನವಾಬನು ವಿರೋಧಿಸಿದ್ದರಿಂದಾಗಿ ೨೩ ಜೂನ್ ೧೭೫೭ರಂದು, ಸಿರಾಜ್‌ಉದ್‌ದೌಲ್ ಮತ್ತು ರಾಬರ್ಟ್ ಕ್ಲೈವ್‌ನ ನಡುವಿನ ಯುದ್ಧದಲ್ಲಿ, ಮೀರ್ ಜಾಫರ್ ಮತ್ತು ರಾಯ್‌ದುರ್ಲಬ್‌ನ ವಿಶ್ವಾಸಘಾತಕತೆಯಿಂದ ಸಿರಾಜ್‌ಉದ್‌ದೌಲ್ ಸೋತು ಹೋದನು. ಮೀರ್‌ಜಾಫರ್‌ನ ಮಗ ಮೀರಾನ್ ಸಿರಾಜ್‌ಉದ್‌ದೌಲನನ್ನು ಕೊಲೆ ಮಾಡಿದ.

ಪ್ಲಾಸಿ ಕದನದ ಪರಿಣಾಮಗಳ ಬಗ್ಗೆ ನೋಡಿದಾಗ, ಮೀರ್‌ಜಾಫರ್ ಬಂಗಾಳದ ನವಾಬನಾದರೂ ಎಲ್ಲಾ ಅಧಿಕಾರ ಬ್ರಿಟಿಷರ ಕೈ ಸೇರಿತು. ಈ ಒಂದು ವ್ಯಾಪಾರಿ ಕಂಪನಿಯು ರಾಜಕೀಯ ಶಕ್ತಿಯಾಗಿ ಬೆಳೆದು, ಬ್ರಿಟಿಷ್ ಸಾಮ್ರಾಜ್ಯ ಸ್ಥಾಪನೆಗೆ ನಾಂದಿ ಹಾಡಿತು.[೨೫] ಆರ್ಥಿಕವಾಗಿ ಕಂಪನಿ ಭಾರಿ ಲಾಭಗಳಿಸಿತು. ಅಂದರೆ ಮೀರ್‌ಜಾಫರ್‌ನಿಂದ ೧ ಕೋಟಿ ರೂಪಾಯಿಗಳನ್ನು, ೨೪ ಪರಗಣಗಳ ಜಮೀನ್ದಾರಿಕೆಯನ್ನು ಪಡೆದರು. ಇತಿಹಾಸಕಾರರ ದೃಷ್ಟಿಯಲ್ಲಿ ಪ್ಲಾಸಿ ಕದನದ ಮಹತ್ವ ನೋಡಿದಾಗ, ಮ್ಯಾಲೆಸನ್ ಪ್ರಕಾರ, 'ಪ್ಲಾಸಿ ಕದನ ಬೀರಿದಷ್ಟು ವ್ಯಾಪಕವೂ, ಪರಿಣಾಮಕಾರಿಯೂ, ತಕ್ಷಣವೂ ಆದ ಪರಿಣಾಮಗಳನ್ನು ಮತ್ತ್ಯಾವ ಯುದ್ಧವೂ ಬೀರಲಿಲ್ಲ.'

ಕ್ರಿ.ಶ. ೧೭೬೪ರ ಬಕ್ಸಾರ್ ಕದನದ ಅಂಶಗಳನ್ನು ನೋಡಿದಾಗ, ಬಂಗಾಳದ ನವಾಬನಾದ ಮೀರ್‌ಖಾಸಿಂ ಸ್ವತಂತ್ರ ಸ್ವಭಾವದವನಾಗಿದ್ದು, ಬ್ರಿಟಿಷರ ಕೈಗೊಂಬೆಯಾಗಿ ಆಡಳಿತ ನಡೆಸಲು ಒಪ್ಪಲಿಲ್ಲ. ವ್ಯಾಪಾರ ಸಂಸ್ಥೆಯಾದ ಈಸ್ಟ್ ಇಂಡಿಯಾ ಕಂಪನಿಗೆ ರಾಜಕೀಯ ಅಧಿಕಾರ ಕೊಡಲು ಆತ ನಿರಾಕರಿಸಿದನು. ಹೀಗಾಗಿ ಕಂಪನಿ ಮತ್ತು ನವಾಬನ ನಡುವೆ ರಾಜಕೀಯ ಅಧಿಕಾರ ಹಂಚಿಕೆಯಲ್ಲಿ ವಿವಾದ ಉಂಟಾಯಿತು. ಬಂಗಾಳದಲ್ಲಿ ತಮ್ಮ ಪರಮಾಧಿಕಾರ ಸ್ಥಾಪಿಸುವ ಗುಂಗಿನಲ್ಲಿದ್ದ ಬ್ರಿಟಿಷರಿಗೆ ನವಾಬನನ್ನು ಅಧಿಕಾರದಿಂದ ಕೆಳಗಿಸುವುದು ಅನಿವಾರ್ಯವಾಯಿತು. ಇಂತಹ ಸಮಯದಲ್ಲಿ ತೆರಿಗೆ ರಹಿತ ವ್ಯಾಪಾರ ಅನುಮತಿ ಪಡೆದ ಕಂಪನಿ ಅಧಿಕಾರಿಗಳು, ಖಾಸಗಿ ವ್ಯಾಪಾರದಲ್ಲಿ ತೊಡಗಿ ಲಾಭ ಗಳಿಸುತ್ತಾ ನವಾಬನಿಗೆ ಸುಂಕ ಕೊಡದೆ ವಂಚಿಸುತ್ತಿದ್ದರು. ಇಂತಹ ನ್ಯಾಯಬಾಹಿರ ಚಟುವಟಿಕೆಗಳನ್ನು ತಡೆಯಲು ವಿಫಲನಾದ ನವಾಬ ಕೊನೆಗೆ ಭಾರತೀಯರ ವಸ್ತುಗಳ ಮೇಲಿನ ತೆರಿಗೆಯನ್ನು ರದ್ದುಪಡಿಸಿದ. ಬ್ರಿಟಿಷರು ಭಾರತೀಯರ ವಸ್ತುಗಳಿಗೆ ಮಾತ್ರ ತೆರಿಗೆ ಹಾಕುವಂತೆ ನವಾಬನನ್ನು ಕೇಳಿದರು. ಇದನ್ನು ನವಾಬ ತಿರಸ್ಕರಿಸಿದ್ದೇ ಬಕ್ಸಾರ್ ಕದನಕ್ಕೆ ನೇರ ಕಾರಣವಾಯಿತು.

೨೨ ಅಕ್ಟೋಬರ್ ೧೭೬೪ರಂದು ನಡೆದ ಬಕ್ಸಾರ್ ಯುದ್ಧದಲ್ಲಿ ಮೀರ್‌ಖಾಸಿಂ, ಶುಜಾ-ಉದ್‌ದೌಲ, ೨ನೇ ಷಾ ಆಲಂ, ಒಟ್ಟಾಗಿ ಹೋರಾಡಿದರೂ ಬ್ರಿಟಿಷ್ ಸೇನೆ ಸಂಯುಕ್ತ ಸೈನ್ಯದ ಮೇಲೆ ವಿಜಯ ಸಾಧಿಸಿತು. ಈ ವಿಜಯ ಬ್ರಿಟಿಷರ ಸೇನಾ ಶ್ರೇಷ್ಠತೆಯನ್ನು ತೋರಿಸಿತಲ್ಲದೆ ಭಾರತೀಯರ ಮಿಲಿಟರಿ ದೌರ್ಬಲ್ಯವನ್ನು ಬಯಲು ಮಾಡಿತು. ಈ ಕದನದ ಪರಿಣಾಮ ಎಂದರೆ, ಬಿಹಾರ, ಬಂಗಾಳ, ಒರಿಸ್ಸಾಗಳ ದಿವಾನಿ ಹಕ್ಕನ್ನು, ಕಂದಾಯವನ್ನು ವಸೂಲಿ ಮಾಡುವ ಹಕ್ಕನ್ನೂ, ಸಿವಿಲ್ ನ್ಯಾಯಾಂಗ ಅಧಿಕಾರವನ್ನು ಕಂಪನಿಗೆ ಕೊಡಲಾಯಿತು. ಅಲ್ಲದೆ ದಖ್ಖನಿನಲ್ಲಿ ಹೈದರಾಬಾದ್ ರಾಜ್ಯದ ಕೆಲವು ಉತ್ತರದ ಜಿಲ್ಲೆಗಳ ಜಹಗೀರು ಹಕ್ಕನ್ನು ಕಂಪನಿ ಪಡೆಯಿತು.

ಇನ್ನೊಂದು ಬಹಳ ಮುಖ್ಯವಾದ ವಿಚಾರ ಎಂದರೆ, ಭಾರತದಲ್ಲಿ ಹಾಗೂ ಸಮುದ್ರಾಂತರ ಪ್ರದೇಶಗಳಲ್ಲಿ ಯುದ್ಧಗಳನ್ನು ನಡೆಸಲು ಮತ್ತು ನೌಕಾಪಡೆಗಳು, ಸೈನ್ಯಗಳು, ಕೋಠಿಗಳು ಹಾಗೂ ವ್ಯಾಪಾರ ಮಳಿಗೆಗಳನ್ನು ರಕ್ಷಿಸಲು ಭಾರೀ ಮೊತ್ತದ ಹಣ ಕಂಪನಿಗೆ ಅಗತ್ಯವಾಗಿತ್ತು. ಬ್ರಿಟಿಷ್ ಸರಕಾರಕ್ಕಾಗಲಿ, ಈಸ್ಟ್ ಇಂಡಿಯಾ ಕಂಪನಿಗಾಗಲಿ ಅದನ್ನು ಪೂರೈಸುವಷ್ಟು ಸಂಪನ್ಮೂಲಗಳಿರಲಿಲ್ಲ. ಆದ್ದರಿಂದ ಹಣವನ್ನು ಭಾರತದಲ್ಲೆ ಸಂಗ್ರಹಿಸಬೇಕಾಗಿತ್ತು. ಅದಕ್ಕಾಗಿ ಕಲ್ಕತ್ತಾ, ಮದರಾಸು, ಬೊಂಬಾಯಿ ಮೊದಲಾದ ತೀರ ಪ್ರದೇಶಗಳ ಕೋಠಿಗಳಿಂದಲೂ, ನಗರಗಳಲ್ಲಿ ಸ್ಥಳೀಯ ತೆರಿಗೆಗಳನ್ನು ಹಾಕುವುದರ ಮೂಲಕ ಕಂಪನಿಯು ಇದನ್ನು ಸಾಧಿಸಿತು. ಕಾಲಕ್ರಮೇಣ ತಮ್ಮ ಆರ್ಥಿಕ ಸಂಪನ್ಮೂಲಗಳನ್ನು ಹೆಚ್ಚು ಪಡಿಸಿಕೊಳ್ಳುವುದಕ್ಕಾಗಿ ಹೆಚ್ಚು ಹೆಚ್ಚು ತೆರಿಗೆಗಳನ್ನು ವಿಧಿಸುವುದು ಅನಿವಾರ್ಯವಾಯಿತು.[೨೬] ಇದೇ ಸಂದರ್ಭದಲ್ಲಿ ಬ್ರಿಟಿಷ್ ಬಂಡವಾಳಶಾಹಿಯೂ ಕೂಡ ತನ್ನ ಬೆಳವಣಿಗೆಯ ಅತ್ಯಂತ ತೀವ್ರವಾದ ಹಂತವನ್ನು ಮುಟ್ಟಿತು. ಹೆಚ್ಚು ಹೆಚ್ಚು ಅಭಿವೃದ್ಧಿಯಾಗಲು ಅಪಾರವಾದ ಬಂಡವಾಳವನ್ನು ಕೈಗಾರಿಕೆ, ವಾಣಿಜ್ಯ ಹಾಗೂ ಕೃಷಿ ರಂಗಗಳಲ್ಲಿ ಹೂಡುವುದು ಅವಶ್ಯಕವಾಗಿತ್ತು. ಅಂತಹ ಹೂಡಿಕೆಗಳಿಗೆ

ಸಂಪನ್ಮೂಲಗಳು ಬ್ರಿಟನ್ನಿನಲ್ಲಿ ಮಿತವಾಗಿದ್ದುದರಿಂದ, ಬ್ರಿಟಿಷ್ ಬಂಡವಾಳಶಾಹಿಯ ಅಭಿವೃದ್ಧಿಗೆ ಅಗತ್ಯವಾದ ಬಂಡವಾಳವನ್ನು ಭಾರತದಲ್ಲಿ ಕಂಡುಕೊಂಡರು.

ಬ್ರಿಟನ್ ಕೈಗಾರಿಕಾ ದೇಶವಾಗಿದ್ದರಿಂದ ಹಾಗೂ ಅಲ್ಲಿ ನಗರೀಕರಣ ಪ್ರಕ್ರಿಯೆ ಚುರುಕಿನಿಂದ ಕೂಡಿದ್ದರಿಂದಾಗಿ, ಭಾರತವನ್ನು ಮತ್ತೊಂದು ಕೈಗಾರಿಕಾ ದೇಶವನ್ನಾಗಿ ಅಭಿವೃದ್ಧಿಪಡಿಸಲು ಬ್ರಿಟಿಷ್ ಸರಕಾರ ಇಷ್ಟಪಡಲಿಲ್ಲ. ಯುರೋಪಿನ ಕೈಗಾರಿಕೀಕರಣ ಮತ್ತು ನಗರೀಕರಣಕ್ಕೆ ಪೂರಕವಾದ ವ್ಯವಸ್ಥೆಯೊಂದನ್ನು ಹುಟ್ಟು ಹಾಕುವುದೇ ಬ್ರಿಟಿಷರ ಉದ್ದೇಶವಾಗಿತ್ತು. ಇದರಿಂದಾಗಿ ಕೃಷಿ ಕ್ಷೇತ್ರದಲ್ಲಿ ಕೆಲವೊಂದು ಪ್ರಯೋಗಗಳಾದವು. ಇದು ಪರೋಕ್ಷವಾಗಿ ಕೆಲವೊಂದು ಕೈಗಾರಿಕೆಗಳ ಹುಟ್ಟಿಗೆ ಹಾಗೂ ನಗರ ಪ್ರದೇಶಗಳ ಅಭಿವೃದ್ಧಿಗೆ ಕಾರಣವಾಯಿತು. ಹಳೆಯ ರಸ್ತೆಗಳ ದುರಸ್ತಿ, ಹೊಸ ರಸ್ತೆಗಳ ನಿರ್ಮಾಣ, ರೈಲು ಮಾರ್ಗಗಳ ನಿರ್ಮಾಣ ಮುಂತಾದವುಗಳನ್ನು ಮಾಡಿದರು.[೨೭] ಬಿಪನ್ ಚಂದ್ರರವರು ಬ್ರಿಟಿಷ್ ವಸಾಹತು ನೀತಿಯನ್ನು ಈ ರೀತಿ ವ್ಯಾಖ್ಯಾನಿಸಿದ್ದಾರೆ. "ವಸಾಹತುಶಾಹಿ ಹೊಸ ಉತ್ಪಾದನಾ ವಿಧಾನವಲ್ಲ. ಅದು ಹಲವಾರು ಉತ್ಪಾದನಾ ವಿಧಾನಗಳನ್ನು ಒಳಗೊಂಡಿರುವ ಸಮ್ಮಿಶ್ರ ವ್ಯವಸ್ಥೆ. ಆ ವ್ಯವಸ್ಥೆಯ ಒಳಗೆ ಊಳಿಗಮಾನ್ಯ, ಜೀತ, ಶೋಷಣೆ, ವ್ಯಾಪಾರ, ಕೈಗಾರಿಕೆ, ಕೃಷಿ ಮುಂತಾದವುಗಳು ಸೇರಿ ಕೊಂಡಿರುತ್ತದೆ.[೨೮]

ವಸಾಹತು ಇರುವುದೇ ತಾಯ್ನಾಡಿನ ಲಾಭಕ್ಕಾಗಿ ಎಂಬ ಸೂಕ್ತಿಯಡಿ ಈ ಹೊಸ ವಸಾಹತು ಪದ್ಧತಿ ಕೆಲಸ ಮಾಡುತ್ತಿತ್ತು. ಇಂಥ ಪದ್ಧತಿಯಲ್ಲಿ ತಾಯ್ನಾಡಿಗೆ ಅಥವಾ ಸಾಮ್ರಾಜ್ಯಶಾಹಿ ದೇಶಕ್ಕೆ ಯಾವಾಗಲೂ ಲಾಭವಾಗುತ್ತಿತ್ತು. ಹೇಳಬೇಕೆಂದರೆ, ಬ್ರಿಟನ್ ಹಾಗೂ ವಸಾಹತುಗಳ ನಡುವಿನ ಸಂಬಂಧ ಹೇಗಿತ್ತೆಂದರೆ, ವಸಾಹತುಗಳನ್ನು ಹಾಳು ಮಾಡಿ ಬ್ರಿಟನ್ ಬೆಳೆಯುತ್ತಿತ್ತು. ಈ ವಸಾಹತುಗಳು ಕಚ್ಚಾ ಸಾಮಗ್ರಿಗಳನ್ನು ಪೂರೈಸುತ್ತಿದ್ದವಲ್ಲದೆ, ಸಿದ್ಧವಸ್ತುಗಳಿಗೆ ಮಾರುಕಟ್ಟೆಗಳಾದವು. ವಸ್ತುಗಳನ್ನು ವಸಾಹತು ಪ್ರದೇಶದಲ್ಲಿ ತಂದು ಹಾಕಿ ಪಟ್ಟಣಗಳಿಗೆ ಮಾರುಕಟ್ಟೆ ಒದಗಿಸುತ್ತಿತ್ತು. ಇದರಿಂದಾಗಿ ವಸಾಹತುಗಳು ತಮ್ಮ ಕಚ್ಚಾ-ಸಾಮಗ್ರಿಗಳನ್ನು ಕಳೆದುಕೊಂಡು, ಕ್ರಮೇಣ ಬಡವಾಗುತ್ತ ಹೋದವು. ಪ್ರೋತ್ಸಾಹ, ಪೋಷಣೆ ಹಾಗೂ ಬೇಡಿಕೆಯ ಕೊರತೆಯಿಂದಾಗಿ ಅವು ತಯಾರಿಕೆಯನ್ನು ನಿಲ್ಲಿಸಬೇಕಾಯಿತು. ಆದ್ದರಿಂದ ಕ್ರಮೇಣ ಸ್ಥಳೀಯ ಅರ್ಥವ್ಯವಸ್ಥೆಯು ಕುಸಿಯಲಾರಂಭಿಸಿತು.[೨೯]

ವಸಾಹತುಶಾಹಿ ತರುವ ಆಧುನೀಕರಣವು ಕೇವಲ ಆರ್ಥಿಕ ಪರಿವರ್ತನೆಗಳಿಗಷ್ಟೇ ಸೀಮಿತ ವಾದದ್ದಲ್ಲ. ಆಯಾ ದೇಶದ ಸಾಮಾಜಿಕ, ಆಡಳಿತ, ಸಾಂಸ್ಕೃತಿಕ ಜೀವನದ ಮೇಲೂ ಗಾಢವಾದ ಪರಿಣಾಮವನ್ನು ಬೀರುವಂತದ್ದು. ಬ್ರಿಟಿಷ್ ಆಳ್ವಿಕೆ ಅನಿವಾರ್ಯ ಎನ್ನುವ ಭಾವನೆಯನ್ನು ಮೂಡಿಸುವುದೇ ಅದರ ಮೊದಲ ಕೆಲಸ. ಆ ಕಾರಣಕ್ಕಾಗಿಯೇ ಅದು ಬ್ರಿಟಿಷ್ ಆಡಳಿತವನ್ನು ಆಧುನಿಕ ಎನ್ನುವ ಹೆಸರಿನಿಂದ ಕರೆಯಿತು. ಬ್ರಿಟಿಷ್‌ಪೂರ್ವ ಅವಧಿಯನ್ನು 'ಕತ್ತಲೆಯ ಯುಗ' ಎಂದು ಕರೆಯಲಾಯಿತು. ಕೈಗಾರಿಕಾ ಬಂಡವಾಳವು ಎಲ್ಲ ಕ್ಷೇತ್ರಗಳಲ್ಲೂ ಬದಲಾವಣೆಯನ್ನು ತರುವಷ್ಟು ಸಾಮರ್ಥ್ಯವನ್ನು ಹೊಂದಿರುವಂತದ್ದು ಎಂದು ಸಾಬೀತುಪಡಿಸುವ ಪ್ರಯತ್ನವನ್ನು ಬ್ರಿಟಿಷ್ ಸರಕಾರ ಮಾಡಿತಲ್ಲದೇ

ಭಾರತವು ಪ್ರಾಚೀನ ಮತ್ತು ಮಧ್ಯಕಾಲೀನದಲ್ಲಿ ಸಾಧಿಸಲಾಗದ್ದನ್ನು ಆಧುನಿಕದಲ್ಲಿ ಬ್ರಿಟಿಷರ ನೆರವಿನೊಂದಿಗೆ ಸಾಧಿಸಬಹುದು ಎನ್ನುವುದು ಅದರ ವಾದವಾಗಿತ್ತು.

ಔದ್ಯೋಗಿಕ ಕ್ರಾಂತಿಯಿಂದ ಇಂಗ್ಲೆಂಡಿನಲ್ಲಿ ದಿಢೀರ್ ಆಗಿ ಅನೇಕ ಉದ್ದಿಮೆಗಳು ಅದರಲ್ಲಿಯೂ ಬಟ್ಟೆ ಗಿರಣಿಗಳು ತಲೆ ಎತ್ತಿದವು. ಮ್ಯಾಂಚೆಸ್ಟರ್, ಲೀಡ್ಸ್, ಬರ್ಮಿಂಗ್-ಹ್ಯಾಮ್‌ನಂತಹ ಸಣ್ಣ ಹಳ್ಳಿಗಳು ಜಾದೂ ಮಾಡಿದ ತರಹ ಪಟ್ಟಣಗಳಾಗಿ ಬೆಳೆದವು ಮತ್ತು ಈ ಬಟ್ಟೆ ಕಾರ್ಖಾನೆಗಳಿಗೆ ಬೇಕಾದ ಕಚ್ಚಾವಸ್ತು ಹತ್ತಿಗಾಗಿ ಬೇಡಿಕೆ ಹೆಚ್ಚಾದಾಗ ಇಂಗ್ಲೆಂಡ್ ತನ್ನ ವಸಾಹತು ಭಾರತದ ಹತ್ತಿಯನ್ನು ಆಮದು ಮಾಡಿಕೊಳ್ಳಬೇಕಾಯಿತು. ಇಂಗ್ಲೆಂಡಿನ ಕಾರ್ಖಾನೆಗಳಿಗೆ ಹತ್ತಿ ಪೂರೈಸಲು ಬ್ರಿಟಿಷ್ ಸರಕಾರ ಹತ್ತಿ ಬೆಳೆಯುವ ಪ್ರದೇಶಗಳ ಸರ್ವೇ ಆರಂಭಿಸಿ, ದೊಡ್ಡ ಪ್ರಮಾಣದಲ್ಲಿ ಸುಲಭವಾಗಿ ಹತ್ತಿಯನ್ನು ತೆಗೆದುಕೊಂಡು ಹೋಗಲು ರೇಲ್ವೆ ಹಳಿಗಳನ್ನು ಹಾಕಲು ಆರಂಭಿಸಿತು.[೨೦] ಉದಾಹರಣೆಗೆ, 'ಹೊಸಪೇಟೆ-ಕೊಟ್ಟೂರು' ರೈಲು ಮಾರ್ಗ. ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲೂಕಿನ ಒಂದು ಚಿಕ್ಕಪಟ್ಟಣ ಕೊಟ್ಟೂರು. ಮದ್ರಾಸ್ ಪ್ರಾವಿನ್ಸಿಗೆ ಸೇರಿದ್ದ ಕೊಟ್ಟೂರು ಮತ್ತು ಸುತ್ತಮುತ್ತಲಿನ ಪ್ರದೇಶಗಳು ಹತ್ತಿ ಬೆಳೆಗೆ ಹೆಸರುವಾಸಿಯಾಗಿದ್ದವು. ಇಲ್ಲಿನ ಶ್ರೇಷ್ಟ ಹತ್ತಿ ಬೆಳೆಯಿಂದ ಈ ಪ್ರದೇಶವನ್ನು 'ಕಾಟನ್-ಬೆಲ್ಟ್' ಎಂದೇ ಗುರುತಿಸಲಾಗಿತ್ತು. ಹಾಗಾಗಿ ಈ ಪ್ರದೇಶದಲ್ಲಿ ಬೆಳೆದ ಹತ್ತಿಯನ್ನು ಇಂಗ್ಲೆಂಡಿಗೆ ಸಾಗಿಸಲು ಸುಮಾರು ಕ್ರಿ.ಶ. ೧೯೦೫ರಲ್ಲಿ ಹೊಸಪೇಟೆಯಿಂದ ಕೊಟ್ಟೂರಿಗೆ ರೇಲ್ವೆ ಹಳಿಗಳನ್ನು ಹಾಕಲಾಯಿತು. ಒಂದು ಮೂಲೆಯಲ್ಲಿರುವ ಕೊಟ್ಟೂರು ಪಟ್ಟಣಕ್ಕೆ ಬ್ರಿಟಿಷರು ರೇಲ್ವೆ ಸಂಪರ್ಕ ಜೋಡಿಸಿದುದರ ಹಿಂದೆ ಅವರ ವಾಣಿಜ್ಯ ನೀತಿಯನ್ನು ಅರ್ಥ ಮಾಡಿಕೊಳ್ಳಬಹುದು.

ಹೀಗೆ ಆರ್ಥಿಕ ದೃಷ್ಟಿಯಿಂದ ವ್ಯವಸ್ಥಿತವಾಗಿ ನೀತಿ ನಿಯಮಗಳನ್ನು ರೂಪಿಸುವಲ್ಲಿ ಬ್ರಿಟಿಷರು ತಮ್ಮ ಚಾಣಾಕ್ಷತನವನ್ನು ಮೆರೆದರು. ಆಡಳಿತಾತ್ಮಕವಾಗಿ ನೀತಿ ನಿಯಮಗಳನ್ನು ರೂಪಿಸಿ ಅದರ ಮುಖಾಂತರ ಅತ್ಯಂತ ಸುಲಭವಾಗಿ ಯುದ್ಧರಹಿತವಾಗಿ, ಬ್ರಿಟಿಷರು ಭಾರತದಲ್ಲಿ ಸಾಮ್ರಾಜ್ಯ ವಿಸ್ತರಣೆಯನ್ನು ಮಾಡಿದ ರೀತಿ ನೀತಿಗಳು ಎಂಥವರನ್ನು ಆಶ್ಚರ್ಯಗೊಳಿಸುತ್ತದೆ. ಲಾರ್ಡ್ ವೆಲ್ಲೆಸ್ಲಿಯ 'ಸಹಾಯಕ ಸೈನ್ಯ ಪದ್ಧತಿ', ಲಾರ್ಡ್‌ಡಾಲ್‌ಹೌಸಿಯ 'ದತ್ತುಮಕ್ಕಳಿಗೆ ಹಕ್ಕಿಲ್ಲ' ಎಂಬ ನೀತಿ, ಲಾರ್ಡ್ ಮೆಕಾಲೆಯವರ ಇಂಗ್ಲಿಷ್ ಶಿಕ್ಷಣ, ಲಾರ್ಡ್ ವಿಲಿಯಂ ಬೆಂಟಿಂಕ್‌ರ ಸಾಮಾಜಿಕ ಸುಧಾರಣೆಗಳು, ಬ್ರಿಟಿಷ್ ಸಾಮ್ರಾಜ್ಯಶಾಹಿತ್ವದ ಸ್ಥಾಪನೆಗೆ ಅತ್ಯಂತ ಪ್ರಮುಖವಾದ ಪಾತ್ರವನ್ನು ವಹಿಸಿದವು. ಉದಾಹರಣೆಗೆ ಲಾರ್ಡ್ ವೆಲ್ಲೆಸ್ಲಿಯ ಸಹಾಯಕ ಸೈನ್ಯ ಪದ್ಧತಿಯಿಂದ ವಶಪಡಿಸಿಕೊಂಡ ದೇಶೀಯ ಸಂಸ್ಥಾನಗಳೆಂದರೆ ಹೈದ್ರಾಬಾದ್ ನಿಜಾಮ, ಕರ್ನಾಟಕದ ನವಾಬ, ತಾಂಜಾವೂರಿನ ಸರ್ಫೋಜಿ, ಮೈಸೂರು, ಮರಾಠ ಪೇಶ್ವೆ, ಔಧನ ನವಾಬ, ಬೀರಾರ್‌ನ ರಾಜ ಬೋಂಸ್ಲೆ, ಗ್ವಾಲಿಯರ್‌ನ ಸಿಂಧ್ಯ ಪ್ರಮುಖರು. ಅದೇ ರೀತಿ ಲಾರ್ಡ್‌ಡಾಲ್‌ಹೌಸಿಯ 'ದತ್ತುಮಕ್ಕಳಿಗೆ ಹಕ್ಕಿಲ್ಲ' ಎಂಬ ಸಿದ್ಧಾಂತದ ಮೇಲೆ ವಶಪಡಿಸಿಕೊಂಡ ರಾಜ್ಯಗಳೆಂದರೆ, ೧೮೪೮ರಲ್ಲಿ ಮೊದಲು ಸತಾರ, ನಂತರ ಜೈತ್‌ಪುರ, ಸಂಬಾಲ್‌ಪುರ, ಭರತ್‌ಪುರ, ಉದಯಪುರ, ಕತೌಲಿ, ಆರ್ಕಾಟ್, ಝೂನ್ಸಿ, ನಾಗಪುರ ಮುಂತಾದವು. ಡಾಲ್‌ಹೌಸಿ, 'ನಾನು

ಭಾರತವನ್ನು ನೆಲಸಮ ಮಾಡುತ್ತೇನೆ' ಎಂಬ ಅಹಂಕಾರದಿಂದ ಭಾರತಕ್ಕೆ ಬಂದನು. 'ಹಿಮಾಲಯದಿಂದ ಕನ್ಯಾಕುಮಾರಿಯವರೆಗೆ ಆಂಗ್ಲ ಸಾಮ್ರಾಜ್ಯವು ಅಖಂಡವಾಗಿ ಹಬ್ಬಿದೆ' ಎಂದು ಬರೆದನು.[೩೧]

ಬ್ರಿಟಿಷರು ದಕ್ಷಿಣ ಭಾರತವನ್ನು ಹೆಚ್ಚು ಹಿಂಸಾತ್ಮಕವಾಗಿ ಮತ್ತು ಶೀಘ್ರವಾಗಿ ವಶಕ್ಕೆ ತೆಗೆದುಕೊಂಡರು. ಮರಾಠರು, ಹೈದರಾಬಾದಿನ ನಿಜಾಮ, ಹೈದರ್‌ಅಲಿ ಹಾಗೂ ಟಿಪ್ಪುಸುಲ್ತಾನನ (ಆಂಗ್ಲೋ-ಮೈಸೂರು ಯುದ್ಧಗಳು) ಯುದ್ಧ ಆರಂಭವಾಗಿ ತಿರುವಾಂಕೂರು, ಕೊಚ್ಚಿನ್ ಸೈನ್ಯಗಳು ಪರಾಭವದವರೆಗೆ ದಾಳಿ ನಡೆಯಿತು. ಟಿಪ್ಪುಸುಲ್ತಾನನ ಪತನದ ನಂತರ ದೊಂಡಿಯವಾಘ್ ಎಂಬ ಕರ್ನಾಟಕದ ಸೇನಾನಿ, ಪಂಜಾಲಂಕುರುಚಿಯ ರಾಜವೀರ ಪಾಂಡ್ಯ ಕಟ್ಟಬೊಮ್ಮನ್ ಕರಾವಳಿಯ ನಾಯಕ ಕೃಷ್ಣಪ್ಪ, ಕೇರಳದ ಪಿಚ್ಚೈರಾಜರವರು ಬ್ರಿಟಿಷರ ವಿರುದ್ಧ ದಂಗೆ ಎದ್ದರು.

ದಕ್ಷಿಣ ಭಾರತದ ಯಾವುದೇ ಭಾಗವು ಬ್ರಿಟಿರಿಗೆ ಪ್ರತಿರೋಧ ಒಡ್ಡದೇ ಶರಣಾಗಲಿಲ್ಲ. ತಮ್ಮ ತಮ್ಮಲ್ಲಿಯೇ ಕಾದಾಡುತ್ತಿದ್ದ ಪಾಳೆಯಗಾರರನ್ನು ಪ್ರತ್ಯೇಕಿಸಿ ಪರಾಭವಗೊಳಿಸಲಾಯಿತು. ಹದ್ದು ಬಸ್ತಿಗೆ ಬಾರದವರನ್ನು ಕೊಲ್ಲಲಾಯಿತು. ಉಳಿದವರನ್ನು ಹಾಕಿದ ಗೆರೆ ದಾಟದ ಸ್ಥಿತಿಯಲ್ಲಿಡಲಾಯಿತು. ಬ್ರಿಟಿಷರ ಬಲದೆದುರು ತತ್ತರಿಸಿದ ಈ ಪಾಳೆಯಗಾರರು ಐಕ್ಯತೆ ಸ್ಥಾಪಿಸಲಾರದವರಾದರು. ಬ್ರಿಟಿಷರ ವಿರುದ್ಧ ಹೋರಾಡುವುದು ಕಠಿಣವೂ, ಅಪಾಯಕಾರಿಯೂ, ಆದ ಸಂಗತಿ ಎಂದು ಮನಗಂಡ ದೇಶೀಯ ರಾಜರು ಬ್ರಿಟಿಷ್ ವಸಾಹತುಶಾಹಿಯ ಜೊತೆಗೆ ಹೊಂದಾಣಿಕೆ ಮಾಡಿಕೊಳ್ಳಲು ಮುಂದಾದರು.[೩೨] ೧೭೯೯ರಲ್ಲಿ ನಡೆದ ೪ನೇ ಮೈಸೂರು ಯುದ್ಧದಲ್ಲಿ ಟಿಪ್ಪುಸುಲ್ತಾನನ ಮರಣದ ನಂತರ ಬ್ರಿಟಿಷರು ಕರ್ನಾಟಕದ ಮೇಲೆ ಹೆಚ್ಚು ಕಡಿಮೆ ತಮ್ಮ ಪ್ರಭುತ್ವವನ್ನು, ಏಕಸ್ವಾಮ್ಯವನ್ನು ಸ್ಥಾಪಿಸಿಕೊಂಡರು. ಕರ್ನಾಟಕವನ್ನು ಹಲವು ತುಂಡುಗಳನ್ನಾಗಿ ಒಡೆದು, ಮೈಸೂರು ಸಂಸ್ಥಾನ, ಹೈದರಾಬಾದ್ ಕರ್ನಾಟಕ, ಮುಂಬಯಿ ಕರ್ನಾಟಕ, ಮದರಾಸು ಕರ್ನಾಟಕ ಎಂದು ತಮ್ಮ ಅನುಕೂಲಕ್ಕೆ ತಕ್ಕಂತೆ ವಿಂಗಡಿಸಿಕೊಂಡರು. ಜೊತೆಗೆ ಸ್ವತಂತ್ರ ಸಂಸ್ಥಾನಗಳು ಪರಾಧೀನ ತುಂಡುಗಳಾಗಿ ಬೇರೆ ಬೇರೆ ಬಗೆಯ ಆಡಳಿತಗಳಿಗೆ ಒಳಪಟ್ಟಿದ್ದರೂ, ಹಲವಾರು ಘಟಕಗಳಾಗಿ ವಿಭಜನೆಗೊಂಡಿದ್ದರೂ, ಬ್ರಿಟಿಷ್ ಸರಕಾರ ಅವೆಲ್ಲವುಗಳ ಮೇಲೆ ತನ್ನ ನಿಯಂತ್ರಣ ಸಾಧಿಸಿತ್ತು.

ಬ್ರಿಟಿಷ್ ಸಾಮ್ರಾಜ್ಯಶಾಹಿ ನೀತಿಯಿಂದ ಭಾರತೀಯರು ತಮ್ಮ ರಾಜಕೀಯ ಸ್ವಾತಂತ್ರ್ಯದಿಂದ ವಂಚಿತರಾಗಿ ಗುಲಾಮಗಿರಿಗೆ ದೂಡಲ್ಪಟ್ಟರು. ಭಾರತವು ಪ್ರಥಮ ಬಾರಿಗೆ ಯುರೋಪಿಯನ್ ಆಳ್ವಿಕೆಗೆ ಒಳಪಟ್ಟಿತು. ಇದರ ಪರಿಣಾಮವಾಗಿ ಭಾರತ ತನ್ನ ರಾಜಕೀಯ ಸ್ವಾತಂತ್ರ್ಯ ಕಳೆದುಕೊಂಡು ಇಡೀ ಜನ ಗುಲಾಮಗಿರಿಗೆ ಒಳಗಾದರು. ಇದರಿಂದ ಭಾರತೀಯರಲ್ಲಿ ಅಂದರೆ ವಿವಿಧ ವರ್ಗದ ಜನಸಾಮಾನ್ಯರು, ನಾಗರಿಕರು ಹಾಗೂ ರಾಜರಲ್ಲಿ ಅತೃಪ್ತಿ, ಹಗೆತನ ಬೆಳೆಯಲಿಕ್ಕೆ ಕಾರಣವಾಯಿತು. ಈ ಅತೃಪ್ತಿ ತಮ್ಮ ಸ್ಥಾನಮಾನ ಕಳೆದುಕೊಂಡ ರಾಜಮಹಾರಾಜರಲ್ಲಿ ಇತ್ತೇ ಹೊರತು ಸಾಮಾನ್ಯ ಜನರಲ್ಲಿ ಇರಲಿಲ್ಲ ಎನ್ನುವ ರೀತಿಯಲ್ಲಿ ಬ್ರಿಟಿಷ್ ಆಡಳಿತಗಾರರು ಮತ್ತು ಬ್ರಿಟಿಷ್ ಇತಿಹಾಸಕಾರರು ನಮ್ಮನ್ನು ನಂಬುವಂತೆ ವಿಮರ್ಶೆ ಮಾಡಿದ್ದಾರೆ ಅಥವಾ ವಾದವನ್ನು ಮಂಡಿಸಿದ್ದಾರೆ. ವಸಾಹತು ನೀತಿಯಿಂದ ಭಾರತದ ರಾಜಕೀಯ ಮತ್ತು ಆಡಳಿತಾತ್ಮಕ ರಂಗದಲ್ಲಿ ಆದ ದುಷ್ಪರಿಣಾಮಗಳ ಬಗ್ಗೆ ಪಮೇಲ ನೈಟಿಂಗೇಲ್, ಸಂಕ್ಷಿಪ್ತವಾಗಿ

ವಿಶ್ಲೇಷಿಸುತ್ತಾ, "ಭಾರತೀಯರು ತಮ್ಮದೇ ಆದ ರಾಷ್ಟ್ರದಲ್ಲಿ, ಆಡಳಿತದಲ್ಲಿ ತಮಗೆ ಯಾವುದೇ ಅಧಿಕಾರ, ಸ್ಥಾನಮಾನ ಇಲ್ಲದೇ ಇರುವುದನ್ನು ಮೂಕ ಪ್ರೇಕ್ಷಕರಾಗಿ ವೀಕ್ಷಿಸುತ್ತಿದ್ದರು."[೩೩]

ಪಾರ್ಕರ್‌ಮೂನ್, ಎಂಬುವವರು ಬ್ರಿಟಿಷ್ ಸಾಮ್ರಾಜ್ಯಶಾಹಿ ನೀತಿಯ ಸ್ವರೂಪವನ್ನು ಈ ರೀತಿ ತಿಳಿಸಿದ್ದಾರೆ. "ಬ್ರಿಟಿಷರು ಭಾರತಕ್ಕೆ ಆಗಮಿಸಿದ ಉದ್ದೇಶವು ಭಾರತೀಯರ ಅಭಿವೃದ್ಧಿಗಾಗಲಿ, ಲಾಭಕ್ಕಾಗಿ ಅಲ್ಲ. ಬ್ರಿಟನ್ನಿನ ಪ್ರಭುತ್ವದ ಶ್ರೇಯಸ್ಸಿಗೋಸ್ಕರ."[೩೪]

ಯಾವೊಬ್ಬ ದೇಶೀಯ ಅರಸರು ಬ್ರಿಟಿಷರನ್ನು ಎದುರು ಹಾಕಿಕೊಳ್ಳುವ ಮಟ್ಟಕ್ಕೆ ಹೋಗದಂತಹ ಸ್ಥಿತಿಯನ್ನು ತಲುಪಿದರು. ಇದರಿಂದ ಅತ್ಯಂತ ವ್ಯವಸ್ಥಿತವಾಗಿ ಬ್ರಿಟಿಷ್ ಆಡಳಿತಗಾರರು, ಸಂದರ್ಭೋಚಿತವಾಗಿ ವರ್ತಿಸುತ್ತಾ, ಸಿಕ್ಕ ಎಲ್ಲ ಅವಕಾಶಗಳನ್ನು ಉಪಯೋಗಿಸಿಕೊಂಡು, ತಮ್ಮ ಸಾಮ್ರಾಜ್ಯವನ್ನು ಉತ್ತರದ ಹಿಮಾಲಯದಿಂದ ದಕ್ಷಿಣದ ಕನ್ಯಾಕುಮಾರಿಯವರೆಗೆ, ಪೂರ್ವದಲ್ಲಿ ಬಂಗಾಳಕೊಲ್ಲಿಯಿಂದ ಪಶ್ಚಿಮದ ಅರಬ್ಬೀ ಸಮುದ್ರವರೆಗೆ ನೆಲ ಮತ್ತು ಜಲದ ಮೇಲೆ ತಮ್ಮ ಸಾರ್ವಭೌಮತ್ವವನ್ನು ಸ್ಥಾಪಿಸಿ ೧೮೫೭ರ ಪೂರ್ವದಲ್ಲಿ ಅತ್ಯಂತ ಉನ್ನತ ಶಿಖರಕ್ಕೆ ಏರಿದ್ದರು. ಸಣ್ಣಪುಟ್ಟ ದೇಶೀಯ ಸಂಸ್ಥಾನಗಳು ಬ್ರಿಟಿಷ್ ಪ್ರಭುತ್ವದ ವಿರುದ್ಧ ಧ್ವನಿ ಎತ್ತಿದ ನಿದರ್ಶನಗಳು ಇತಿಹಾಸದಲ್ಲಿ ಸಿಗುತ್ತವೆಯಾದರೂ, ಅವು ಸ್ವಾರ್ಥತೆಯಿಂದಾಗಿ ಅಥವಾ ದುಡುಕಿನ ಕ್ರಮದಿಂದಾಗಿ ಯಶಸ್ವಿಯಾಗಲಿಲ್ಲ.

ಈ ರೀತಿ ಕ್ರಿ.ಶ. ೧೬೦೦ರಲ್ಲಿ ಈಸ್ಟ್ ಇಂಡಿಯಾ ಕಂಪನಿಯಿಂದ ಆರಂಭವಾಗಿ, ವಾರನ್ ಹೇಸ್ಟಿಂಗ್ಸ್‌ರಿಂದ, ಲಾರ್ಡ್ ಕ್ಯಾನಿಂಗ್‌ವರೆಗಿನ ಗವರ್ನರ್ ಜನರಲ್‌ಗಳ ಅವಿರತ ಶ್ರಮದಿಂದಾಗಿ ಭಾರತದಲ್ಲಿ ಬ್ರಿಟಿಷರು ಸಾಮ್ರಾಜ್ಯ ಸ್ಥಾಪಿಸಲು ಕಾರಣವಾಯಿತು. ಸಾಮ್ರಾಜ್ಯಶಾಹಿ ವಿಸ್ತರಣೆಯಲ್ಲಿ ದೇಶೀಯ ಜನತೆಯ ಕುತಂತ್ರತೆಯು ಸಹ ಹೆಚ್ಚಿನ ಪಾತ್ರ ವಹಿಸಿದೆ. ಇದರ ಬಗ್ಗೆಯೂ ವ್ಯವಸ್ಥಿತವಾದ ಸಂಶೋಧನೆ ಆಗಬೇಕಾಗಿದೆ. ಒಟ್ಟಿನಲ್ಲಿ ಬ್ರಿಟಿಷ್ ಸಾಮ್ರಾಜ್ಯಶಾಹಿತ್ವ ಪ್ರಬಲವಾಗಿ ಬೇರೂರಿ ಅಖಂಡ ಭಾರತವನ್ನು ಬ್ರಿಟಿಷ್‌ಮಯವಾಗಿ ಬದಲಾಯಿಸುವತ್ತ ಹೆಜ್ಜೆ ಇಟ್ಟು ಅದರಲ್ಲಿ ಯಶಸ್ವಿಯಾಯಿತು. ಭಾರತವನ್ನು ಬ್ರಿಟಿಷ್ ಭಾರತವನ್ನಾಗಿ ಪರಿವರ್ತಿಸಿ ತನ್ನ ತಾಯ್ನಾಡಿನ ಬೇಡಿಕೆಗಳನ್ನು ಪೂರೈಸಿಕೊಂಡಿತು. ಇದು ಭಾರತದಲ್ಲಿ ದ್ವಂದ್ವ, ಅರಾಜಕತೆ ಹಾಗೂ ಅಸಮಾಧಾನಗಳ ಹುಟ್ಟಿಗೂ ಕಾರಣವಾಯಿತು. ಇದರ ಪರಿಣಾಮವೇ ಬ್ರಿಟಿಷ್ ಸರಕಾರದ ವಿರುದ್ಧ ಕಾಣಿಸಿಕೊಂಡ ಹೋರಾಟಗಳು.

### ೨.೩. ಸಾಮ್ರಾಜ್ಯಶಾಹಿಯ ಪರ ಹಾಗೂ ವಿರುದ್ಧ ನಿಲುವುಗಳು

ಸಾಮ್ರಾಜ್ಯಶಾಹಿಯ ಪರ ಹಾಗೂ ವಿರುದ್ಧ ನಿಲುವುಗಳನ್ನು ನೋಡುವ ಸಂದರ್ಭದಲ್ಲಿ, ಬ್ರಿಟಿಷರ ಸಾಮ್ರಾಜ್ಯಶಾಹಿ ನೀತಿಯಿಂದ ಭಾರತದ ಮೇಲಾದ ಪರಿಣಾಮಗಳೇನು, ಸಾಮ್ರಾಜ್ಯಶಾಹಿಯನ್ನು ಬೆಂಬಲಿಸಿದವರು ಅಥವಾ ಒಪ್ಪಿಕೊಂಡವರು ಯಾರು, ವಿರೋಧಿಸಿದವರು ಯಾರು ಹಾಗೂ ಒಪ್ಪಿಕೊಂಡವರು ಮತ್ತು ವಿರೋಧಿಸುವವರು ತಮ್ಮ ಅಭಿಪ್ರಾಯಗಳನ್ನು ಯಾವ ನೆಲೆಗಟ್ಟಿನ ಮೇಲೆ ನೀಡಿರುವರು ಎಂಬ ಅಂಶಗಳನ್ನು ವಿಶ್ಲೇಷಿಸುವಾಗ, ಭಾರತವು ಬ್ರಿಟಿಷರ ಆಳ್ವಿಕೆಗೆ ಒಳಪಡುವ ಪೂರ್ವದಲ್ಲಿ ಭಾರತದಲ್ಲಿದ್ದ ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ, ವ್ಯವಸ್ಥೆಗಳು ಹೇಗಿದ್ದವು

ಮತ್ತು ಸಾಮ್ರಾಜ್ಯಶಾಹಿಗಳಿಂದ ಈ ವ್ಯವಸ್ಥೆಗಳ ಮೇಲಾದ ಪ್ರಭಾವ ಪರಿಣಾಮಗಳು ಏನು, ಪರಿವರ್ತನೆ ಎಷ್ಟರಮಟ್ಟಿಗೆ, ಯಾರ ಮೇಲೆ ಯಾವುದರ ಮೇಲೆ ಪರಿವರ್ತನೆ ಎನ್ನುವುದರ ಕುರಿತು ಸಾಮ್ರಾಜ್ಯಶಾಹಿಗಳು ಹಾಗೂ ರಾಷ್ಟ್ರೀಯವಾದಿಗಳು ತಮ್ಮದೇ ಆದ ನಿಲುವುಗಳನ್ನು ವ್ಯಕ್ತಪಡಿಸಿದ್ದಾರೆ.

ಬ್ರಿಟಿಷ್ ಸಾಮ್ರಾಜ್ಯಶಾಹಿತ್ವದ ಪ್ರಭಾವ ಎಷ್ಟರಮಟ್ಟಿಗೆ ಭಾರತದ ಚರಿತ್ರೆಯಲ್ಲಿ ಅಚ್ಚಳಿಯದೇ ಉಳಿದಿದೆ ಎಂದರೆ, ಸಮಗ್ರ ಭಾರತದ ಇತಿಹಾಸವನ್ನು ಹಿಂದೂ, ಮುಸ್ಲಿಂ ಹಾಗೂ ಬ್ರಿಟಿಷ್ ಎಂದು ಮೂರು ಭಾಗಗಳಾಗಿ ಮಾಡಿ ಅದರಲ್ಲಿ ಬ್ರಿಟಿಷರ ಆಗಮನ ನಂತರದ ಭಾರತದ ಇತಿಹಾಸವನ್ನು ಆಧುನಿಕ ಭಾರತ, ಬ್ರಿಟಿಷ್ ಭಾರತ ಎಂದೇ ಕರೆದು, ಬ್ರಿಟಿಷರ ಸಾಮ್ರಾಜ್ಯಶಾಹಿತ್ವದ ಅಧ್ಯಯನಕ್ಕಾಗಿಯೇ ಮೀಸಲಿಡಲಾಯಿತು. ವ್ಯಾಪಾರಕ್ಕೆಂದು ಭಾರತಕ್ಕೆ ಕಾಲಿಟ್ಟು, ಇಲ್ಲಿನ ರಾಜಕೀಯ ಅಸ್ಥಿರತೆಯ ಲಾಭ ಪಡೆದು, ಭಾರತೀಯ ರಾಜ್ಯಗಳ ಆಂತರಿಕ ವಿಷಯಗಳಲ್ಲಿ ಕೈಹಾಕಿ, ಒಂದೊಂದೇ ಪ್ರದೇಶಗಳನ್ನು ಸ್ವಾಧೀನಪಡಿಸಿಕೊಳ್ಳುತ್ತ ಕೊನೆಗೆ ಇಡೀ ಭಾರತವನ್ನು ಗೆದ್ದು ಸಾಮ್ರಾಜ್ಯ ಸ್ಥಾಪಿಸಿ ಆಳಿದ ರೀತಿ ಎಂತಹ ವರನ್ನು ವಿಸ್ಮಯಗೊಳಿಸುವಂತದ್ದು.

ಬ್ರಿಟಿಷರು ರಾಜಕೀಯ, ಧಾರ್ಮಿಕ, ಸಾಮಾಜಿಕ, ಸೈನಿಕ, ಮುದ್ರಣ - ಹೀಗೆ ಎಲ್ಲಾ ವಲಯಗಳ ಮುಖಾಂತರ ಸಾಮ್ರಾಜ್ಯಶಾಹಿತ್ವದ ವಿಸ್ತರಣೆಯನ್ನು ಕೈಗೊಂಡರು ಹಾಗೂ ಹಲವಾರು ಪ್ರಗತಿಪರ ವಿಷಯಗಳಲ್ಲಿ ಸಾಕಷ್ಟು ಜನಪರ ಕೆಲಸ ಮಾಡಿದ್ದರಿಂದಾಗಿ ಭಾರತೀಯರ ಒಂದು ವರ್ಗ ಬೆಂಬಲ ನೀಡಿರಬಹುದು. ಭಾರತದ ವಂಶಪಾರಂಪರ್ಯ ಪ್ರಭುತ್ವದ ವ್ಯವಸ್ಥೆಯಲ್ಲಿ ಶೋಷಣೆಗೊಳಗಾದ, ಬೇಸತ್ತ, ಕೆಲವರು ಬ್ರಿಟಿಷರನ್ನು ಒಪ್ಪಿಕೊಳ್ಳುವುದರ ಜೊತೆಗೆ ಅವರಿಗೆ ನೆರವನ್ನು ನೀಡಿರಬಹುದು. ಆದರೆ ಅದು ಏನೇ ಇರಲಿ, ಬ್ರಿಟಿಷರು ಭಾರತದಲ್ಲಿ ಸ್ಥಾಪಿಸಿದ ಬೃಹತ್ ಸಾಮ್ರಾಜ್ಯ, ಐಕ್ಯತೆ, ಏಕರೂಪದ ಆಡಳಿತ, ಮಿಲಿಟರಿ ವ್ಯವಸ್ಥೆ, ಸಾಮಾಜಿಕ ಸುಧಾರಣೆಗಳು ಇಡೀ ಭಾರತವನ್ನು ಏಕಚಕ್ರಾಧಿಪತ್ಯದ ಚೌಕಟ್ಟಿಗೆ ತಂದು ನಿಲ್ಲಿಸಿತು.

ಬ್ರಿಟಿಷ್ ಅಧಿಕಾರಿಗಳು, ಬ್ರಿಟಿಷ್ ಚಿಂತಕರು, ಚರಿತ್ರೆಕಾರರು, ಸಾಮ್ರಾಜ್ಯವಾದಿಗಳು ಎಂದು ಕರೆಸಿಕೊಂಡ ಒಂದು ವರ್ಗ, ಸಾಮ್ರಾಜ್ಯಶಾಹಿ ನೀತಿಯನ್ನು ಬೆಂಬಲಿಸುತ್ತ, ಅವರ ಎಲ್ಲಾ ಕ್ರಮ ನೀತಿಗಳನ್ನು ಸಮರ್ಥಿಸಿಕೊಳ್ಳುತ್ತಾರೆ. ಬ್ರಿಟಿಷರು ಭಾರತವನ್ನು ಆಳಲು ಅರ್ಹರು ಎಂಬುದಕ್ಕೆ ದೈವೀ ಸಿದ್ಧಾಂತದ ಪ್ರತಿಪಾದನೆ ಮಾಡುತ್ತ, 'ಬ್ರಿಟಿಷರು ಭಾರತದ ಮೇಲೆ ಸಾಮ್ರಾಜ್ಯನೀತಿ ಚಲಾಯಿಸುತ್ತಿದ್ದುದು ಒಂದು ದೈವೀ ಆದೇಶದ ಪರಿಪಾಲನೆಗಾಗಿ, ಲೋಕದ ಅನಾಗರಿಕ ಕರಿ ಜನರನ್ನು ಸುಧಾರಿಸುವ, ಬಿಳಿ ಜನರ ಮೇಲಿನ ಹೊಣೆಯನ್ನು ನಿಭಾಯಿಸುವ ಸುಲವಾಗಿ ಎಂಬ ಸಿದ್ಧಾಂತವನ್ನು ಎತ್ತಿ ಹಿಡಿಯುತ್ತಾರೆ.[೩೫]

ಸಾಮ್ರಾಜ್ಯಶಾಹಿವಾದಿಯಾದ ಜೇಮ್ಸ್‌ಮಿಲ್ ತನ್ನ 'ಹಿಸ್ಟರಿ ಆಫ್ ಬ್ರಿಟಿಷ್ ಇಂಡಿಯಾ' ಎನ್ನುವ ಕೃತಿಯಲ್ಲಿ ಭಾರತದಲ್ಲಿ ಬ್ರಿಟಿಷರ ಅಧಿಪತ್ಯವನ್ನು ಸಮರ್ಥಿಸುತ್ತ, ಬ್ರಿಟಿಷರ ಆಗಮನಕ್ಕಿಂತ ಪೂರ್ವದಲ್ಲಿ ಭಾರತವು ಅನಾಗರಿಕ, ಅನಭಿವೃದ್ಧಿ, ನಿರಂಕುಶ ಆಳ್ವಿಕೆಗೆ ಒಳಪಟ್ಟ ರಾಷ್ಟ್ರವಾಗಿತ್ತೆಂದೂ, ಭಾರತೀಯರನ್ನು ನಾಗರಿಕರನ್ನಾಗಿ ಮಾಡುವುದು ಬ್ರಿಟಿಷರ ಕರ್ತವ್ಯ ಎಂದೂ, ಭಾರತದ ಅಭಿವೃದ್ಧಿ ಬ್ರಿಟಿಷರಿಂದ ಮಾತ್ರ

ಸಾಧ್ಯ ಎಂದೂ, ಬ್ರಿಟಿಷರ ಆಗಮನದ ನಂತರದ ಭಾರತವನ್ನು ಆಧುನಿಕ ಭಾರತ ಎಂದು ಕರೆದನು. ಈ ರೀತಿ ಸಾಮ್ರಾಜ್ಯಶಾಹಿಗಳ ಆಳ್ವಿಕೆ ಭಾರತೀಯರಿಗೆ ಅವಶ್ಯಕ, ಅನಿವಾರ್ಯ ಎಂದು ವಾದಿಸಿದರು. ಸಾಮ್ರಾಜ್ಯಶಾಹಿಗಳ ಈ ಬಗೆಯ ವಾದಗಳೇ, ರಾಷ್ಟ್ರೀಯವಾದಿಗಳು ವೈಭವಯುತ ಗತವನ್ನು ಕಟ್ಟುವುದಕ್ಕೆ ಹಾಗೂ ತಾವು ಸುಸಂಸ್ಕೃತರು ಎಂದು ವಾದಿಸುವುದಕ್ಕೆ ಕಾರಣವಾಯಿತು.

ಭಾರತದಲ್ಲಿ ಬ್ರಿಟಿಷರು ಸಾಮ್ರಾಜ್ಯಶಾಹಿತ್ವದ ಸ್ಥಾಪನೆ ಬಗ್ಗೆ ಸಾಮ್ರಾಜ್ಯಶಾಹಿಗಳು ಇದೊಂದು ಬ್ರಿಟಿಷರ ಮಹಾನ್ ಸಾಧನೆ ಹಾಗೂ ಭಾರತದ ರಾಜಕೀಯ ಅಸ್ಥಿರತೆ, ಅನೈಕ್ಯತೆ, ಆಂತರಿಕ ಕಲಹಗಳನ್ನು ಕೊನೆಗಾಣಿಸಿ, ಭಾರತೀಯರನ್ನು ಮತ್ತು ಭಾರತದ ಸ್ಥಾನಮಾನವನ್ನು ಪ್ರಪಂಚದ ರಾಷ್ಟ್ರಗಳು ಗುರುತಿಸುವಂತೆ ಮಾಡಿತು ಎಂದು ವಾದಿಸುತ್ತಾರೆ. ಈ ಬೃಹತ್ ಸಾಮ್ರಾಜ್ಯದ ಸುವ್ಯವಸ್ಥಿತ ಆಡಳಿತ ವ್ಯವಸ್ಥೆಗಾಗಿ ಅನೇಕ ಕಾಯ್ದೆ, ಕಾನೂನುಗಳನ್ನು ಜಾರಿ ಮಾಡಲು ಪ್ರಾರಂಭಿಸಿದ ಬ್ರಿಟಿಷ್ ಸರಕಾರ ಮುಂದೆ ಸಂವಿಧಾನಿಕ ಬೆಳವಣಿಗೆಯ ಇತಿಹಾಸಕ್ಕಾಗಿ ದಾರಿ ಮಾಡಿಕೊಟ್ಟಿತು. ೧೭೭೩ರ ರೆಗ್ಯುಲೇಟಿಂಗ್ ಕಾಯ್ದೆ, ೧೭೮೪ರ ಪಿಟ್ ಇಂಡಿಯಾ ಕಾಯ್ದೆ, ೧೮೧೩ರ ಸನ್ನದು, ೧೮೩೩ರ ಸನ್ನದು, ಇವು ಹೊಸ ಕಾಯ್ದೆ, ಕಾನೂನುಗಳನ್ನು ಜಾರಿ ತಂದು, ಹೊಸ ಆಡಳಿತ ವ್ಯವಸ್ಥೆಗೆ ನಾಂದಿ ಹಾಡಿದವು ಎಂಬುದಾಗಿ ಸಾಮ್ರಾಜ್ಯಶಾಹಿಗಳು ಬ್ರಿಟಿಷ್ ಆಡಳಿತವನ್ನು ಸಮರ್ಥಿಸಿಕೊಂಡರು.

ಸಾಮ್ರಾಜ್ಯಶಾಹಿಗಳ ಆಳ್ವಿಕೆಯಡಿ ಬದಲಾದಂತಹ ಶಿಕ್ಷಣ ವ್ಯವಸ್ಥೆ ಮತ್ತು ಇವರು ಪರಿಚಯಿಸಿದ ಇಂಗ್ಲಿಷ್ ಭಾಷೆ, ವಿಜ್ಞಾನ, ತಂತ್ರಜ್ಞಾನಗಳಂತಹ ವಿಷಯಗಳು, ಹೊಸ ಶಾಲೆಗಳು, ಕಾಲೇಜು, ವಿಶ್ವವಿದ್ಯಾಲಯಗಳ ಸ್ಥಾಪನೆಯು ಭಾರತದ ಶಿಕ್ಷಣ ವ್ಯವಸ್ಥೆಯನ್ನೇ ಬದಲಾಯಿಸಿತು. ಭಾರತದಲ್ಲಿ ಹೊಸ ಶಿಕ್ಷಣ ಮತ್ತು ಇಂಗ್ಲಿಷ್ ಭಾಷೆಯ ಪ್ರಭಾವ ಕುರಿತು ಮೆಕಾಲೆ, ಒಂದಲ್ಲಾ ಒಂದು ದಿನ ಭಾರತದಲ್ಲಿ ಬ್ರಿಟಿಷರು ಸ್ಥಾಪಿಸುವ ಸಾಮ್ರಾಜ್ಯ ನಾಶವಾಗಬಹುದು. ಆದರೆ, ಜಾರಿಗೆ ತಂದ ಇಂಗ್ಲಿಷ್ ಭಾಷೆ ಮತ್ತು ಶಿಕ್ಷಣ ಭಾರತವನ್ನು ಆಳುತ್ತವೆ[೩೬] ಎಂದಿರುವ ಮಾತು ಅಕ್ಷರಶಃ ನಿಜವಾಗಿದೆ. ಪ್ರಾಚೀನ ಕಾಲದಿಂದ ಸಾಂಪ್ರದಾಯಿಕ, ಧರ್ಮ ಆಧಾರಿತ ಶಿಕ್ಷಣವನ್ನು ಮಾತ್ರ ಅಳವಡಿಸಿಕೊಂಡಿದ್ದ, ಅಧ್ಯಯನ ಮಾಡುತ್ತಿದ್ದ ಭಾರತೀಯರಿಗೆ ಮೊದಲ ಬಾರಿ ಇಂಗ್ಲಿಷ್ ಭಾಷೆ, ವಿಜ್ಞಾನ, ತಂತ್ರಜ್ಞಾನದಂತ ವಿಷಯಗಳು, ಪ್ರಪಂಚದ ವಿವಿಧ ಮುಖಗಳ ಪರಿಚಯದಿಂದಾಗಿ ಬಹುಬೇಗ ಈ ಶಿಕ್ಷಣಕ್ಕೆ ಪ್ರಭಾವಿತರಾಗಿ, ಬ್ರಿಟಿಷ್‌ರ ನೀತಿ ಮತ್ತು ವ್ಯವಸ್ಥೆಯ ಅನುಯಾಯಿಗಳಾದರು. ಭಾರತೀಯ ಸಮಾಜ ಸುಧಾರಕರಾದ ರಾಜರಾಮ್ ಮೋಹನರಾಯರೇ ಇಂಗ್ಲಿಷ್ ಮತ್ತು ಪಾಶ್ಚಾತ್ಯ ಶಿಕ್ಷಣಕ್ಕೆ ಎಷ್ಟೊಂದು ಮಹತ್ವ ಕೊಟ್ಟಿದ್ದರೆಂದರೆ, "ಸಂಸ್ಕೃತ ಮಾದರಿ ಶಿಕ್ಷಣ ಪದ್ಧತಿಯೇ ಮುಂದುವರಿದಿದ್ದಾದರೆ, ಭಾರತವನ್ನು ಕತ್ತಲೆಯಲ್ಲಿಟ್ಟಂತಾಗುತ್ತದೆ. ಪಶ್ಚಿಮದತ್ತ ಬಾಗಿಲು ತೆರೆಯೋಣ, ಜ್ಞಾನವು ಎಲ್ಲಾ ದಿಕ್ಕುಗಳಿಂದ ಹರಿದು ಬರಲಿ."

ಬ್ರಿಟಿಷರು ಇಂಗ್ಲೆಂಡಿನ ಕೈಗಾರಿಕೆಗಳಿಗೆ ಕಚ್ಚಾವಸ್ತುಗಳನ್ನು ಸಾಗಿಸಲು ಮತ್ತು ಸಿದ್ಧವಸ್ತುಗಳನ್ನು ಸುಲಭವಾಗಿ ಮಾರುಕಟ್ಟೆಗೆ ಸಾಗಿಸಲು, ಶೀಘ್ರವಾಗಿ ಸೈನ್ಯದ ರವಾನೆಗೂ, ಭಾರತದಾದ್ಯಂತ ರಸ್ತೆ, ರೈಲ್ವೆಗಳನ್ನು ಪರಿಚಯಿಸಿದರು. ಇದು ಭಾರತದ ಆರ್ಥಿಕ ಬೆಳವಣಿಗೆಗೆ, ಭಾರತೀಯರು ಪರಸ್ಪರ ಒಂದುಗೂಡಲು

ಸಹಾಯವಾಯಿತು. ಬಿಪನ್ ಚಂದ್ರರವರು, ಬ್ರಿಟಿಷರು ನಿರ್ಮಿಸಿದ ರಸ್ತೆ, ರೈಲ್ವೆ, ಸಾರಿಗೆ ಸಂಪರ್ಕದ ಪರಿಣಾಮವನ್ನು ವಿವರಿಸುತ್ತಾ, 'ವಸಾಹತುಶಾಹಿ ನೀತಿಯು, ಪ್ರಪಂಚದ ಮಾರುಕಟ್ಟೆಯಲ್ಲಿ ಸೀಮಿತವಾಗಿದ್ದ ಭಾರತದ ಮಾರುಕಟ್ಟೆಯನ್ನು ವಿಶ್ವದ ಪ್ರಬಲ ಮಾರುಕಟ್ಟೆಗಳ ಸದಸ್ಯನಾಗುವಂತೆ ಮಾಡಿತು.[೩೭]

ವಸಾಹತು ಆಳ್ವಿಕೆಯಿಂದ ಸ್ಥಳೀಯ ಕೈಗಾರಿಕೆಗಳು, ಪೇಟೆ ಪಟ್ಟಣಗಳು ನಾಶ ಹೊಂದಿದವು ಎಂಬುದನ್ನು ಒಪ್ಪದ ಸಾಮ್ರಾಜ್ಯಶಾಹಿಗಳು, ಭಾರತದ ಆರ್ಥಿಕತೆ ಮತ್ತು ಕೈಗಾರಿಕೆಗಳ ಸ್ಥಿತಿಗತಿಗಳನ್ನು ಚರ್ಚಿಸುತ್ತ, ಭಾರತದ ಗುಡಿ-ಕೈಗಾರಿಕೆಗಳು, ಅವುಗಳ ಹಿಂದುಳಿತ ತಂತ್ರಜ್ಞಾನದಿಂದಾಗಿ ಅವಾಗಿಯೇ ಅವನತಿಯತ್ತ ಸಾಗಿದ್ದವು ಎಂದು ಅಭಿಪ್ರಾಯ ಪಡುತ್ತಾರೆ.[೩೮]

ಭಾರತದ ಮೇಲೆ ಬ್ರಿಟಿಷ್ ಸಾಮ್ರಾಜ್ಯಶಾಹಿಗಳ ಆಡಳಿತದ ಪರಿಣಾಮ ಮತ್ತು ಆಳ್ವಿಕೆಯ ಬಗ್ಗೆ ವಿರುದ್ಧ ವಾದಗಳನ್ನು ರಾಷ್ಟ್ರೀಯವಾದಿಗಳು ವ್ಯಕ್ತಪಡಿಸುತ್ತಾರೆ. ಇದರ ಬಗ್ಗೆ ಬಿಪನ್ ಚಂದ್ರರವರು ಚರ್ಚಿಸುತ್ತ, ರಾಷ್ಟ್ರೀಯವಾದಿಗಳು ಸಹ ಮೊದಮೊದಲು ಬ್ರಿಟಿಷ್ ಆಡಳಿತದ ವಿಶೇಷ ಗುಣಗಳಾದ ಕೇಂದ್ರೀಕೃತ ಆಡಳಿತ, ಆಸ್ತಿ ರಕ್ಷಣೆ, ಪಾಶ್ಚಿಮಾತ್ಯ ವಿಜ್ಞಾನ, ತಂತ್ರಜ್ಞಾನದ ಅಳವಡಿಕೆ, ಬಂಡವಾಳ ಮತ್ತು ಆರ್ಥಿಕ ವ್ಯವಸ್ಥೆ, ರಸ್ತೆ, ರೇಲ್ವೆಗಳ ನಿರ್ಮಾಣ, ಪ್ರಪಂಚದ ಮಾರುಕಟ್ಟೆ ಸಂಪರ್ಕ, ಆಧುನಿಕ ಸಂಸ್ಕೃತಿ ಮತ್ತು ವಿಚಾರಗಳ ಅಳವಡಿಕೆ, ಈ ಎಲ್ಲ ಗುಣಗಳು, ಆರ್ಥಿಕ ಆಧುನಿಕತೆಯ ಹೊಸ ಯುಗಕ್ಕೆ ದಾರಿ ಮಾಡಿಕೊಡುತ್ತವೆ ಎನ್ನುವ ಆಶಾಭಾವನೆಯನ್ನು ಹೊಂದಿದ್ದರು. ಆದರೆ, ಕೆಲವೇ ಸಮಯದಲ್ಲಿ ಅವರು ವಾಸ್ತವಾಂಶದ ಸತ್ಯಾಸತ್ಯತೆಯನ್ನು ಅರಿತುಕೊಳ್ಳಲಾರಂಭಿಸಿ, ತಾವು ಆಶಿಸಿದಂತೆ ಇಲ್ಲ ಎನ್ನುವ ದೃಢೀಕರಣದತ್ತ ಚಿಂತನೆ ನಡೆಸತೊಡಗಿದರು. ಬಹುಬೇಗನೆ ಅವರ ನಂಬಿಕೆಗೆ ಬಂದ ವಿಷಯವೇನೆಂದರೆ, ಪ್ರಗತಿಯು ಬಹು ನಿಧಾನಗತಿಯಲ್ಲಿ ಮತ್ತು ಸ್ತಬ್ಧಗತಿಯಲ್ಲಿ ಇದ್ದು ದೇಶವು ಆರ್ಥಿಕವಾಗಿ ಹಿನ್ನಡೆ ಮತ್ತು ಅನಭಿವೃದ್ಧಿ ಹೊಂದುತ್ತಿದೆ ಎಂಬ ಅಭಿಪ್ರಾಯಕ್ಕೆ ಬರತೊಡಗಿದರು. ಮೊದಲು ತಾವು ಅಂದುಕೊಂಡಿದ್ದಂತೆ, ಪ್ರಗತಿ ಏಕೆ ಸಾಧ್ಯವಾಗಲಿಲ್ಲ ಎನ್ನುವ ಪ್ರಶ್ನೆ ಅವರ ಮುಂದೆ ಕಾಡತೊಡಗಿತು. ಪ್ರಗತಿಗೆ ತೆಗೆದುಕೊಳ್ಳಬೇಕಾದ ಮುಂದಿನ ಹೆಜ್ಜೆ ಬಗ್ಗೆ ಚರ್ಚೆ, ಚಿಂತನೆ ನಡೆಸತೊಡಗಿದರು.[೩೯]

ಬ್ರಿಟಿಷ್ ಸಾಮ್ರಾಜ್ಯಶಾಹಿ ಬಗ್ಗೆ ಬ್ರಿಟಿಷ್ ಚಿಂತಕರೆ ನಕರಾತ್ಮಕ ಅಭಿಪ್ರಾಯಗಳನ್ನು ವ್ಯಕ್ತಪಡಿಸಿರುವುದನ್ನು ಗಮನಿಸಬಹುದು. ಎನ್.ಡಬ್ಲ್ಯು. ಹೌವಿಟ್ ತನ್ನ 'ವಸಾಹತುನಿರ್ಮಾಣ ಮತ್ತು ಕ್ರೈಸ್ತಧರ್ಮ' ಎಂಬ ಪುಸ್ತಕದಲ್ಲಿ ನಮ್ಮ ಚಕ್ರಾಧಿಪತ್ಯ ಜನಾಭಿಪ್ರಾಯದ ತಳಹದಿಯ ಮೇಲೆ ನಿರ್ಮಿತವಾದದ್ದಲ್ಲ. ಇದು ಶಾಸನಾನುಗುಣ ಚಕ್ರಾಧಿಪತ್ಯವೂ ಅಲ್ಲ. ದೇಶದ ಯಾವ ಭಾಗವೂ ತಾನಾಗಿ ಈ ಚಕ್ರಾಧಿಪತ್ಯದಲ್ಲಿ ಸೇರಿದ್ದಲ್ಲ. ಇದು ಆಕ್ರಮಿತ, ಬಲಪ್ರಯೋಗದಿಂದಲೇ ಆಳಲ್ಪಡುತ್ತಿದೆ. ಬಲಪ್ರಯೋಗದಿಂದ, ಮೋಸದಿಂದ ಇಲ್ಲಿಯ ಅರಸರನ್ನು ಅಡಗಿಸಿದ್ದೇವೆ. ಜನರ ಸಂಪತ್ತನ್ನೆಲ್ಲ ಹೀರಿಕೊಂಡಿದ್ದೇವೆ.[೪೦]

ಭಾರತೀಯರು ತಮ್ಮ ರಾಜಕೀಯ ಸ್ವಾತಂತ್ರ್ಯವನ್ನು ಕಳೆದುಕೊಂಡು, ವಿದೇಶಿಯರ ಆಳ್ವಿಕೆಗೆ ಒಳಪಟ್ಟು, ದಾಸ್ಯಕ್ಕೆ ಒಳಗಾಗಿದ್ದರಿಂದಾಗಿ ಕ್ರಮೇಣ ಭಾರತೀಯರಿಂದ ತೀವ್ರ ಪ್ರತಿಭಟನೆ ಆರಂಭವಾಯಿತು.

ಲಾರ್ಡ್‌ವೆಲ್ಲೆಸ್ಲಿ, ಡಾಲ್‌ಹೌಸಿಯವರ ನೀತಿ ನಿಮಯಗಳಿಂದ ರೋಸಿ ಹೋದ ದೇಶೀಯ ಸಂಸ್ಥಾನಿಕರು, ಅರಸರು ಬ್ರಿಟಿಷ್ ವಿರೋಧಿ ನೀತಿಯನ್ನು ತಳೆದರು. ಸಹಾಯಕ ಸೈನ್ಯ ಪದ್ಧತಿ, ದತ್ತುಮಕ್ಕಳಿಗೆ ಹಕ್ಕಿಲ್ಲ ಎಂಬ ನೀತಿಯಿಂದ ರಾಜ್ಯ ಕಳೆದುಕೊಂಡವರು, ವಂಶಪಾರಂಪರ್ಯ ಆಡಳಿತದಿಂದ ವಂಚಿತರಾದವರು, ಕಪ್ಪ-ಕಾಣಿಕೆ ಸಲ್ಲಿಸಲಾಗದವರು, ಬಿರುದು ಸನ್ಮಾನಗಳನ್ನು ಕಳೆದುಕೊಂಡವರು, ದುರಾಡಳಿತಕ್ಕೆ ಒಳಗಾದವರು, ಹೀಗೆ ಹಲವಾರು ಕಾರಣಗಳಿಂದ ತಮ್ಮ ಸಾಮ್ರಾಜ್ಯವನ್ನು ಕಳೆದುಕೊಂಡ ಅರಸರು, ಸಾಮಾನ್ಯ ಜನರು, ಅಧಿಕಾರಿಗಳು, ಇವರ ಮೇಲೆ ಅವಲಂಬಿತವಾದ ಜನಸಾಮಾನ್ಯರು, ಬ್ರಿಟಿಷ್ ಪ್ರಭುತ್ವದ ವಿರುದ್ಧ ವಿರೋಧಿ ನಿಲುವನ್ನು ತಳೆದರು. ಕೆಲವರು ಬ್ರಿಟಿಷರ ವಿರುದ್ಧ ಪ್ರಬಲವಾದ ಪೈಪೋಟಿಯನ್ನು ನೀಡಬೇಕೆಂದು ಇಚ್ಛಿಸಿದರಾದರೂ, ಆಗಲೇ ಕಾಲ ಮಿಂಚಿ ಹೋಗಿದ್ದು ಅತ್ಯಂತ ಪ್ರಬಲವಾದ ಸಾಮ್ರಾಜ್ಯಶಾಹಿತ್ವವನ್ನು ಬ್ರಿಟಿಷರು ಸ್ಥಾಪಿಸಿದ್ದರಿಂದ ಯಾವೊಬ್ಬ ಅರಸನು ಬ್ರಿಟಿಷರನ್ನು ಸಂಪೂರ್ಣವಾಗಿ ಸೋಲಿಸುವ ಸಾಮರ್ಥ್ಯವನ್ನು ಹೊಂದದೆ ಇದ್ದುದು ಒಂದು ವಿಪರ್ಯಾಸ.

ಬ್ರಿಟಿಷರು ಜಾರಿಗೆ ತಂದ ನೂತನ ಆಡಳಿತ ವ್ಯವಸ್ಥೆಯು ಮಾದರಿ ಎನ್ನುವಂತಿದ್ದರೂ, ಬ್ರಿಟಿಷ್ ಆಡಳಿತ ವ್ಯವಸ್ಥೆಯಲ್ಲಿ ಆಡಳಿತಗಾರರು ಮತ್ತು ಜನರ ಮಧ್ಯೆ ನೇರ ಸಂಪರ್ಕವೇ ಇರಲಿಲ್ಲ. ಅಧಿಕಾರಿಗಳು ಜನಸಾಮಾನ್ಯರಿಗೆ ನಿಲುಕುತ್ತಲೇ ಇರಲಿಲ್ಲ. ಆಡಳಿತದಲ್ಲಿ ಕೆಲವೇ ಭಾರತೀಯರು ಉನ್ನತ ಸ್ಥಾನಮಾನಗಳನ್ನು ಪಡೆದಿದ್ದರು. ಬ್ರಿಟಿಷರು ಜಾರಿಗೆ ತಂದ ಹೊಸ ಪೊಲೀಸ್ ವ್ಯವಸ್ಥೆಯಲ್ಲಿ ಬಾಹ್ಯ ರಕ್ಷಣೆ ಇತ್ತಾದರೂ, ಆಂತರಿಕವಾಗಿ ಕೊಲೆ, ದರೋಡೆ, ಸುಲಿಗೆ, ನಡೆದೇ ಇದ್ದವು. ಪೊಲೀಸರು ನೊಂದವರಿಗೆ ರಕ್ಷಣೆ ನೀಡುವುದರ ಬದಲಾಗಿ, ಅಧಿಕಾರಿಗಳ ದಬ್ಬಾಳಿಕೆಯ ಏಜೆಂಟರಂತೆ ವರ್ತಿಸುತ್ತಿದ್ದರು. ಜೊತೆಗೆ ಬಂಧಿತ ಅಪರಾಧಿಗಳಿಗೆ, ನಿರಪರಾಧಿಗಳಿಗೆ ನ್ಯಾಯ ದೊರಕಿಸಿಕೊಡುವಲ್ಲಿ ನ್ಯಾಯಾಲಯಗಳು ಸಮರ್ಥವಾಗಿರಲಿಲ್ಲ ಮತ್ತು ತಾರತಮ್ಯ ನೀತಿಯನ್ನು ಅನುಸರಿಸುತ್ತಿದ್ದವು. ೧೮೫೪ರಲ್ಲಿ ಬಂಗಾಳದಲ್ಲಿದ್ದ ಪರಿಸ್ಥಿತಿಯನ್ನು ಸರ್ ಜಾನ್ ಸ್ಟ್ರೇಚಿ ಇವರು "ಒಂದು ಶತಮಾನಗಳ ಕಾಲ ಬ್ರಿಟಿಷರ ಆಳ್ವಿಕೆಗೆ ಒಳಪಟ್ಟಿದ್ದ ಬಂಗಾಳದಲ್ಲಿ ಯಾವುದೇ ರಸ್ತೆಗಳು, ಸೇತುವೆಗಳು, ಜನಸಾಮಾನ್ಯರ ಜೀವ, ಆಸ್ತಿಯ ರಕ್ಷಣೆ ಇರಲಿಲ್ಲ. ಪೊಲೀಸ್ ವ್ಯವಸ್ಥೆ ಹದೆಗೆಟ್ಟಿತ್ತು. ದರೋಡೆ ಮತ್ತು ಹಿಂಸಾತ್ಮಕ ಅಪರಾಧಗಳು ಬೇರೆ ಯಾವ ಪ್ರಾಂತ್ಯಗಳು ಕೇಳರಿಯದಷ್ಟು ಮಟ್ಟದಲ್ಲಿ ನಡೆಯುತ್ತಿದ್ದವು" ಎಂದು ಹೇಳಿದ್ದಾರೆ.[೪೧]

ಬ್ರಿಟಿಷರ ಆಳ್ವಿಕೆಯಲ್ಲಿ ಬಹಳಷ್ಟು ನಷ್ಟ-ಶೋಷಣೆ, ಬಡತನಕ್ಕೀಡಾದ ಇನ್ನೊಂದು ವರ್ಗ ಎಂದರೆ ರೈತರು. ಬ್ರಿಟಿಷ್ ಆಳ್ವಿಕೆ ಪೂರ್ವದಲ್ಲಿ, ಕೃಷಿ ಮತ್ತು ಗುಡಿಕೈಗಾರಿಕೆಗಳನ್ನು ಜೊತೆಯಾಗಿಯೇ ನಡೆಸುತ್ತಾ ಸ್ವಲ್ಪಮಟ್ಟಿಗೆ ಉತ್ತಮ ಸ್ಥಿತಿಯಲ್ಲಿದ್ದರು. ಜೊತೆಗೆ ಬ್ರಿಟಿಷರು ಜಾರಿಗೆ ತಂದ ಖಾಯಂ ಜಮೀನ್ದಾರಿ ಪದ್ಧತಿ, ರೈತವಾರಿ, ಮಹಲ್‌ವಾರಿ ಪದ್ಧತಿಗಳು ಮೊದಲಿಗೆ ರೈತರ ಪರ ಎನಿಸಿದರೂ, ನಂತರ ಇವುಗಳ ಉದ್ದೇಶ ಈ ನೀತಿಗಳ ನಿಜವಾದ ಲಾಭಕಾರರು ಬ್ರಿಟಿಷರು, ಜಮೀನ್ದಾರರು, ಮಧ್ಯವರ್ತಿಗಳಾದರೇ ಹೊರತು ರೈತರಲ್ಲ. ನಂತರ ಇಂಗ್ಲೆಂಡಿನ ಕೈಗಾರಿಕೆಗಳಿಗೆ ಬೇಕಾಗುವ ಕಚ್ಚಾವಸ್ತುಗಳನ್ನು ಭಾರತದಲ್ಲಿ ಅಭಿವೃದ್ಧಿಪಡಿಸುವ ಕೆಲಸವನ್ನು ಬ್ರಿಟಿಷ್ ಸರಕಾರ ಮಾಡಿತಲ್ಲದೆ, ಆ ಕಾರಣಕ್ಕಾಗಿ ಕೃಷಿಯನ್ನು ವಾಣಿಜ್ಯೀಕರಿಸುವ ಹೊಸ ಕೃಷಿ ನೀತಿಯೊಂದನ್ನು ಜಾರಿಗೊಳಿಸಿತು.[೪೨] ಕೃಷಿಯನ್ನು ಒಂದು

ಉದ್ದಿಮೆಯನ್ನಾಗಿ ಪರಿವರ್ತಿಸಿ ಪ್ಲಾಂಟೇಷನ್ ಆರ್ಥಿಕತೆ ರೂಪುಗೊಳ್ಳುವಂತೆ ಮಾಡಲಾಯಿತು. ಹೀಗಾಗಿ ಹತ್ತಿ, ರಬ್ಬರ್, ಕಾಫೀ ಮುಂತಾದ ವಾಣಿಜ್ಯ ಬೆಳೆಗಳಿಗೆ ಸಂಬಂಧಿಸಿದ ಹೊಸ ಮತ್ತು ಬೃಹತ್ ಕೈಗಾರಿಕೆಗಳು ಸ್ಥಾಪಿತಗೊಂಡವು.

ರಾಷ್ಟ್ರೀಯವಾದಿಗಳ ಪ್ರಕಾರ, ವಸಾಹತು ಆಳ್ವಿಕೆಯಿಂದ ಸ್ಥಳೀಯ ಪೇಟೆ, ಪಟ್ಟಣ ಮತ್ತು ಕೈಗಾರಿಕೆಗಳು ನಾಶ ಹೊಂದಿದವು. ಸ್ಥಳೀಯ ಕೈಗಾರಿಕೆಗಳು ಮೂಲೆ ಗುಂಪಾದವು. ಅವುಗಳಲ್ಲಿ ದುಡಿಯುತ್ತಿದ್ದ ಕುಶಲಕರ್ಮಿಗಳು ನಿರುದ್ಯೋಗಿಗಳಾದರು. ಹೀಗೆ ಕೃಷಿ ವಾಣಿಜ್ಯೀಕರಣದಿಂದ ಗ್ರಾಮೀಣ ಮತ್ತು ನಗರ ವ್ಯವಸ್ಥೆಗಳೆರೆಡರಲ್ಲೂ ಆದ ಬದಲಾವಣೆಯ ಲಾಭವನ್ನು ಬ್ರಿಟಿಷರು ಮತ್ತು ಸಮಾಜದ ಮೇಲ್‌ಸ್ತರದಲ್ಲಿ ಇದ್ದವರೇ ಪಡೆದರು. ಕಾರ್ಲ್‌ಮಾರ್ಕ್ಸ್‌ರು ತಮ್ಮ ಕೃತಿ 'ದಾಸ್ ಕ್ಯಾಪಿಟಲ್'ನಲ್ಲಿ ವಿದೇಶಿ ವ್ಯಾಪಾರ ಎಷ್ಟು ದೊಡ್ಡಮಟ್ಟದಲ್ಲಿ ನಡೆಯಿತು ಎನ್ನುವುದಕ್ಕಿಂತಲೂ ಇದರಿಂದ ಭಾರತಕ್ಕೆ ಬರುವ ಆದಾಯ ಇಲ್ಲಿನ ಕೈಗಾರಿಕೆಗಳ ಬೆಳವಣಿಗೆ, ಉದ್ಯೋಗವಕಾಶ, ಲಾಭ ಯಾರಿಗೆ ಸೇರಿತು ಎನ್ನುವ ದೃಷ್ಟಿಕೋನದಿಂದ ನೋಡಬೇಕಾಗುತ್ತದೆ ಎಂದಿದ್ದಾರೆ.[೪೩]

ಲಾರ್ಡ್‌ವಿಲಿಯಂ ಬೆಂಟಿಂಕ್ ತಮ್ಮ ೧೮೩೪-೩೫ರ ವರದಿಯಲ್ಲಿ ಬ್ರಿಟಿಷ್ ಸರಕಾರದ ಕೈಗಾರಿಕಾ ನೀತಿಯ ಪರಿಣಾಮವನ್ನು ವ್ಯಕ್ತಪಡಿಸುತ್ತ, 'ವಾಣಿಜ್ಯರಂಗದ ಇತಿಹಾಸದಲ್ಲಿಯೇ ಇಂತಹ ಹೀನಾಯ ಪರಿಸ್ಥಿತಿಯನ್ನು ಯಾವ ಕಾಲದಲ್ಲಿಯೂ ಕಾಣಲಿಕ್ಕೆ ಸಾಧ್ಯವಿಲ್ಲ. ಹತ್ತಿಯ ನೇಕಾರರ ಬೆನ್ನು ಮೂಳೆಯನ್ನೇ ಮುರಿಯುವಂತಹ ಪರಿಸ್ಥಿತಿ ಉಂಟಾಗಿದೆ' ಎಂದು ವರದಿಯಲ್ಲಿ ತಿಳಿಸಿದ್ದರು.[೪೪] ಬ್ರಿಟಿಷ್ ಇತಿಹಾಸಕಾರರಾದ 'ಗ್ರಿಫ್‌ಫಿತ್ಸ್' ಅವರು ಸಹ ವಸಾಹತುಶಾಹಿಯ ವಾಣಿಜ್ಯ ನೀತಿಯಿಂದಾಗಿ ಬ್ರಿಟಿಷರ ಸರಕುಗಳು ಭಾರತೀಯ ಉತ್ಪಾದಕರನ್ನು ಸಂಪೂರ್ಣ ಹಾಳು ಮಾಡಿತು ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.[೪೫]

## ಕೊನೆಟಿಪ್ಪಣಿಗಳು

೧. ಪೀಟರ್ ಹೀಸ್, ಇಂಡಿಯಾಸ್ ಫ್ರೀಡಂ ಸ್ಟ್ರಗಲ್, ಪು. ೯.

೨. ಸುಬ್ರಮಣ್ಯಂ, ದ ಕೋರಮಂಡಲ ಮಲಕ್ಕ-ಟ್ರೇಡ್, ಪು. ೬೪.

೩. ಓಂ ಪ್ರಕಾಶ, ದ ನ್ಯೂ ಕೇಂಬ್ರಿಡ್ಜ್ ಹಿಸ್ಟರಿ ಆಫ್ ಇಂಡಿಯ, ಪು. ೨೩.

೪. ಜೇಮ್ಸ್ ಸಿ ಬಯೋಜಿಯನ್, ಪೋರ್ಚುಗೀಸ್ ಟ್ರೇಡ್ ಇನ್ ಏಷ್ಯಾ, ಪು. ೨೪.

೫. ಜೇಮ್ಸ್ ಸಿ. ಬಯೋಜಿಯನ್, ಪೋರ್ಚುಗೀಸ್ ಟ್ರೇಡ್ ಇನ್ ಏಷ್ಯಾ, ಪು. ೩೦.

೬. ಮ್ಯಾಲೆಸನ್ ಜಿ.ಬಿ., ಹಿಸ್ಟರಿ ಆಫ್ ದ ಫ್ರೆಂಚ್ ಇನ್ ಇಂಡಿಯ, ಪು. ೬೩.

೭. ವ್ಯಾನ್ ಲಹುಜೆನ್, ದ ಡಚ್ ಈಸ್ಟ್ ಇಂಡಿಯ ಕಂಪನಿ, ಪು. ೧೪೧.

೮. ಮ್ಯಾಲೆಸನ್ ಜಿ.ಬಿ., ಹಿಸ್ಟರಿ ಆಫ್ ದ ಫ್ರೆಂಚ್ ಇನ್ ಇಂಡಿಯ, ಪು. ೧೨೭.

೯. ಎಡ್ವರ್ಡ್ ಥಾಮಸನ್ ಗ್ಯಾರೆಟ್ ಜಿ.ಟಿ., ಹಿಸ್ಟರಿ ಆಫ್ ಬ್ರಿಟಿಷ್ ರೂಲ್ ಇನ್ ಇಂಡಿಯ, ಪು. ೭೬.

೧೦. ವಿಲಿಯಂ ಹೆಚ್. ಮ್ಯಾಕನೀಲ್, ಎ ವರ್ಲ್ಡ್ ಹಿಸ್ಟರಿ, ಪು. ೩೬೯.

೧೧. ಎಡ್ವರ್ಡ್ ಥಾಮಸನ್ ಗ್ಯಾರೆಟ್ ಜಿ.ಟಿ., ಹಿಸ್ಟರಿ ಆಫ್ ಬ್ರಿಟಿಷ್ ರೂಲ್ ಇನ್ ಇಂಡಿಯ, ಪು. ೭೬.

೧೨. ಜೋಶಿ ಪಿ.ಎಸ್., ಗೋಲ್ಕರ್ ಎಸ್.ವಿ., ಹಿಸ್ಟರಿ ಆಫ್ ಮಾಡ್ರನ್ ಇಂಡಿಯ, ಪು. ೭೭.

೧೩. ಮ್ಯಾಕ್ಲೀಮ್ ಸಿ.ಡಿ., ಮ್ಯಾನುಯಲ್ ಆಫ್ ಆಡ್ಮನಿಸ್ಟ್ರೇಟ್ ಆಫ್ ಮದ್ರಾಸ್, ಪು. ೬೩.

೧೪. ಜೋಶಿ ಪಿ.ಎಸ್., ಗೋಲ್ಕರ್ ಎಸ್.ವಿ., ಹಿಸ್ಟರಿ ಆಫ್ ಮಾಡ್ರನ್ ಇಂಡಿಯ, ಪು. ೭೯.

೧೫. ಪೃಥ್ವಿ ಆರ್.ಕೆ., ಹಿಸ್ಟರಿ ಆಫ್ ಮಾಡರಿನ್ ಇಂಡಿಯ, ಪು. ೪೪.

೧೬. ಕೆ. ಅಂತೋನವ, ಜಿ. ಕತೋವ್ಸ್ಕಿ, ಇಂಡಿಯನ್ ಹಿಸ್ಟರಿ, ಪು. ೩೭.

೧೭. ಮಾರ್ಕ್ಸ್ ಎಂಗೆಲ್ಸ್, ಸೆಲೆಕ್ಟೆಡ್ ಕರೆಸ್‌ಪಾಂಡೆನ್ಸ್, ಪು. ೪೧.

೧೮. ಪೀಟರ್ ಹೀಸ್, ಇಂಡಿಯಾಸ್ ಫ್ರೀಡಂ ಸ್ಟ್ರಗಲ್, ಪು. ೭, ೮.

೧೯. ಕಾರ್ಲ್‌ಮಾರ್ಕ್ಸ್, ನೋಟ್ಸ್ ಆನ್ ಇಂಡಿಯನ್ ಹಿಸ್ಟರಿ, ಪು. ೧೧೦.

೨೦. ಪೀಟರ್ ಹೀಸ್, ಇಂಡಿಯಾಸ್ ಫ್ರೀಡಂ ಸ್ಟ್ರಗಲ್, ಪು. ೧೬.

೨೧. ಬಿಪನ್ ಚಂದ್ರ., ಅಮಲೇಶ್ ತ್ರಿಪಾಟಿ, ಬರುನ್‌ಡೇ., ಫ್ರೀಡಂ ಸ್ಟ್ರಗಲ್, ಪು. ೨.

೨೨. ಮೋಹನಕೃಷ್ಣ ರೈ. ಕೆ., ವಸಾಹತುಶಾಹಿ ಮತ್ತು ನಗರೀಕರಣ, ಪು. ೧೦೫.

೨೩. ಪುನರ್ವಸು, ಕ್ರಾಂತಿ ದೀವಿಗೆ, ಪು. ೪.

೨೪. ಅಗರ್‌ವಾಲ್ ಆರ್.ಸಿ., ಕಾನ್‌ಸ್ಟ್ಯೂಷನಲ್ ಡೆವಲಪ್‌ಮೆಂಟ್ ಅಂಡ್ ನ್ಯಾಷನಲ್ ಮೂವ್‌ಮೆಂಟ್ ಇನ್ ಇಂಡಿಯ, ಪು. ೩.

೨೫. ಶಾರದಾ ಪ್ರಸಾದ್ ಎನ್.ಎಸ್., ಭಾರತದ ಪ್ರೌಢ ಇತಿಹಾಸ, ಪು. ೫೮೪.

೨೬. ಅನಂತರಾಮಯ್ಯ ಆರ್.ಎಲ್., ಸ್ವಾತಂತ್ರ್ಯದ ಹೋರಾಟ, ಪು. ೪೩.

೨೭. ಮೋಹನಕೃಷ್ಣ ರೈ. ಕೆ., ವಸಾಹತುಶಾಹಿ ಮತ್ತು ನಗರೀಕರಣ, ಪು. ೧.

೨೮. ಬಿಪನ್ ಚಂದ್ರ, ನ್ಯಾಷನಾಲಿಸಂ ಅಂಡ್ ಕಲೋನಿಲಿಸಂ ಇನ್ ಮಾಡ್ರನ್ ಇಂಡಿಯ, ಪು. ೧೪.

೨೯. ತಂಬಂಡ ವಿಜಯ್ ಪೂಣಚ್ಚ, ಚರಿತ್ರೆ ವಿಶ್ವಕೋಶ, ಪು. ೧೭೨.

೩೦. ಬಿಪನ್ ಚಂದ್ರ., ಅಮಲೇಶ್ ತ್ರಿಪಾಟಿ., ಬರುನ್ ಡೇ., (ಅನು) ಆರ್.ಎಲ್. ಅನಂತರಾಮಯ್ಯ, ಸ್ವಾತಂತ್ರ್ಯ ಸಂಗ್ರಾಮ, ಪು. ೯.

೩೧. ಗ್ರೀಫ್‌ತೀಸ್, ಬ್ರಿಟಿಷ್ ಇಂಪ್ಯಾಕ್ಟ್ ಇನ್ ಇಂಡಿಯ, ಪು. ೩೯೧.

೩೨. ಚಂದ್ರಶೇಖರ್ ಎಸ್., ದಕ್ಷಿಣ ಭಾರತದ ವಸಾಹತುಶಾಹಿ ರಾಷ್ಟ್ರೀಯತೆ ಮತ್ತು ಸಂಘರ್ಷ, ಪು. ೭.

೩೩. ಪಮೇಲ ನೈಟಿಂಗೇಲ್, ಟ್ರೇಡ್ ಅಂಡ್ ಎಂಪೈರ್ ಇನ್ ವೆಸ್ಟ್ರನ್ ಇಂಡಿಯ, ಪು. ೨೭೧.

೩೪. ಡೇವಿಡ್ ಅರ್ನಾಲ್ಡ್, ನೇಚರ್ ಕಲ್ಚರ್ ಇಂಪಿರಿಲಿಯಿಸಂ, ಪು. ೭೩.

೩೫. ಪುನರ್ವಸು, ಕ್ರಾಂತಿದೀವಿಗೆ, ಪು. ೨.

೩೬. ಗೋಲ್ಕರ್ ಎಸ್.ವಿ., ಹಿಸ್ಟರಿ ಆಫ್ ಮಾಡ್ರನ್ ಇಂಡಿಯ, ಪು. ೧೩೨.

೩೭. ಬಿಪನ್ ಚಂದ್ರ, ನ್ಯಾಷನಾಲಿಸಂ ಅಂಡ್ ಕಲೋನಾಲಿಸಂ ಇನ್ ಮಾಡ್ರನ್ ಇಂಡಿಯ, ಪು. ೨೫.

೩೮. ಮೋಹನಕೃಷ್ಣ ರೈ. ಕೆ., ವಸಾಹತುಶಾಹಿ ಮತ್ತು ನಗರೀಕರಣ, ಪು. ೩.

೩೯. ದೇಬಾಸ್ ಬ್ಯಾನರ್ಜಿ, ಕಲೋನಿಯಾಲಿಸಂ ಇನ್ ಆ್ಯಕ್ಷನ್, ಪು. ೩೭.

೪೦. ಪಮೇಲ ನೈಟಿಂಗೇಲ್, ಟ್ರೇಡ್ ಅಂಡ್ ಎಂಪೈರ್ ಇನ್ ವೆಸ್ಟ್ರನ್ ಇಂಡಿಯ, ಪು. ೨೩೩.

೪೧. ಕೆಯ್, ಡಬ್ಲ್ಯುಜೆ, ದ ಅಡ್ಮನಿಸ್ಟ್ರೇಷನ್ ಆಫ್ ದ ಈಸ್ಟ್ ಇಂಡಿಯ ಕಂಪನಿ, ಪು. ೧೪೭.

೪೨. ಪೃಥ್ವಿ ಆರ್.ಕೆ., ಹಿಸ್ಟರಿ ಆಫ್ ಮಾಡರ್ನ್ ಇಂಡಿಯ, ಪು. ೩೫೨.

೪೩. ಕಾರ್ಲ್ಸ್‌ಮಾರ್ಕ್ಸ್, ದಾಸ್ ಕ್ಯಾಪಿಟಲ್, ಚಾಪ್ಟರ್ ೧೫, ಸೆಕ್ಷನ್ ೫.

೪೪. ರಜನಿ ಪಾಲ್ಮೆದತ್ತ, ಇಂಡಿಯ ಟುಡೇ, ಪು. ೭೮.

೪೫. ಗ್ರೀಫ್‌ತೀಸ್, ಬ್ರಿಟಿಷ್ ಇಂಪ್ಯಾಕ್ಟ್ ಇನ್ ಇಂಡಿಯ, ಪು. ೩೯೧.

• • •

ಅಧ್ಯಾಯ ೩

# ೧೮೫೭ರ ಘಟನೆಯ ಸ್ವರೂಪ

೩.೧. ೧೮೫೭ರ ಘಟನೆ ಕುರಿತ ಸೈದ್ಧಾಂತಿಕ ನಿಲುವುಗಳು : ಸಾಮ್ರಾಜ್ಯಶಾಹಿ, ರಾಷ್ಟ್ರೀಯವಾದಿ, ಮಾರ್ಕ್ಸ್‌ವಾದಿ ಹಾಗೂ ಸಬಾಲ್ಟರ್ನ್

೩.೨. ಭಾರತದಲ್ಲಿ ೧೮೫೭ರ ಹೋರಾಟ

೩.೩. ಕರ್ನಾಟಕದಲ್ಲಿ ೧೮೫೭ರ ಹೋರಾಟ

೩.೪. ೧೮೫೭ರ ಹೋರಾಟದ ಪರಿಣಾಮಗಳು

ಅಧ್ಯಾಯ ೩

# ೧೮೫೭ರ ಘಟನೆಯ ಸ್ವರೂಪ

೧೮೫೭ರ ಐತಿಹಾಸಿಕ ಹೋರಾಟಕ್ಕೆ ೧೫೦ ವರ್ಷಗಳು ಪೂರ್ಣಗೊಂಡಿರುವ ಈ ವರ್ಷದಲ್ಲಿ, ಈ ಹೋರಾಟವನ್ನು ಪುನರ್‌ವಿಶ್ಲೇಷಣೆಗೆ ಹಾಗೂ ಪುನರ್‌ವ್ಯಾಖ್ಯಾನಕ್ಕೆ ಒಳಪಡಿಸಿ ನಾನಾ ದೃಷ್ಟಿಕೋನದಿಂದ ಪರಾಮರ್ಶಿಸುವುದು ಅವಶ್ಯಕವಾಗಿದೆ. ಈ ಘಟನೆಯಲ್ಲಿ ಹೋರಾಡಿ ಸಾಧನೆಗೈದು ಹುತಾತ್ಮರಾದ ರಾಷ್ಟ್ರೀಯ ನಾಯಕರ ಜೊತೆಗೆ, ಸ್ಥಳೀಯ ನಾಯಕರ ಬಗ್ಗೆಯೂ ಬೆಳಕು ಚೆಲ್ಲಿ, ಸ್ಥಳೀಯ ಮಟ್ಟದಲ್ಲಿ ಇವರ ಹೋರಾಟ, ತ್ಯಾಗ, ಬಲಿದಾನ, ಪ್ರೇರಣೆ, ಪ್ರಭಾವಗಳನ್ನು ಗಮನಿಸಬೇಕಾಗಿದೆ. ಜೊತೆಗೆ ಈ ಘಟನೆಯಲ್ಲಿ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಭಾಗವಹಿಸಿದರೂ, ಇತಿಹಾಸದಲ್ಲಿ ಗುರುತಿಸಿ ಕೊಳ್ಳದಿರುವ, ಮರೆಯಾಗಿರುವ, ಕೆಳಸ್ತರದ ಜನವರ್ಗದವರು ಭಾಗವಹಿಸಿರುವ ಬಗ್ಗೆಯೂ ಬೆಳಕು ಚೆಲ್ಲಬೇಕಾಗಿದೆ.

ರಾಷ್ಟ್ರೀಯ ಹೋರಾಟಕ್ಕೆ ಪ್ರೇರಣೆ ನೀಡಿದ ಈ ೧೮೫೭ರ ಘಟನೆಯನ್ನು ಭಾರತೀಯರಿಗೆ, ಸ್ವಾತಂತ್ರ್ಯ ಪ್ರೇಮಿಗಳಿಗೆ, ಇತಿಹಾಸ ವಿದ್ಯಾರ್ಥಿಗಳಿಗೆ ಈಗಿನ ಹಾಗೂ ಮುಂದಿನ ಪೀಳಿಗೆಗೆ ಈ ಹೋರಾಟದ ಮಹತ್ವವನ್ನು ಪುನರ್‌ನೆನಪಿಸಿ, ಮುಂದಿನ ಅಧ್ಯಯನ, ಸಂಶೋಧನೆಗಳಿಗೆ ಸ್ಫೂರ್ತಿಯಾಗಲು ಹೊಸದೃಷ್ಟಿಕೋನದಿಂದ ಹೊಸ ಹೊಸ ಚಿಂತನೆಗೆ ಒಳಪಡಿಸಿ ಲಭ್ಯವಿರುವ ಆಧಾರಗಳಿಂದ ಪುನರ್‌ರಚಿಸುವುದು ಅವಶ್ಯಕವಾಗಿದೆ. ವಿಶೇಷವಾಗಿ ಕರ್ನಾಟಕದಲ್ಲಿ ೧೮೫೭ರ ಹೋರಾಟದ ಕೇಂದ್ರಗಳು, ಪ್ರದೇಶಗಳು, ಭಾಗವಹಿಸಿದ ಸ್ಥಳೀಯ ನಾಯಕರು ಮತ್ತು ಹೋರಾಟದ ಸಂದರ್ಭಗಳ ಬಗ್ಗೆ ವಿಶ್ಲೇಷಿಸಿ, ಹೋರಾಟಕ್ಕೆ ಹೊಸ ಆಯಾಮವನ್ನು ನೀಡುವ, ಕರ್ನಾಟಕದ ಇತಿಹಾಸ ಭಂಡಾರಕ್ಕೆ ಹೊಸ ದಾಖಲೆಯನ್ನು ಸೇರಿಸುವ ಪ್ರಯತ್ನವನ್ನು ಮಾಡಲಾಗಿದೆ.

ಕ್ರಿ.ಶ. ೧೭೫೭ರಿಂದ ೧೮೫೭ರವರೆಗಿನ ಈ ಒಂದು ಶತಮಾನದಲ್ಲಿ ಆಂಗ್ಲ ಅಧಿಕಾರಿಗಳು ಭಾರತೀಯರನ್ನು ರಾಜಕೀಯವಾಗಿ ಪರತಂತ್ರರನ್ನಾಗಿ, ಆರ್ಥಿಕವಾಗಿ ನಿರ್ಗತಿಕರನ್ನಾಗಿ, ಸಾಮಾಜಿಕವಾಗಿ ಅಸಮಾನರನ್ನಾಗಿ, ಧಾರ್ಮಿಕವಾಗಿ ಅತಂತ್ರರನ್ನಾಗಿ ಮಾಡಿದರು. ಆಂಗ್ಲರ ಆಡಳಿತದಿಂದ ಭಾರತೀಯರು ತೀವ್ರವಾಗಿ ಅಸಂತೃಪ್ತಿಯನ್ನು ಹೊಂದಿದ್ದರು. ಬ್ರಿಟಿಷರು ಜಾರಿಗೊಳಿಸಿದ ಅನೇಕ ಕ್ರಾಂತಿಕಾರಕ ಬದಲಾವಣೆಗಳು ಭಾರತೀಯರು ಪರಂಪರಾಗತವಾಗಿ ಪಾಲಿಸಿಕೊಂಡ ಬಂದ ಮೌಲ್ಯಗಳಿಗೆ ಧಕ್ಕೆ

ಉಂಟಾಯಿತು ಹಾಗೂ ಕಡೆಗಣಿಸಲ್ಪಟ್ಟವು. ಭಾರತೀಯರ ಸಾಮಾಜಿಕ ಮತ್ತು ಧಾರ್ಮಿಕ ಮೌಲ್ಯಗಳನ್ನು ಕಡೆಗಣಿಸಿದ್ದರಿಂದಾಗಿ ಸ್ಥಳೀಯರು ಬ್ರಿಟಿಷ್ ಆಳ್ವಿಕೆಯ ವಿರುದ್ಧ ಧ್ವನಿ ಎತ್ತಲಾರಂಭಿಸಿದರು. ಆಂಗ್ಲರು ಒಂದು ಶತಮಾನದಲ್ಲಿ ನಡೆಸಿದ ಆಕ್ರಮಣ, ಅನ್ಯಾಯ, ಶೋಷಣೆಯ ವಿರುದ್ಧ ೧೮೫೭ರಲ್ಲಿ ಭಾರತದ ಎಲ್ಲ ವರ್ಗದ ಜನರು ಬಂಡೆದ್ದರು.[೧]

೧೮೫೭ರಲ್ಲಿ ಸೈನಿಕರು ಹಾಗೂ ಸಂಸ್ಥಾನಿಕರು ಬ್ರಿಟಿಷರ ವಿರುದ್ಧ ನಡೆಸಿದ ಹೋರಾಟದ ಸ್ವರೂಪದ ಕುರಿತು ೧೮೫೭ರಿಂದ ೨೦೦೭ರವರೆಗೆ, ಅಂದರೆ ಕಳೆದ ೧೫೦ ವರ್ಷಗಳಲ್ಲಿ ಚರಿತ್ರೆ ವಲಯಗಳಲ್ಲಿ ಸಾಕಷ್ಟು ಚರ್ಚೆ, ವಿಮರ್ಶೆಗಳು ನಡೆದಿವೆ. ಈ ಹೋರಾಟದ ಅಧ್ಯಯನದ ಸಂದರ್ಭದಲ್ಲಿ ಉದ್ಭವಿಸುವ ಮುಖ್ಯ ಪ್ರಶ್ನೆ ಎಂದರೆ, ೧೮೫೭ರ ಹೋರಾಟವು ಆಕಸ್ಮಾತ್ ಆಗಿ ಸಿಪಾಯಿಗಳಿಂದ ತತ್‌ಕ್ಷಣವಾಗಿ ಆರಂಭಗೊಂಡ ಸಿಪಾಯಿಗಳ ದಂಗೆಯೇ ಅಥವಾ ಬ್ರಿಟಿಷರ ಕ್ರೂರ ನೀತಿಗಳಿಂದ ಬೇಸತ್ತು, ಕೆಲವೊಂದು ವರ್ಗದ ಜನರು ಪ್ರತಿಭಟಿಸಿದ ಸಾಮಾನ್ಯ ದಂಗೆಯೇ ಅಥವಾ ಬ್ರಿಟಿಷರನ್ನು ಭಾರತದಿಂದ ಓಡಿಸಲು ಸಿಪಾಯಿಗಳಿಂದ ದಂಗೆ ಆರಂಭವಾಗಿ ತೀವ್ರವಾಗಿ ವ್ಯಾಪಿಸಿ, ತೀವ್ರ ಪರಿಣಾಮಗಳನ್ನು ಬೀರಿದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮವೇ ಎನ್ನುವುದು. ಚರಿತ್ರೆಯ ಮುಖ್ಯ ಪುಟಗಳಲ್ಲಿ ಪ್ರಕಟಗೊಳ್ಳದ ಕೆಲವು ಅಂಶಗಳು ಇಂದು ಅತ್ಯಂತ ಜರೂರಾಗಿ ವಿಶ್ಲೇಷಣೆಗೆ ಒಳಗೊಳ್ಳಬೇಕಾಗಿದೆ. ಕೆಲವೊಂದು ಘಟನೆಗಳು ಚಾರಿತ್ರಿಕ ವಾಗಿದ್ದರೂ, ಅವುಗಳ ಪರಿಪೂರ್ಣವಾದ ಹಾಗೂ ನಿರ್ದಿಷ್ಟವಾದ ವಿಶ್ಲೇಷಣೆಗಳು ಸಿಗುವುದಿಲ್ಲ. ೧೮೫೭ರ ಹೋರಾಟವು ಇದಕ್ಕಿಂತ ಭಿನ್ನವಾಗಿಲ್ಲ.

೧೮೫೭ರ ಘಟನೆಯ ಬಗ್ಗೆ ಹಲವಾರು ವಾದಗಳು, ಸಿದ್ಧಾಂತಗಳು ಮಂಡನೆ ಆಗಿವೆ. ದೇಶೀಯರ ನಿಲುವು, ವಿದೇಶಿಯರ ನಿಲುವು, ಸಾಮಾನ್ಯರ ನಿಲುವು, ಒಂದಕ್ಕೊಂದು ತಾಳೆ ಆಗದೆ ವಿರುದ್ಧ ದಿಕ್ಕಿನಲ್ಲಿ ಸಾಗುತ್ತವೆ. ಇದನ್ನು ಸಾಮ್ರಾಜ್ಯಶಾಹಿಗಳ, ರಾಷ್ಟ್ರೀಯವಾದಿಗಳ, ಮಾರ್ಕ್ಸ್‌ವಾದಿಗಳ ಹಾಗೂ ಸಬಾಲ್ಟರ್ನ್ ನಿಲುವುಗಳೆಂದು ವಿಂಗಡಿಸಿ ಸೈದ್ಧಾಂತಿಕವಾಗಿ ನೋಡುವ ಪ್ರಯತ್ನವನ್ನು ಮಾಡಲಾಗಿದೆ. ಈಗಾಗಲೇ ಪ್ರಕಟಗೊಂಡಿರುವ ಗ್ರಂಥಗಳಲ್ಲಿ, ಈ ಹೋರಾಟವನ್ನು ೧೮೫೭ರ ದಂಗೆ, ೧೮೫೭ರ ಸಿಪಾಯಿ ದಂಗೆ, ೧೮೫೭ರ ಸ್ವಾತಂತ್ರ್ಯ ಸಂಗ್ರಾಮ, ೧೮೫೭ರ ಕ್ರಾಂತಿ ಹೀಗೆ ಅನೇಕ ಹೆಸರುಗಳ ಮೂಲಕ ವ್ಯಾಖ್ಯಾನಿಸಿ ದಾಖಲಿಸಲಾಗಿದೆ.

೧೮೫೭ರ ಘಟನೆಯ ಸ್ವರೂಪದ ಬಗ್ಗೆ ವಿಶ್ಲೇಷಣೆ ಮಾಡುವಾಗ ೧೮೫೭ರ ಘಟನೆಯ ನಂತರದ ಅಥವಾ ತಕ್ಷಣದ ಪ್ರತಿಕ್ರಿಯೆಯನ್ನು ಗಮನಿಸುವುದು ಅತ್ಯವಶ್ಯವಾಗಿದೆ. ೧೮೫೭ರ ಸಂಗ್ರಾಮದ ಚರಿತ್ರೆ ಬರೆಯಲು ಆ ಸಮಯದಲ್ಲಿ ಭಾರತೀಯರಿಗೆ ಮುಕ್ತ ಸ್ವಾತಂತ್ರ್ಯವಿರಲಿಲ್ಲ ಅಥವಾ ಬ್ರಿಟಿಷರು ಅವರಿಗೆ ಅವಕಾಶ ನೀಡಲೇ ಇಲ್ಲ ಎನ್ನುವುದು ಐತಿಹಾಸಿಕ ಸತ್ಯ. ಹೀಗಾಗಿ ಈ ಘಟನೆಯ ನಂತರದ ದಿನಗಳಲ್ಲಿ ಹೋರಾಟದ ಬಗ್ಗೆ ಬರೆದವರೆಲ್ಲರೂ ಬ್ರಿಟಿಷರು ಹಾಗೂ ಬ್ರಿಟಿಷ್ ಮನೋಭಾವವುಳ್ಳವರಾಗಿದ್ದರು ಎನ್ನುವ ಅಂಶ ಎದ್ದು ಕಾಣುತ್ತದೆ. ವಿ.ಡಿ. ಸಾವರ್ಕರ್‌ರವರು ಈ ಘಟನೆಯ ೫೦ ವರ್ಷಗಳು ತುಂಬಿದ ಸಂದರ್ಭದಲ್ಲಿ ರಚಿಸಿದ ಅವರ ಗ್ರಂಥ ಪ್ರಕಟಣೆ ಮಾಡುವ ಮುನ್ನವೇ ಅದನ್ನು ಮುಟ್ಟುಗೋಲು ಹಾಕಿಕೊಳ್ಳಲು, ಪ್ರಕಟಗೊಳ್ಳದಂತೆ ನಿರ್ಬಂಧಿಸಿದ್ದೇ ಇದಕ್ಕೆ ಉದಾಹರಣೆಯಾಗಿದೆ.

ಈ ಐತಿಹಾಸಿಕ ಘಟನೆಯ ಬಗ್ಗೆ ಭಾರತೀಯ ಹಾಗೂ ವಿದೇಶಿ ಇತಿಹಾಸಕಾರರು ಅಧ್ಯಯನ ಕೈಗೊಂಡು, ಭಿನ್ನ ನಿಲುವುಗಳನ್ನು ಪ್ರಕಟಿಸಿ ಮುಂದಿನ ಸಂಶೋಧನೆಗೆ ಅಪಾರ ಆಕರ ಸಾಮಗ್ರಿಗಳನ್ನು ಒದಗಿಸಿಕೊಟ್ಟಿದ್ದಾರೆ. ಈ ನಿಟ್ಟಿನಲ್ಲಿ ಈ ಘಟನೆ ಬಗ್ಗೆ ಹೊಸ ದೃಷ್ಟಿಕೋನದಿಂದ ವಿಶ್ಲೇಷಿಸುವ, ವಿಮರ್ಶೆ ಮಾಡುವ, ಚರಿತ್ರೆಯ ಗ್ರಂಥಗಳು ರಚನೆಯಾಗುತ್ತಿವೆ. ಈ ಐತಿಹಾಸಿಕ ಹೋರಾಟಕ್ಕೆ ೧೫೦ ವರ್ಷಗಳು ಪೂರ್ಣಗೊಂಡಿರುವ ಈ ಸಂದರ್ಭದಲ್ಲಿ ಘಟನೆ ಕುರಿತ ಎಲ್ಲ ನಿಲುವುಗಳನ್ನು ಪುನರ್ ವ್ಯಾಖ್ಯಾನಿಸುವ ಮಹತ್ವದ ಕಾರ್ಯ ಆಗಬೇಕಿದೆ. ಹೋರಾಟ ಆರಂಭಗೊಂಡ ಬಗ್ಗೆ, ಅದರ ಹರಡುವಿಕೆ ಹಾಗೂ ಪರಿಣಾಮಗಳ ತಲಸ್ಪರ್ಶಿ ಅಧ್ಯಯನ ಕೈಗೊಂಡಾಗ ಮಾತ್ರ ಹೋರಾಟದ ಸ್ವರೂಪವನ್ನು ಅರ್ಥೈಸಿಕೊಳ್ಳಲು ಸಾಧ್ಯ.

### ೩.೧. ೧೮೫೭ರ ಘಟನೆಯ ಕುರಿತ ಸೈದ್ಧಾಂತಿಕ ನಿಲುವುಗಳು

**ಸಾಮ್ರಾಜ್ಯಶಾಹಿ ನಿಲುವು**

೧೮೫೭ರ ಹೋರಾಟದ ಸ್ವರೂಪವನ್ನು ಪ್ರಸ್ತಾಪ ಮಾಡಿರುವ ಬ್ರಿಟಿಷ್ ವಿದ್ವಾಂಸರು. ಈ ಘಟನೆಯ ಮುಖ್ಯಕಾರಣ ಮತ್ತು ತತ್‌ಕ್ಷಣದ ಕಾರಣಗಳನ್ನು ಗಮನಿಸಿ ಇದೊಂದು 'ದಂಗೆ' ಎಂದು ಕರೆದರು. ಈ ಘಟನೆಯ ತತ್‌ಕ್ಷಣದ ಕಾರಣಕ್ಕೆ ಸಿಪಾಯಿಗಳೇ ಕಾರಣವೆಂದು ಮತ್ತು ಸಿಪಾಯಿಗಳಿಂದಲೇ ಈ ಹೋರಾಟ ಆರಂಭವಾಗಿ, ಹರಡಿದ್ದರಿಂದ ಈ ಘಟನೆಯನ್ನು 'ಸಿಪಾಯಿ ದಂಗೆ' ಎನ್ನುವ ಅಭಿಪ್ರಾಯಕ್ಕೆ ಸೀಮಿತಗೊಳಿಸಿದರು.

ಕ್ಯಾಪ್ಟನ್ 'ಕೈಗೀ' ಎಂಬುವವನು 'ಮ್ಯೂಟನೀ' (ದಂಗೆ) ಎಂಬ ಶಬ್ದವನ್ನು ಮೊದಲ ಬಾರಿಗೆ ಬಳಸಿದ್ದನು ಎಂಬುದು ಕಂಡು ಬರುತ್ತದೆ. ಸೈನಿಕರ ದಂಗೆ ಬಗ್ಗೆ ಮಾಹಿತಿ ಪಡೆದ ಈತನು, ಗಾಬರಿ ಬಿದ್ದು ಹಿರಿಯ ಅಧಿಕಾರಿಗಳಿಗೆ ತಂತಿ ಸಂದೇಶ ಕೊಟ್ಟು, ಪರಿಸ್ಥಿತಿ ಕೈಮೀರುತ್ತಿದೆ, ಈ ವಿಷಯದಲ್ಲಿ ತುರ್ತು ಕ್ರಮಕೈಗೊಳ್ಳಬೇಕು, ಯಾವುದೇ ಕ್ಷಣ ಇಲ್ಲಿ ಸಿಪಾಯಿಗಳು ದಂಗೆ ಏಳಬಹುದು ಎಂದು ತಿಳಿಸಿದ.[೨] ಹೀಗಾಗಿ ೧೮೫೭ರ ಹೋರಾಟವನ್ನು ದಂಗೆ ಎಂದು ಸಂಬೋಧಿಸಿದ ವ್ಯಕ್ತಿ ಈತನೇ ಎಂದು ಕಂಡು ಬರುತ್ತದೆ. ನಂತರ ಆಗ ಭಾರತದಲ್ಲಿ 'ಸೆಕ್ರಟರಿ ಆಫ್ ಸ್ಟೇಟ್' ಆಗಿದ್ದ ಬ್ರಿಟಿಷ್ ಅಧಿಕಾರಿ 'ಅರ್ಲ್ ಸ್ಟ್ಯಾನಲೆ' ೧೮೫೭ರಲ್ಲಿ ನಡೆದ ಈ ಘಟನೆಯ ಬಗ್ಗೆ ಪಾರ್ಲಿಮೆಂಟಿಗೆ ಸಲ್ಲಿಸಿದ ವರದಿಯಲ್ಲಿ 'ದಂಗೆ' ಎನ್ನುವ ಪದವನ್ನು ಬಳಸಿದ್ದಾನೆ.[೩]

ಸರ್ ಜಾನ್ ಲಾರೆನ್ಸ್‌ನು ಈ ಘಟನೆಯ ಬಗ್ಗೆ ಬರೆಯುತ್ತಾ ದಂಗೆಯು ಮೂಲತಃ ಸೈನ್ಯದಲ್ಲಿ ಉದ್ಭವಿಸಿತು. ಇದಕ್ಕೆ ಮುಖ್ಯ ಕಾರಣವೆಂದರೆ ಭಾರತೀಯ ಸಿಪಾಯಿಗಳು ಬಳಸುತ್ತಿದ್ದ ಬಂದೂಕಿನ ತೋಟಾಗಳಿಗೆ ಹಂದಿ ಮತ್ತು ದನದ ಕೊಬ್ಬನ್ನು ಸವರಿದ ಅಂಶವೇ ಕಾರಣವಾಗಿತ್ತೇ ಹೊರತು ಬೇರಾವ ಕಾರಣವಿರಲಿಲ್ಲ ಎನ್ನುವ ಅಭಿಪ್ರಾಯ ವ್ಯಕ್ತಪಡಿಸಿದ್ದಾನೆ.[೪] ಸರ್ ಜಾನ್ ಶೀಲೆಯು ೧೮೫೭ರ ದಂಗೆಯು ಸ್ವಾರ್ಥ ಸೈನಿಕರ ದಂಗೆಯಾಗಿದ್ದು, ಇದಕ್ಕೆ ಸ್ಥಳೀಯರ ನಾಯಕತ್ವವಾಗಲಿ ಜನತೆಯ ಬೆಂಬಲವಾಗಲಿ ಇರಲಿಲ್ಲ ಎಂದು ಅಭಿಪ್ರಾಯ ಪಟ್ಟಿದ್ದಾನೆ.[೫]

ಥಾಮಸನ್ ಮತ್ತು ಗ್ಯಾರೆಟ್, ಇವರು ೧೮೫೭ರ ಸ್ವರೂಪದ ಬಗ್ಗೆ ತಮ್ಮ ಕೃತಿಯಾದ 'ರೈಸ್ ಅಂಡ್ ಫಾಲ್ ಆಫ್ ಬ್ರಿಟಿಷ್ ಇನ್ ಇಂಡಿಯ'ದಲ್ಲಿ ಇದು ಒಂದು ಸೈನಿಕ ದಂಗೆ ಅಥವಾ ಭಾರತದ ಅರಸರು, ಜಮೀನುದಾರರು ತಾವು ಕಳೆದುಕೊಂಡ ಹಕ್ಕು-ಬಾಧ್ಯತೆಗಳನ್ನು ಮರಳಿ ಪಡೆಯಲು ನಡೆಸಿದ ಪ್ರಯತ್ನ ಎಂದಿದ್ದಾರೆ.[೬] ಇವರ ಅಭಿಪ್ರಾಯದಲ್ಲಿ ಜಮೀನುದಾರರು, ರೈತರು ದಂಗೆಯಲ್ಲಿ ಭಾಗವಹಿಸಿದ್ದರಾದರೂ, ಈ ಹೋರಾಟ ಆರಂಭವಾಗಲು ಸೈನಿಕರೇ ಕಾರಣ ಎಂದು ಹಾಗಾಗಿ ಇದೊಂದು ಸೈನಿಕ ದಂಗೆ ಎಂದಿದ್ದಾರೆ. ವೈಟ್ ಎಂಬ ವಿದ್ವಾಂಸನು ೧೮೫೭ರ ದಂಗೆಯು ರಾಷ್ಟ್ರೀಯ ಚಳುವಳಿಯಲ್ಲ. ಅದು ಒಂದು ಸೈನಿಕ ದಂಗೆಯಾಗಿತ್ತು. ಒಂದು ವೇಳೆ ಅದು ರಾಷ್ಟ್ರೀಯವಾಗಿದ್ದಲ್ಲಿ ಅದು ಯಶಸ್ವಿಯಾಗುತ್ತಿತ್ತು ಎಂದಿದ್ದಾನೆ.[೭] ಸ್ಮಿತ್ ೧೮೫೭ರ ದಂಗೆಯ ಸ್ವರೂಪವನ್ನು ಕುರಿತು, ೧೮೫೭ರ ಘಟನೆಯು ಪೂರ್ಣವಾಗಿ ಸಿಪಾಯಿಗಳ ದಂಗೆಯಾಗಿದ್ದು, ಭಾಗಶಃ ಜನರ ಬಂಡಾಯವಾಗಿತ್ತು ಎಂದಿದ್ದಾನೆ.[೮]

ಜಾನ್ ಖೇ ತಮ್ಮ ಕೃತಿ 'ಎ ಹಿಸ್ಟರಿ ಆಫ್ ಸಿಪಾಯ್ ವಾರ್ ಇನ್ ಇಂಡಿಯ-೧೮೫೭-೫೮'ನಲ್ಲಿ, ಅನಾಗರಿಕತೆಯ ಪ್ರಶ್ನೆಯನ್ನು ಮುಂದಿಡುತ್ತಾ, ಈ ಘಟನೆಯನ್ನು 'ಮ್ಯೂಟನಿ ಆಫ್ ನೇಟಿವ್ಸ್' ಎಂದು ಕರೆಯುತ್ತ, ಸ್ಥಳೀಯರಿಗೆ ನಾಗರಿಕರಾಗಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಿಸಿದ ವಸಾಹತುಶಾಹಿಗಳ ವಿರುದ್ಧ ಹೋರಾಟ ಎಂದಿದ್ದಾನೆ. ಇನ್ನೂ ಮುಂದುವರಿದು ದಂಗೆಗೆ ಯಾವುದೇ ರಾಷ್ಟ್ರೀಯ ಸ್ವರೂಪ ಇರಲಿಲ್ಲವೆಂದೂ, ರಾಷ್ಟ್ರಾದ್ಯಂತ ಹರಡಿರದೇ, ಕೇವಲ ತಮ್ಮ ಹಕ್ಕು-ಬಾಧ್ಯತೆಗಳನ್ನು ಕಳೆದುಕೊಂಡ ಸೈನಿಕರ ಹಾಗೂ ಸ್ಥಳೀಯರ ದಂಗೆಯಾಗಿತ್ತು ಎಂದಿದ್ದಾನೆ.[೯]

ಪಿ.ಇ. ರಾಬರ್ಟ್ಸ್ ಪ್ರಕಾರ, "ಕ್ರಾಂತಿ ಪೂರ್ಣ ರಾಷ್ಟ್ರಪ್ರೇಮ ರಹಿತವಾದದ್ದು ಮತ್ತು ಸ್ವಹಿತಾಕಾಂಕ್ಷೆಯುಳ್ಳದ್ದೂ ಆಗಿದ್ದಿತು. ಅದಕ್ಕೆ ಸ್ಥಳೀಯ ನಾಯಕತ್ವವಾಗಲಿ ಅಥವಾ ಜನತೆಯ ಬೆಂಬಲವಾಗಲಿ ಇರಲಿಲ್ಲ. ಈ ದಂಗೆಯಲ್ಲಿ ಅತೀ ಹೆಚ್ಚು ಭಾಗವಹಿಸಿದವರೆಂದರೆ ಸೈನಿಕರು. ಹಾಗಾಗಿ ಇದೊಂದು ಸಿಪಾಯಿ ದಂಗೆ" ಎಂದಿದ್ದಾನೆ.[೧೦] ರೀಸ್.ಎಲ್.ಇ.ಆರ್. ಪ್ರಕಾರ, ೧೮೫೭ರ ದಂಗೆಯು, ಕ್ರಿಶ್ಚಿಯನ್ನರ ವಿರುದ್ಧದ ಧರ್ಮಾಂಧರ ಹೋರಾಟವಾಗಿತ್ತು.[೧೧] ಹೋಮ್ಸ್ ಟಿ.ಆರ್. ಅವರು ೧೮೫೭ರ ಹೋರಾಟವನ್ನು "ನಾಗರಿಕತೆಯ ವಿರುದ್ಧ ಅಸಂಸ್ಕೃತರ ಹೋರಾಟ" ಎಂದಿದ್ದಾನೆ.[೧೨] ಟೇಲರ್ ಡಬ್ಲ್ಯೂ.ರ ಪ್ರಕಾರ, "ಹಿಂದೂ ಮತ್ತು ಮುಸ್ಲಿಂರ ಒಳಸಂಚಿನ ಪರಿಣಾಮವಾಗಿ ೧೮೫೭ರ ದಂಗೆಯು ಸ್ಫೋಟಗೊಂಡಿತು. ಇದು ಹಿಂದೂ ಜಮೀನ್ದಾರರ ಮೇಲಿನ ಅಸಮಾಧಾನದಿಂದಲೂ ಉಂಟಾಗಿತ್ತು.[೧೩]

ಅಲೆಗ್ಸಾಂಡರ್ ಡಫ್ ಎನ್ನುವ ಲೇಖಕನ ಪ್ರಕಾರ, "೧೮೫೭ರ ಕ್ರಾಂತಿಯು ಹಿಂದುಗಳು ಅಥವಾ ಮುಸ್ಲಿಂರು ರೂಪಿಸಿದ ಸಂಚಿನ ಸ್ವರೂಪದ್ದಾಗಿರದೆ, ಎಲ್ಲ ಮತ, ಜಾತಿ ವರ್ಗಕ್ಕೆ ಸೇರಿದ ಸಿಪಾಯಿಗಳ ತತ್‌ಕ್ಷಣದ ಪ್ರತಿಕ್ರಿಯೆಯಾಗಿತ್ತು.[೧೪]

೧೮೫೭ರ ಘಟನೆಯು ಸಿಪಾಯಿ ದಂಗೆ ಎಂದು ಕರೆದಿರುವ ಬ್ರಿಟಿಷ್ ವಿದ್ವಾಂಸರ ನಿಲುವಿಗೆ ಇತರರು. ಅದರಲ್ಲೂ ಕೆಲವು ಭಾರತೀಯ ವಿದ್ವಾಂಸರು ಬೆಂಬಲ ಸೂಚಿಸಿರುವುದನ್ನು ಕಾಣಬಹುದು.

ಉದಾಹರಣೆಗೆ, ಆರ್.ಸಿ. ಮಜುಂದಾರ್‌ರವರು, ೧೮೫೭ರ ದಂಗೆಯು ರಾಷ್ಟ್ರೀಯ ಸಮರವಲ್ಲವೆಂದು, ದಂಗೆಯ ನಾಯಕರು ಸ್ವಹಿತ ಸಾಧನೆಗಾಗಿ ಬ್ರಿಟಿಷರ ವಿರುದ್ಧ ಹೋರಾಡಿದರೇ ಹೊರತು ಸ್ವಾತಂತ್ರ್ಯಕ್ಕಾಗಿ ಅಲ್ಲವೆಂದೂ, ಇಂತಹ ಹೋರಾಟವನ್ನು ರಾಷ್ಟ್ರೀಯ ಸ್ವಾತಂತ್ರ್ಯ ಹೋರಾಟ ಎಂದು ಕರೆಯಲಾಗುವುದಿಲ್ಲ ಎಂದಿದ್ದಾರೆ.[೧೫] ಜವಾಹರಲಾಲ್ ನೆಹರು ಅವರು ತಮ್ಮ 'ಭಾರತ ದರ್ಶನ' ಗ್ರಂಥದಲ್ಲಿ ೧೮೫೭ರ ಘಟನೆಯನ್ನು ಸ್ವಾತಂತ್ರ್ಯ ಸಂಗ್ರಾಮ ಎಂದು ಕರೆಯಲು ಹಿಂದೇಟು ಹಾಕಿರುವುದು ಕಂಡು ಬರುತ್ತದೆ. ಅವರ ಅಭಿಪ್ರಾಯದಲ್ಲಿ, ೧೮೫೭ರ ಹೋರಾಟವು ಫ್ಯೂಡಲ್ ಪ್ರತಿಭಟನೆ. ಅದನ್ನು ನಡೆಸಿದ ಫ್ಯೂಡಲ್ ಪ್ರಭುಗಳು ಅಸಮರ್ಥರು. ಅವರಿಗೆ ನಿರ್ಮಾಣಾತ್ಮಕವಾದ ಯಾವ ಆದರ್ಶವು ಇಲ್ಲ. ರಾಷ್ಟ್ರೀಯ ಭಾವನೆ ಎಂಬುದು ಆಗ ಇಲ್ಲ ಎಂದಿದ್ದಾರೆ.[೧೬]

**ಸಾಮ್ರಾಜ್ಯಶಾಹಿ ನಿಲುವುಗಳ ವಿಶ್ಲೇಷಣೆ**

೧೮೫೭ರ ಘಟನೆ ಬಗ್ಗೆ ಬ್ರಿಟಿಷ್ ವಿದ್ವಾಂಸರ ಹಾಗೂ ಅಧಿಕಾರಿಗಳ ಹೇಳಿಕೆಗಳನ್ನು ಗಮನಿಸಿದಾಗ, ಅವರ ಪ್ರಕಾರ ಇದೊಂದು ಸಿಪಾಯಿದಂಗೆ ಹಾಗೂ ಬ್ರಿಟಿಷರ ನೀತಿಯನ್ನು ವಿರೋಧಿಸಿದ ಸಿಪಾಯಿಗಳ ಬಂಡಾಯ. ಬ್ರಿಟಿಷ್ ಅಧಿಕಾರಿಗಳು ತಮ್ಮ ವರದಿಯಲ್ಲಿ ಬಳಸಲ್ಪಟ್ಟ ಈ ಪದಗಳನ್ನೇ ಮುಂದೆ ಬ್ರಿಟಿಷ್ ಲೇಖಕರು ಬಳಸಿಕೊಂಡರು. ಬ್ರಿಟಿಷ್ ಸಾಮ್ರಾಜ್ಯಶಾಹಿ ಪ್ರಭುತ್ವದ ಆಜ್ಞೆಗಳನ್ನು ಪಾಲಿಸದೆ ಅವಿಧೇಯತೆ ತೋರಿಸಿದ ಭಾರತೀಯರು ಬ್ರಿಟಿಷರ ಪಾಲಿಗೆ ದಂಗೆಕೋರರಾಗಿ, ಕಂಡಿದ್ದರಲ್ಲಿ ಆಶ್ಚರ್ಯವಿಲ್ಲ.

ಸೈನಿಕರು ಹೋರಾಟ ಆರಂಭಿಸಲು, ಬ್ರಿಟಿಷ್ ಸರಕಾರ, ಬ್ರಿಟಿಷ್ ಮತ್ತು ಭಾರತೀಯ ಸೈನಿಕರ ವಿಚಾರದಲ್ಲಿ ಇಬ್ಬಗೆಯ ನೀತಿ ಅನುಸರಿಸಿದ್ದು ಕಾರಣವಾಗಿರಬಹುದು. ಭಾರತೀಯ ಸೈನಿಕರನ್ನು ಸಾಮಾನ್ಯ ದರ್ಜೆಯಲ್ಲಿಟ್ಟು, ಯಾವ ಸವಲತ್ತುಗಳನ್ನು ನೀಡದೆ, ವೇತನ, ಸ್ಥಾನಮಾನಗಳಲ್ಲಿ ತಾರತಮ್ಯ ನೀತಿಯನ್ನು ಅನುಸರಿಸಲಾಗಿತ್ತು. ಜೊತೆಗೆ ತೋಟಾಗಳಿಗೆ ಕೊಬ್ಬು ಸವರಿದ ಅಂಶವು, ಸೈನಿಕರು ಸಿಡಿದೇಳಲು ಕಾರಣವಾಯಿತು. ಈ ಕಾರಣಗಳಿಂದ ಮಂಗಲಪಾಂಡೆ ಎಂಬ ಸೈನಿಕ ಪ್ರಥಮವಾಗಿ ಬಂಡಾಯ ಎದ್ದು, ನಂತರ ಅದು ಬ್ಯಾರಕ್‌ಪುರ, ಮೀರತ್ ಸೈನಿಕ ತುಕಡಿಗಳಿಗೆ ಹರಡಿತು. ಹಾಗಾಗಿ ಇದನ್ನು ಬ್ರಿಟಿಷರು ಸಿಪಾಯಿ ಮಟ್ಟದ ದಂಗೆ ಎಂದು ಪರಿಗಣಿಸಿರಬಹುದು. ಸಾಮ್ರಾಜ್ಯಶಾಹಿಗಳು ಸಿಪಾಯಿದಂಗೆ ಎನ್ನುವ ನಿಲುವಿಗೆ ಸಮರ್ಥನೆಯನ್ನು ನೀಡಿದರು. ಅದೇನೆಂದರೆ ಆ ಸಮಯದಲ್ಲಿ ಭಾರತೀಯ ಸಂಸ್ಥಾನಗಳಿಗೆ ಬ್ರಿಟಿಷರನ್ನು ಸಂಪೂರ್ಣವಾಗಿ ಹೊಡೆದೋಡಿಸುವ ಇಚ್ಛಾಶಕ್ತಿ ಇರಲಿಲ್ಲ, ಸೈನಿಕವಾಗಿ, ಆರ್ಥಿಕವಾಗಿ, ಭಾರತೀಯ ಅರಸರು ಬ್ರಿಟೀಷ್ ಪ್ರಭುತ್ವವನ್ನು ಎದುರಿಸುವಷ್ಟು ಸಮರ್ಥರಾಗಿರಲಿಲ್ಲ. ಅಂದು ಭಾರತವು ಚಿಕ್ಕ ಚಿಕ್ಕ ಸಂಸ್ಥಾನಗಳ ಬೀಡಾಗಿದ್ದು, ಪ್ರತಿಯೊಂದು ಸಂಸ್ಥಾನಗಳಲ್ಲೂ ಅನೈಕ್ಯತೆ, ಸ್ವಾರ್ಥ, ಭೌಗೋಳಿಕ ಭಿನ್ನತೆ, ಭಾಷಾ ಭಿನ್ನತೆ ಇದ್ದುದರಿಂದ ಅಖಂಡವಾಗಿ ಒಗ್ಗಟ್ಟಿನಿಂದ ಬ್ರಿಟಿಷರನ್ನು ವಿರೋಧಿಸುವ ಶಕ್ತಿ ಇರಲಿಲ್ಲ ಹಾಗೂ ಒಂದು ವೇಳೆ ಸಿಪಾಯಿಗಳು ಹಂದಿ ಮತ್ತು ದನದ ಕೊಬ್ಬನ್ನು ಸವರಿದ ತೋಟಾಗಳನ್ನು ಬಾಯಿಂದ ಕಚ್ಚದೆಯೇ ಇದ್ದಿದ್ದರೆ ಸಿಪಾಯಿಗಳು ಬ್ರಿಟಿಷರ ವಿರುದ್ಧ ಹೋರಾಡುವ ಮನೋಭಾವ

ತಾಳುತ್ತಿದ್ದರೇ ಎನ್ನುವುದು ಅವರ ವಾದವಾಗಿದೆ. ಆದರೆ ೧೮೫೭ರ ಘಟನೆಯು ಕೇವಲ ಸಿಪಾಯಿಗಳ ದಂಗೆ ಆಗಿದ್ದರೆ, ದೇಶೀಯ ಸಂಸ್ಥಾನಗಳು, ಆಳರಸರು, ರೈತರು, ಜನಸಾಮಾನ್ಯರು ಆಯಾ ಪ್ರದೇಶಗಳಲ್ಲಿ ಒಟ್ಟಾಗಿ ಬ್ರಿಟಿಷರ ವಿರುದ್ಧ ದಂಗೆ ಏಳಲು ಕಾರಣವೇನು ಎನ್ನುವ ಪ್ರಶ್ನೆ ಉದ್ಭವಿಸುತ್ತದೆ. ೧೮೫೭ರ ಹೊತ್ತಿಗಾಗಲೇ ಬ್ರಿಟಿಷರ ನೀತಿ ನಿಯಮಗಳಿಂದ ಬೇಸತ್ತಿದ್ದ ಭಾರತೀಯ ಸಂಸ್ಥಾನಗಳು ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಬ್ರಿಟಿಷರನ್ನು ವಿರೋಧಿಸುವ ಹಾಗೂ ಆ ನಿಟ್ಟಿನಲ್ಲಿ ಒಂದಾಗುವ ಪ್ರಯತ್ನವನ್ನು ಮಾಡುತ್ತಲೇ ಇದ್ದವು. ಜೊತೆಗೆ ಸಾಮ್ರಾಜ್ಯಶಾಹಿಗಳ ನೂರಾರು ವರ್ಷಗಳ ಆಳ್ವಿಕೆಯಿಂದ ಬೇಸತ್ತ ಭಾರತೀಯರಲ್ಲಿ, ದಾಸ್ಯದಿಂದ ಮುಕ್ತಿ ಹೊಂದುವ ಮನೋಭಾವ ಚಿಗುರೊಡೆಯಲಾರಂಭಿಸಿತ್ತು.

ಈ ಹಾದಿಯಲ್ಲಿ ೧೮೫೭ರ ಹೋರಾಟವು ಒಂದು ಅವಸರದ ಪ್ರಯತ್ನವಾಯಿತೆ ವಿನಹ ಸ್ವಾತಂತ್ರ್ಯ ಸಂಗ್ರಾಮದ ಮೊದಲ ಹೋರಾಟ ಎಂಬುದನ್ನು ಅಲ್ಲಗಳೆಯಲಿಕ್ಕಾಗುವುದಿಲ್ಲ. ಹಾಗೆಯೇ ಇದೊಂದು ಸಿಪಾಯಿ ದಂಗೆ ಆಗಿರದೆ ಸ್ವಾತಂತ್ರ್ಯ ಸಂಗ್ರಾಮದ ಮೊದಲ ಹೆಜ್ಜೆ ಆಗಿತ್ತು ಎಂದು ಅರ್ಥೈಸುವುದು ಹೆಚ್ಚು ಅರ್ಥಪೂರ್ಣ.

## ರಾಷ್ಟ್ರೀಯವಾದಿಗಳ ನಿಲುವು

ರಾಷ್ಟ್ರೀಯವಾದಿಗಳು ೧೮೫೭ರ ಘಟನೆಯನ್ನು, ಭಾರತದ ಸ್ವಾತಂತ್ರ್ಯ ಸಂಗ್ರಾಮವೆಂದು ಕರೆದಿದ್ದಾರೆ. ೧೮೫೭ರ ಘಟನೆಯನ್ನು ಕೇವಲ ಸಿಪಾಯಿ ದಂಗೆಗೆ ಸೀಮಿತಗೊಳಿಸುವ ಬ್ರಿಟಿಷರ ನಿಲುವನ್ನು, ಹೆಚ್ಚಿನ ಭಾರತೀಯ ಲೇಖಕರು ಚರಿತ್ರೆಕಾರರು ಒಪ್ಪದೆ ತಮ್ಮದೇ ಆದ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ೧೮೫೭ರ ಘಟನೆ ನಡೆದ ಬಗ್ಗೆ ತತ್‌ಕ್ಷಣ ವರದಿ ಮಾಡಿದವರು ಬ್ರಿಟಿಷ್ ಅಧಿಕಾರಿಗಳು ಹಾಗೂ ಈ ಘಟನೆ ಬಗ್ಗೆ ತಕ್ಷಣ ವ್ಯಾಖ್ಯಾನಿಸಿದವರು ಬ್ರಿಟಿಷ್ ಲೇಖಕರು. ಹಾಗಾಗಿ ಇವರು ವ್ಯಾಖ್ಯಾನಿಸಲ್ಪಟ್ಟ ಅಂಶಗಳು ಸೀಮಿತ ದೃಷ್ಟಿಯಿಂದ ಮತ್ತು ಏಕಪರವಾಗಿ ಬಂದಂತವು ಎಂದಿದ್ದಾರೆ.

ಈ ಘಟನೆ ನಡೆದು ೫೦ ವರ್ಷಗಳು ಕಳೆದರೂ, ಭಾರತೀಯರಿಗೆ ಈ ಘಟನೆ ಬಗ್ಗೆ ಬರೆಯಲು ಅವಕಾಶ ಇರಲಿಲ್ಲ ಮತ್ತು ನಿಷೇಧವಿತ್ತು ಎನ್ನುವ ವಿಷಯವನ್ನು ವಿ.ಡಿ. ಸಾವರ್ಕರ್‌ರವರು '೧೮೫೭ ಭಾರತ ಸ್ವಾತಂತ್ರ್ಯ ಹೋರಾಟ' ಕೃತಿಯಲ್ಲಿ ವಿವರವಾಗಿ ಬರೆದಿದ್ದಾರೆ. ೧೮೫೭ರ ಹೋರಾಟವನ್ನು ಕೇವಲ ಸಿಪಾಯಿದಂಗೆ ಎಂದು ಹಗುರವಾಗಿ ಹೇಳುವಷ್ಟು ಈ ದಂಗೆ ಸಣ್ಣ ಪ್ರಮಾಣದ್ದಾಗಿರಲಿಲ್ಲ. ಈ ಕ್ರಾಂತಿಗೆ ಎಲ್ಲ ವರ್ಗದ ಜನರ ಬೆಂಬಲ ಮತ್ತು ಪಾಲ್ಗೊಳ್ಳುವಿಕೆಯಿಂದ ಈ ಹೋರಾಟ ರಾಷ್ಟ್ರೀಯ ಸ್ವರೂಪವನ್ನು ಪಡೆದಿತ್ತು ಎಂದು ಅಭಿಪ್ರಾಯ ಪಡುತ್ತಾರೆ.

ಈಶ್ವರಿ ಪ್ರಸಾದ್‌ರ ಪ್ರಕಾರ '೧೮೫೭ರ ಕ್ರಾಂತಿಯು ಪೂರ್ವಯೋಜಿತವಾಗಿತ್ತು. ಅನೇಕ ದಿನಗಳ ಹಿಂದಿನಿಂದಲೇ ವ್ಯವಸ್ಥಿತವಾಗಿ ರೂಪಿಸಿದ ಯೋಜನೆಯಾಗಿತ್ತು ಹಾಗೂ ಈ ಯೋಜನೆಯ ಜಾಲ ರಾಷ್ಟ್ರ ವ್ಯಾಪ್ತಿ ಹಬ್ಬಿತ್ತು. ಈ ಹೋರಾಟದಲ್ಲಿ ಕೇವಲ ಸಿಪಾಯಿಗಳು ಹೋರಾಟ ಮಾಡದೇ ರಾಷ್ಟ್ರಪ್ರೇಮಿಗಳು ರಾಷ್ಟ್ರವ್ಯಾಪ್ತಿ ಯೋಜನೆಯನ್ನು ರೂಪಿಸಿದ್ದರು. ಈ ಹೋರಾಟದ ವ್ಯಾಪ್ತಿ ವಿಶಾಲವಾಗಿತ್ತು ಎಂಬ ವಾದವನ್ನು ಮಂಡಿಸುತ್ತಾರೆ.[೬] ಅವರು ತಮ್ಮ ಅಭಿಪ್ರಾಯದ ಸಮರ್ಥನೆಗೆ ಆಗಿನ ಮುರಾದಾಬಾದ್‌ನ

ನ್ಯಾಯಾಧೀಶರಾಗಿದ್ದ ಜೆ.ಸಿ. ವಿಲ್ಸನ್‌ರವರ ವಾದವನ್ನು ಉದಾಹರಣೆಯನ್ನಾಗಿ ನೀಡುತ್ತಾರೆ. ವಿಲ್ಸನ್ ಅವರ ಹೇಳಿಕೆಯಂತೆ "ಬ್ರಿಟಿಷರ ವಿರುದ್ಧ ರಾಷ್ಟ್ರಾದ್ಯಂತ ಏಕಕಾಲಕ್ಕೆ ಬಂಡಾಯ ಏಳುವಂತೆ ಸಂಚು ರೂಪಿಸಲಾಗಿತ್ತು. ಅದಕ್ಕಾಗಿ ೩೧ನೇ ಮೇ ೧೮೫೭ರ ದಿನಾಂಕವನ್ನು ಪೂರ್ವಯೋಜಿತವಾಗಿ ಗೊತ್ತುಪಡಿಸಲಾಗಿತ್ತು. ಈ ಬಂಡಾಯದ ದಿನಾಂಕ ಮತ್ತು ರೂಪು-ರೇಷೆಗಳನ್ನು ಹಲವಾರು ಗುಪ್ತ-ಸಂಕೇತಗಳ (ಚಪಾತಿ ಮತ್ತು ಕಮಲದ ಹೂ) ಮೂಲಕ ರಾಷ್ಟ್ರದ ಮೂಲೆಮೂಲೆಗೂ ತಿಳಿಸುವ ಏರ್ಪಾಡಾಗಿತ್ತು." ಈ ಆಧಾರಗಳಿಂದ ಈಶ್ವರಿ ಪ್ರಸಾದ್ ಅವರು ಈ ಹೋರಾಟದ ಸ್ವರೂಪವನ್ನು ರಾಷ್ಟ್ರವ್ಯಾಪ್ತಿ ಎಂದು ಗುರುತಿಸುತ್ತಾರೆ.

ಎಸ್.ಎಸ್. ಸೇನ್, '೧೮೫೭' ಎಂಬ ತಮ್ಮ ಗ್ರಂಥದಲ್ಲಿ, ೧೮೫೭ರ ಘಟನೆಯನ್ನು ಕೇವಲ ಸಿಪಾಯಿ ದಂಗೆ ಎಂದು ಕರೆದರೆ ಅನರ್ಥವಾಗುತ್ತದೆ. ಸಿಪಾಯಿಗಳಿಂದ ಧರ್ಮಕ್ಕಾಗಿ ಆರಂಭವಾದ ಹೋರಾಟವು ಸ್ವಾತಂತ್ರ್ಯ ಸಂಗ್ರಾಮವಾಗಿ ಪರಿವರ್ತನೆಗೊಂಡಿತು. ಆಂಗ್ಲರ ಸರಕಾರವನ್ನು ಕಿತ್ತೊಗೆದು ಮೊಗಲ್ ಸಾಮ್ರಾಟನನ್ನು ದೆಹಲಿಯ ಚಕ್ರವರ್ತಿಯನ್ನಾಗಿಸುವುದು ಕ್ರಾಂತಿಕಾರಿಗಳ ಗುರಿಯಾಗಿತ್ತು[೧೮] ಎಂದಿದ್ದಾರೆ. ಸೇನ್ ಅವರ ಅಭಿಪ್ರಾಯದಲ್ಲಿ, ಬ್ರಿಟಿಷ್ ವಸಾಹತುಶಾಹಿ ಆಡಳಿತದಿಂದ ನೊಂದ ಎಲ್ಲ ವರ್ಗದ ಜನರು ಬದಲಾವಣೆಗೆ ಹಾತೊರೆಯುತ್ತಿದ್ದರು. ದಾಸ್ಯದಿಂದ ಬೇಸತ್ತ ಜನರಿಂದ ಒಂದಲ್ಲ ಒಂದು ದಿನ ಬಂಡಾಯ ಅನಿವಾರ್ಯವಾಗಿತ್ತು. ಅದಕ್ಕಾಗಿ ಯಾವುದೇ ಒಂದು ನೆವ ಬೇಕಾಗಿತ್ತು. ಆಗ ಸಿಪಾಯಿಗಳು ಬಳಸುವ ಬಂದೂಕಿನ ತೋಟಾಗಳಿಗೆ ಕೊಬ್ಬು ಸವರಿದ ಅಂಶವೇ ನೆಪವಾಗಿ ತಕ್ಷಣದ ದಂಗೆಗೆ ಕಾರಣವಾಯಿತು. ೧೮೫೭ರ ಹೋರಾಟದಲ್ಲಿ ರಾಷ್ಟ್ರೀಯತೆಯ ಮನೋಭಾವ ಬೆಳೆದಿರಲಿಲ್ಲ ಹಾಗೂ ಅನೇಕ ಭೂ-ಮಾಲೀಕರು ಸ್ವಾರ್ಥಿಗಳಾಗಿದ್ದರು, ಬ್ರಿಟಿಷರ ಪರವಾಗಿದ್ದರು ಎನ್ನುವ ಕೆಲವು ವಿದ್ವಾಂಸರ ಅಭಿಪ್ರಾಯಗಳಿಗೆ ಹೆಚ್ಚು ಒತ್ತು ಕೊಡಬೇಕಾಗಿಲ್ಲ ಎಂದಿದ್ದಾರೆ. ಕಾರಣ, ಕೆಲವೇ ಸ್ವಾರ್ಥಿಗಳನ್ನು ಹೊರತುಪಡಿಸಿದರೆ, ಹೋರಾಟದಲ್ಲಿ ಪಾಲ್ಗೊಂಡ ಎಲ್ಲಾ ವರ್ಗದ ಹೋರಾಟಗಾರರಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಸ್ಫೂರ್ತಿ ತುಂಬಿತ್ತು ಹಾಗೂ ಅವರೆಲ್ಲರ ಗುರಿ ಮತ್ತು ಉದ್ದೇಶ ಒಂದೇ ಆಗಿದ್ದು ಅದುವೇ ವಿದೇಶೀಯರನ್ನು ಓಡಿಸಿ ತಾಯ್ನಾಡನ್ನು ಮುಕ್ತಗೊಳಿಸುವುದಾಗಿತ್ತು ಎಂಬ ವಾದವನ್ನು ನೀಡುತ್ತಾರೆ.

ಅಶೋಕ್ ಮೆಹೆತ ತಮ್ಮ ಕೃತಿ, '೧೮೫೭ರ ಮಹಾಬಂಡಾಯ'ದಲ್ಲಿ ೧೮೫೭ರ ಘಟನೆಯನ್ನು ಸ್ವಾತಂತ್ರ್ಯ ಸಂಗ್ರಾಮ ಎಂದು ಒಪ್ಪಿಕೊಳ್ಳುತ್ತಾ ಕೇವಲ ಸೈನಿಕರೆ ಅಲ್ಲದೆ ಇತರ ಜನತೆಯ ಬೆಂಬಲದಿಂದ ಹಿಂದೂ-ಮುಸ್ಲಿಂರು ಒಗ್ಗೂಡಿ ಭಾರತದ ಸ್ವಾತಂತ್ರ್ಯಕ್ಕಾಗಿ ಮಾಡಿದ ಹೋರಾಟ ಎಂದಿದ್ದಾರೆ.[೧೯]

ಇವರು ತಮ್ಮ ಕೃತಿಯಲ್ಲಿ ಈ ಹೋರಾಟದ ಬಗ್ಗೆ ಚರ್ಚೆ ಮಾಡುತ್ತಾ, ಈ ಒಂದು ಪ್ರತಿಭಟನೆಯಲ್ಲಿ ಸಿಪಾಯಿಗಳೇ ಹೋರಾಟದ ಬೆನ್ನೆಲುಬಾಗಿದ್ದು, ಈ ಹೋರಾಟದ ಆಕ್ರಮಣ ಮತ್ತು ರಕ್ಷಣೆಯ ಎರಡೂ ಕಾರ್ಯಗಳನ್ನು ನಿರ್ವಹಿಸಿದರು. ಈ ಹೋರಾಟದಲ್ಲಿ ಸಿಪಾಯಿಗಳಲ್ಲದೇ ಸಾವಿರಾರು ಭಾರತೀಯರು ಭಾಗವಹಿಸಿದ್ದರು. ಹೋರಾಟದಲ್ಲಿ ಸಿಪಾಯಿಗಳಿಗಿಂತಲೂ ಹೆಚ್ಚು ನಾಗರಿಕರು ಸಾವು,

ನೋವುಗಳಿಗೆ ತುತ್ತಾದರು. ಪರಂಗಿಗಳ ಆಡಳಿತದಿಂದ ಭಾರತವನ್ನು ಮುಕ್ತಗೊಳಿಸಿ, ಸ್ವಾತಂತ್ರ್ಯ ಪಡೆಯುವುದು ಹಾಗೂ ಆ ಮೂಲಕ ಗುಲಾಮಗಿರಿಯನ್ನು ಕೊನೆಗೊಳಿಸುವ ಉದ್ದೇಶದಿಂದ ನಾಗರಿಕರು ಈ ಹೋರಾಟದಲ್ಲಿ ಪಾಲ್ಗೊಂಡಿದ್ದರು ಎಂದು ವಿವರಿಸುತ್ತಾರೆ.

ವಿ.ಡಿ. ಸಾವರ್ಕರ್, ೧೮೫೭ರ ಮಹಾಘಟನೆಯು ಎಲ್ಲ ವಿಧದಲ್ಲಿಯೂ, ಭಾರತೀಯರು ಆಂಗ್ಲರ ವಿರುದ್ಧ ಸ್ವಾತಂತ್ರ್ಯಕ್ಕಾಗಿ ನಡೆಸಿದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ ಎಂದಿದ್ದಾರೆ. ವಿ.ಡಿ. ಸಾವರ್ಕರ್‌ರವರು ಉಚ್ಚ ಶಿಕ್ಷಣಕ್ಕಾಗಿ ಲಂಡನ್ನಿನಲ್ಲಿದ್ದಾಗ, ೧೮೫೭ರ ಸ್ವಾತಂತ್ರ್ಯ ಸಂಗ್ರಾಮದ ಸುವರ್ಣೋತ್ಸವ ವರ್ಷ ಬಂತು. ಆಗ ಅವರು ಈ ಘಟನೆ ಬಗ್ಗೆ '೧೮೫೭ - ಭಾರತದ ಸ್ವಾತಂತ್ರ್ಯ ಸಂಗ್ರಾಮ' ಎಂಬ ಕೃತಿ ಯನ್ನು ರಚಿಸಿದರು. ಸಾವರ್ಕರ್‌ರವರು ಇಂಗ್ಲೆಂಡಿನಲ್ಲಿಯೇ ಇದ್ದುದರಿಂದ ಅಲ್ಲಿನ ಬ್ರಿಟಿಷರ ದಾಖಲೆ ಗಳನ್ನು, ಪತ್ರಗಳನ್ನು, ವರದಿಗಳನ್ನು ಗಮನಿಸಿ, ೧೮೫೭ರ ಘಟನೆಯು ಕೇವಲ ಸಿಪಾಯಿ ದಂಗೆ ಆಗಿರದೆ ಬ್ರಿಟಿಷ್ ಪ್ರಭುತ್ವದ ವಿರುದ್ಧ ಶೋಷಣೆಗೆ ಒಳಗಾದ, ಎಲ್ಲ ವರ್ಗದವರು ಸೇರಿ ಮಾಡಿದ ಹೋರಾಟವಾಗಿದ್ದು, ಮೊದಲ ಬಾರಿಗೆ ಭಾರತದ ಅನೇಕ ಜಾತಿ, ಧರ್ಮದ ಅರಸರು ಒಂದಾಗಿ ಹೋರಾಡಿದ್ದರಿಂದ ೧೮೫೭ರ ಹೋರಾಟವನ್ನು ಭಾರತದ ಸ್ವಾತಂತ್ರ್ಯ ಸಂಗ್ರಾಮ ಎಂದು ಕರೆಯಬೇಕು ಎಂದರು.[೨೦]

ಎಸ್.ಬಿ. ಚೌಧರಿ, '೧೮೫೭ರ ಘಟನೆಯು ಸಿಪಾಯಿಗಳಿಂದ ಆರಂಭವಾಯಿತಾದರೂ, ಬ್ರಿಟಿಷರ ಅಧಿಕಾರವನ್ನು ಧಿಕ್ಕರಿಸಲು ದೇಶದ ಗುಂಪುಗಳು ಕೂಡಿ ಕೈಗೊಂಡ ಪ್ರಥಮ ಪ್ರಯತ್ನ' ಎಂದಿದ್ದಾರೆ.

೧೮೫೭ರ ಹೋರಾಟವು ಭಾರತದ ಸ್ವಾತಂತ್ರ್ಯ ಹೋರಾಟ ಎಂಬ ರಾಷ್ಟ್ರೀಯವಾದಿಗಳ ನಿಲುವಿಗೆ ಕೆಲವು ಬ್ರಿಟಿಷ್ ವಿದ್ವಾಂಸರು, ಅಧಿಕಾರಿಗಳು ಬೆಂಬಲ ಸೂಚಿಸಿದರು.

೧೮೫೭ರ ದಂಗೆಯ ಸಮಯದಲ್ಲಿ ಭಾರತದ ಗವರ್ನರ್ ಜನರಲ್ ಆಗಿದ್ದ ಲಾರ್ಡ್ ಕ್ಯಾನಿಂಗ್ ಪ್ರಕಾರ, "ನಾವು ಎದುರಿಸಬೇಕಾಗಿ ಬಂದಿರುವ ಈ ಹೋರಾಟವು ಸಾಮಾನ್ಯವಾದ ಸ್ಥಳೀಯ ದಂಗೆಯಾಗಿರದೆ, ರಾಷ್ಟ್ರೀಯ ಸಮರದಂತೆ ಭಾಸವಾಗುತ್ತಿದೆ.[೨೧]

ಸರ್ ಗ್ರಾಂಡ್ ಜೇಕಬ್ ಪ್ರಕಾರ, "೧೮೫೭ರ ಹೋರಾಟದಲ್ಲಿ, ಬಂಡಾಯದ ಯೋಜನೆಗಳ, ಮುಖ್ಯ ಸಂದೇಶವನ್ನು ಬಹು ಎಚ್ಚರಿಕೆಯಿಂದ ರವಾನಿಸಿದ ಪರಿಯನ್ನು ಗಮನಿಸಿದರೆ, ಹೋರಾಟಗಾರರಲ್ಲಿ ನಿರ್ದಿಷ್ಟವಾದ ಗುರಿ ಇತ್ತು. ಆ ಗುರಿ, ಉದ್ದೇಶ ಎಂದರೆ, ವಿದೇಶಿ ದಬ್ಬಾಳಿಕೆಯಿಂದ ಬಿಡುಗಡೆ ಹೊಂದುವುದಾಗಿತ್ತು."[೨೨] ನ್ಯಾಯಮೂರ್ತಿ ಮೆಕಾರ್ಥೆ, ಅವರ ಪ್ರಕಾರ "ಮೀರತ್‌ನಲ್ಲಿ ಆರಂಭವಾದ ಸಿಪಾಯಿಗಳ ದಂಗೆಯು ವಿಸ್ತಾರಗೊಂಡು ಎಲ್ಲ ವರ್ಗದ ಜನರು ಭಾಗವಹಿಸುತ್ತಾ, ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳುತ್ತಾ, ಧಾರ್ಮಿಕ ಮತ್ತು ರಾಷ್ಟ್ರೀಯ ಹೋರಾಟದ ಸ್ವರೂಪವನ್ನು ಪಡೆಯಿತು.[೨೩] ಚಾರ್ಲ್ಸ್ ಬಾಲ್, ಜಿ.ಬಿ. ಕರ್ನಲ್, ಮ್ಯಾಲೆಸನ್ ಪ್ರಕಾರ, "ಸಿಪಾಯಿಗಳಿಂದ ಆರಂಭವಾದ ದಂಗೆ ಕ್ರಮೇಣ ರಾಷ್ಟ್ರೀಯ ಸಮರವಾಯಿತು. ಬ್ರಿಟಿಷ್ ಸಾಮ್ರಾಜ್ಯವಾದಿ ಇತಿಹಾಸದಲ್ಲಿಯೇ ೧೮೫೭ರ ಹೋರಾಟವು ಸಿಪಾಯಿ ದಂಗೆ ಆಗಿರದೇ ಇನ್ನೂ ಉನ್ನತ ಮಟ್ಟದಲ್ಲಿತ್ತು."[೨೪] ಎಡ್ವರ್ಡ್ ಥಾಮ್ಸನ್ ಪ್ರಕಾರ, "೧೮೫೭ರ ಮಹಾಘಟನೆಯು ನಿಜವಾದ ಸ್ವಾತಂತ್ರ್ಯ ಸಮರ" ಎಂದಿದ್ದಾರೆ.

## ರಾಷ್ಟ್ರೀಯವಾದಿಗಳ ನಿಲುವಿನ ವಿಶ್ಲೇಷಣೆ

ಭಾರತದ ವಿದ್ವಾಂಸರು ೧೮೫೭ರ ಘಟನೆಯನ್ನು ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ ಎಂದು ಅರ್ಥೈಸಿದ್ದಾರೆ. ಭಾರತದ ಇತಿಹಾಸದಲ್ಲಿ ೧೮೫೭ರ ಘಟನೆ ಒಂದು ಮೈಲಿಗಲ್ಲು. ಇಲ್ಲಿಗೆ ಚಾರಿತ್ರಿಕ ಬೆಳವಣಿಗೆಯ ಒಂದು ಹಂತ ಅಂತ್ಯಗೊಂಡು, ಹೊಸದೊಂದು ಹಂತ ಆರಂಭವಾಗುತ್ತದೆ. ರಾಷ್ಟ್ರೀಯವಾದಿಗಳು ೧೮೫೭ರ ಘಟನೆಯನ್ನು ಸ್ವಾತಂತ್ರ್ಯ ಸಂಗ್ರಾಮ ಎಂದು ಕರೆದಿರುವುದು ಮತ್ತು ಹಾಗೆ ಕರೆಯಲು ಅವರು ನೀಡಿರುವ ಆಧಾರಗಳನ್ನು ಗಮನಿಸಿದರೆ, ಅವರ ನಿಲುವಿನ ಮೇಲೆ ಹೆಚ್ಚಿನ ಅಧ್ಯಯನ ಅವಶ್ಯಕವೇನೋ ಅನಿಸುತ್ತದೆ.

೧೮೫೭ರ ಘಟನೆ ಕೇವಲ ಸಿಪಾಯಿ ದಂಗೆಯೇ ಆಗಿದ್ದರೆ, ೧೮೫೮ರಲ್ಲಿ ಮಹಾರಾಣಿಯ ಘೋಷಣೆಯ ಅವಶ್ಯಕತೆ ಏನಿತ್ತು ಹಾಗೂ ಈ ಘೋಷಣೆಯಂತೆ ಕಂಪನಿಯ ಆಡಳಿತ ಕೊನೆಗೊಳಿಸಿ, ಭಾರತದ ಪ್ರದೇಶಗಳನ್ನು ಚಕ್ರವರ್ತಿಗೆ ವರ್ಗಾಯಿಸಿದ್ದು ಏತಕ್ಕೆ ಹಾಗೂ ಬ್ರಿಟಿಷರು ತಮ್ಮ ಆಕ್ರಮಣ ನೀತಿ ಕೈಬಿಟ್ಟು, ದೇಶೀಯ ಸಂಸ್ಥಾನಗಳೊಡನೆ ಮೃದು ಧೋರಣೆ ಅನುಸರಿಸುದುದರ ಹಿಂದಿನ ಉದ್ದೇಶವಾದರೂ ಏನು ಎಂಬ ಮಹತ್ವದ ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ. ಹಾಗಾಗಿ ಈ ಹೋರಾಟ ಕೇವಲ ದಂಗೆ ಅಲ್ಲ ಎನ್ನುವುದನ್ನು ಸ್ಪಷ್ಟಪಡಿಸುತ್ತದೆ.

೧೮೫೭ರ ಹೋರಾಟದ ಸಮಯದಲ್ಲಿ ಭಾರತದ ಗವರ್ನರ್ ಜನರಲ್ ಆಗಿದ್ದ ಲಾರ್ಡ್ ಕ್ಯಾನಿಂಗ್ ಅವರು ಸಹ ಈ ಹೋರಾಟವು ಕೇವಲ ಸ್ಥಳೀಯ ಸಂಚಿನ ಬಂಡಾಯವಾಗಿರದೆ, ರಾಷ್ಟ್ರೀಯ ಹೋರಾಟವಾಗಿತ್ತೆಂದೂ, ಜೊತೆಗೆ ಈ ಹೋರಾಟದ ಅವಧಿ, ವ್ಯಾಪಕತೆ, ವೆಚ್ಚವಾದ ಹಣ ಮತ್ತು ಇದರ ಇತರ ಲಕ್ಷಣಗಳನ್ನು ಗಮನಿಸಿದರೆ ಈ ಮೊದಲು ನಡೆದ ಹೋರಾಟಗಳಿಗಿಂತಲೂ ಭಿನ್ನವಾಗಿತ್ತು ಎಂದು ಅಭಿಪ್ರಾಯ ಪಟ್ಟಿದ್ದಾರೆ. ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವೆಂದರೆ ಈ ಕ್ರಾಂತಿಯಲ್ಲಿ ಕೇವಲ ಸೈನಿಕರು, ಮೇಲ್ವರ್ಗದವರು, ಸರದಾರರು ಮಾತ್ರ ಭಾಗವಹಿಸದೇ ಎಲ್ಲ ಮತ, ಧರ್ಮ, ಮಹಿಳೆಯರು ಪಾಲ್ಗೊಂಡಿದ್ದನ್ನು ನೋಡಿದರೆ ಇದರ ಸ್ವರೂಪ ವಸಾಹತುಶಾಹಿ ಮತ್ತು ಸಾಮ್ರಾಜ್ಯಶಾಹಿಯ ದಬ್ಬಾಳಿಕೆಯ ವಿರುದ್ಧದ ಪ್ರತಿಕ್ರಿಯೆ ಆಗಿತ್ತು ಎಂದು ಹೇಳಬಹುದು. ಈ ಬಂಡಾಯ ಸಿಪಾಯಿಗಳಿಂದ ಆರಂಭವಾಗಿದ್ದರಿಂದ ಇದನ್ನು ಆರಂಭದಲ್ಲಿ ಸಿಪಾಯಿ ದಂಗೆ ಎಂದು ಕರೆಯಲಾಯಿತು. ೧೮೫೭ರ ಘಟನೆಯ ನಂತರ, ದೇಶೀಯ ಸಂಸ್ಥಾನಗಳೆಲ್ಲರಲ್ಲಿ ಬ್ರಿಟಿಷರೇ ನಮ್ಮ ವಿರೋಧಿಗಳು, ಅವರನ್ನು ದೇಶದಿಂದ ಹೊಡೆದೋಡಿಸಬೇಕು ಎಂಬ ಭಾವನೆ ಎಲ್ಲರಲ್ಲೂ ಮೊಳಕೆಯೊಡೆಯಲು ಕಾರಣವಾಯಿತು. ಸ್ವಹಿತಾಸಕ್ತಿ ಇರಲಿ ಅಥವಾ ಸ್ವಾರ್ಥವಿರಲಿ, ಯಾವುದೇ ಒಂದು ಕಾರಣದಿಂದ ಬ್ರಿಟಿಷರಿಂದ ನೋವುಂಡ ಎಲ್ಲ ಸಂಸ್ಥಾನಗಳು, ಏಕಮುಖವಾಗಿ ಚಿಂತಿಸುವ ಪ್ರಕ್ರಿಯೆಯಲ್ಲಿ ತೊಡಗಿದರು ಎಂದು ಹೇಳಬಹುದು.

ಆದರೆ ಇದೇ ಸಮಯದಲ್ಲಿ ಬ್ರಿಟಿಷರ ನಿಲುವುಗಳು ಹಾಗೂ ಇತರ ದಾಖಲೆಗಳನ್ನು ಆಧರಿಸಿ, ರಾಷ್ಟ್ರೀಯವಾದಿಗಳ ನಿಲುವುಗಳೊಂದಿಗೆ ತುಲನೆ ಮಾಡಿ ನೋಡಿದಾಗ, ೧೮೫೭ರ ಘಟನೆಯನ್ನು ರಾಷ್ಟ್ರೀಯ ಸ್ವಾತಂತ್ರ್ಯ ಸಮರ ಎನ್ನುವುದು ಅಷ್ಟೊಂದು ಸಮಂಜಸವಲ್ಲವೇನೋ ಎಂದು ಅನಿಸುತ್ತದೆ.

ಏಕೆಂದರೆ ಆ ಸಂದರ್ಭದಲ್ಲಿ ರಾಷ್ಟ್ರೀಯ ಎನ್ನುವ ಪರಿಕಲ್ಪನೆ ಅಷ್ಟೊಂದು ಗಾಢವಾಗಿ ಪ್ರಭಾವ ಬೀರಿರಲಿಲ್ಲ. ೧೮೫೭ರಲ್ಲಿ ಭಾರತವು ರಾಜಕೀಯವಾಗಿ ಒಂದು ರಾಷ್ಟ್ರವೇ ಆಗಿರಲಿಲ್ಲ ಎನ್ನುವುದನ್ನು ಈ ಸಂದರ್ಭದಲ್ಲಿ ಗಮನದಲ್ಲಿಟ್ಟುಕೊಳ್ಳಬೇಕಾಗುತ್ತದೆ. ಜೊತೆಗೆ ಈ ಹೋರಾಟದಲ್ಲಿ ಪ್ರಮುಖ ನಾಯಕತ್ವದ ಕೊರತೆ, ಹೋರಾಟಗಾರರಲ್ಲಿ ಪರಸ್ಪರ ಹೊಂದಾಣಿಕೆ, ಸಂಘಟನಾ ಶಕ್ತಿ, ನಿರ್ದಿಷ್ಟ ಗುರಿ, ಉದ್ದೇಶಗಳು ಇಲ್ಲದೆ ಇದ್ದುದನ್ನು ಸಹ ಗಮನಿಸಬೇಕಾಗುತ್ತದೆ. ಈ ಎಲ್ಲ ಅಂಶಗಳನ್ನು ಗಮನಿಸಿ, ೧೮೫೭ರ ಘಟನೆಯು, ಸ್ವಾತಂತ್ರ್ಯ ಸಂಗ್ರಾಮದ ಮೊದಲ ಹೆಜ್ಜೆ ಎಂದು ಹೇಳಬಹುದಾಗಿದೆ.

**ಮಾರ್ಕ್ಸ್‌ವಾದಿ ನಿಲುವು**

೧೮೫೭ರ ಹೋರಾಟದ ಬಗ್ಗೆ ಮಾರ್ಕ್ಸ್‌ವಾದಿಗಳು ತಮ್ಮದೇ ಆದ ನಿಲುವು ಹೊಂದಿದ್ದು, ಅವರ ಪ್ರಕಾರ, ೧೮೫೭ರ ಹೋರಾಟವು ಸೈನಿಕರು, ರೈತರು ಮತ್ತು ಪ್ರಜಾಪ್ರಭುತ್ವವಾದಿಗಳ ಸಂಯುಕ್ತ ಹೋರಾಟವಾಗಿತ್ತು. ಬ್ರಿಟಿಷರ ವಿರುದ್ಧ ನಾನಾ ಕಾರಣಗಳಿಂದ ಅಸಮಾಧಾನ ಹೊಂದಿದ್ದ ಭಾರತದ ವಿವಿಧ ವರ್ಗದ ಜನರು ತಮ್ಮ ಸಂಕಷ್ಟಗಳ ನಿವಾರಣೆಗಾಗಿ ಭಾರತದ ವಿವಿಧ ಸ್ಥಳಗಳಲ್ಲಿ ಏಕಕಾಲಕ್ಕೆ ತತ್‌ಕ್ಷಣ ದಂಗೆ ಎದ್ದರು. ವಿದೇಶಿಯರು ಮತ್ತು ಊಳಿಗಮಾನ್ಯ ಪಾಳೆಗಾರಿಕೆಯ ವಿರುದ್ಧ ಮಾಡಿದ ಈ ಹೋರಾಟದಲ್ಲಿ, ಕ್ರಾಂತಿಕಾರಿಗಳು ಯಾವುದೇ ಸೈದ್ಧಾಂತಿಕ ಮಾರ್ಗದರ್ಶಿ ಸೂತ್ರ ಹೊಂದಿರದಿದ್ದರಿಂದ ಹಾಗೂ ಜಮೀನುದಾರಿಗಳು ಮಾಡಿದ ವಿಶ್ವಾಸಘಾತಕತೆ ಮತ್ತು ರಾಷ್ಟ್ರೀಯತೆಯ ಕೊರತೆಯಿಂದ ವಿಫಲವಾಯಿತು ಎಂದಿದ್ದಾರೆ.

ಕಾರ್ಲ್‌ಮಾರ್ಕ್ಸ್ ಮತ್ತು ಫೆಡರಿಕ್ ಏಂಗೆಲ್ಸ್‌ರು ಭಾರತದಲ್ಲಿ ನಡೆದ ೧೮೫೭ರ ಹೋರಾಟವನ್ನು ತಮ್ಮದೇ ಆದ ದೃಷ್ಟಿಕೋನದಲ್ಲಿ ವಿವರಿಸಿದ್ದಾರೆ. ೧೮೫೦ರ ಆರಂಭಿಕ ವರ್ಷಗಳಿಂದಲೂ ಕಾರ್ಲ್ಸ್‌ಮಾರ್ಕ್ಸ್ ಮತ್ತು ಏಂಗೆಲ್ಸ್‌ರು ಬಂಡವಾಳಶಾಹಿ ದೇಶಗಳ ವಸಾಹತು ನೀತಿಯಲ್ಲಿ ಮರ್ಧಿತ ರಾಷ್ಟ್ರಗಳ ವಿಮೋಚನಾ ಹೋರಾಟಗಳಲ್ಲಿ ಬಹು ಆಸಕ್ತಿಯನ್ನು ತೋರಿಸಿದ್ದರು. ಹಾಗಾಗಿ ೧೮೫೭ಕ್ಕಿಂತ ಮುಂಚೆಯೇ ಕಾರ್ಲ್‌ಮಾರ್ಕ್ಸ್ ಮತ್ತು ಫೆಡರಿಕ್ ಏಂಗೆಲ್ಸ್ ಹಿಂದೂಸ್ಥಾನವನ್ನು ಕುರಿತು ಹಲವಾರು ಲೇಖನಗಳನ್ನು ಪ್ರಕಟಿಸಿದ್ದರು. ಅವುಗಳಲ್ಲಿ ಭಾರತದಲ್ಲಿ ಬ್ರಿಟಿಷರ ವಿರುದ್ಧ ಪ್ರತಿರೋಧ ಉದ್ಭವವಾಗಬಹುದೆಂಬ ಮುನ್ಸೂಚನೆ ನೀಡಿದ್ದರು. ಬಂಡವಾಳಶಾಹಿ, ದರೋಡೆಕೋರ, ವಸಾಹತುನೀತಿಗೆ ಈಡಾಗಿದ್ದ ಭಾರತವು ಶ್ರಮಜೀವಿ ವರ್ಗದ ವಿಮೋಚನಾ ಹೋರಾಟದ ದೃಷ್ಟಿಕೋನದಿಂದ, ಮಾರ್ಕ್ಸ್ ಮತ್ತು ಏಂಗೆಲ್ಸ್‌ರ ಗಮನವನ್ನು ಸೆಳೆದಿದ್ದಿತು. ಹಾಗಾಗಿ ೧೮೫೭ರ ಹೋರಾಟದ ಎಲ್ಲ ಪ್ರಧಾನ ಘಟನೆಗಳಿಗೆ ಸಂಬಂಧಿಸಿದಂತೆ ತಕ್ಷಣವೇ ಪ್ರತಿಕ್ರಿಯೆ ವ್ಯಕ್ತಪಡಿಸಿದರು.[೨೫]

ಕಾರ್ಲ್‌ಮಾರ್ಕ್ಸ್ ಮತ್ತು ಏಂಗೆಲ್ಸ್ ೧೮೫೭ರ ಹೋರಾಟವನ್ನು "ಒಂದು ರಾಷ್ಟ್ರೀಯ ಬಂಡಾಯವೆಂದು, ಬ್ರಿಟಿಷ್ ಆಡಳಿತದ ವಿರುದ್ಧ ಜನಸಾಮಾನ್ಯರ ಕ್ರಾಂತಿ ಎಂದೂ, ಭಾರತದ ವಿಶಾಲ ವಿಭಾಗಗಳ ಜನರು, ಅದರಲ್ಲೂ ಹೆಚ್ಚಾಗಿ ರೈತರು ಬಂಡಾಯದಲ್ಲಿ ಪ್ರತ್ಯಕ್ಷವಾಗಿಯೋ, ಪರೋಕ್ಷವಾಗಿಯೋ ಭಾಗವಹಿಸಿದ್ದರು" ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.[೨೬] ಹಾಗೆಯೇ ೧೮೫೭ರ

ಹೋರಾಟವನ್ನು ಸಿಪಾಯಿಗಳು ಆರಂಭಿಸಿದರಾದರೂ, ಅವರು ಶಕ್ತಿಯ ಸಾಧನವಷ್ಟೇ ಆಗಿದ್ದರು. ಈ ಬಂಡಾಯದ ಹಿಂದಿನ ಪ್ರಧಾನ ಪ್ರೇರಕಶಕ್ತಿ ಎಂದರೆ ಭಾರತೀಯ ಜನರು. ಅವರು ಅಸಹನೀಯ ವಸಹತು ದಬ್ಬಾಳಿಕೆಯ ವಿರುದ್ಧ ಹೋರಾಟದಲ್ಲಿ ಒಂದುಗೂಡಿದ್ದರು. ಬ್ರಿಟಿಷ್ ಆಳುವ ವರ್ಗದವರು ಈ ಬಂಡಾಯವನ್ನು ಶಸ್ತ್ರಸಜ್ಜಿತರಾದ ಸೈನಿಕರ ದಂಗೆ ಎಂದು ಚಿತ್ರಿಸುತ್ತಾ, ಆ ಬಂಡಾಯದಲ್ಲಿ ಭಾರತದ ವಿಶಾಲ ಜನಸ್ತೋಮಗಳು ಭಾಗಿಯಾಗಿದ್ದ ವಿಚಾರವನ್ನು ಮುಚ್ಚಿಡಲು ಯತ್ನಿಸಿದರು ಹಾಗೂ ಬ್ರಿಟಿಷರು 'ದಂಗೆ' ಎಂದು ಕರೆದ ಈ ಹೋರಾಟವನ್ನು, ಕಾರ್ಲ್‌ಮಾರ್ಕ್ಸ್ ಮತ್ತು ಏಂಗೆಲ್ಸ್‌ರು ತಪ್ಪು ಪ್ರತಿಪಾದನೆ ಎಂದು ಅಲ್ಲಗೆಳೆದರು.

ಕೆ.ಎಂ. ಫಣಿಕ್ಕರ್ ಅವರ ಪ್ರಕಾರ, 'ಯಾವುದೇ ರಾಷ್ಟ್ರೀಯ ಚಳುವಳಿಯ ಉದ್ದೇಶ, ಸ್ವಾತಂತ್ರ್ಯ ಸಂಪಾದನೆ. ಅದೇ ರೀತಿ ೧೮೫೭ರ ಚಳುವಳಿಯ ಉದ್ದೇಶವು ಆಂಗ್ಲರ ಬಂಧನದಿಂದ ಭಾರತವನ್ನು ವಿಮೋಚನೆಗೊಳಿಸುವುದಾಗಿತ್ತು.[೨೭]

ಮಾರ್ಕ್ಸ್‌ವಾದಿ ಸಿದ್ಧಾಂತಿ, ನಂಬೂದ್ರಿಪಾದ್, ಎಪ್ಪತ್ತರ ದಶಕದಲ್ಲಿ ತಾವು ರಚಿಸಿದ 'ಭಾರತದ ಸ್ವಾತಂತ್ರ್ಯ ಸಂಗ್ರಾಮದ ಚರಿತ್ರೆ'ಯಲ್ಲಿ ಇದನ್ನು ಸ್ವಾತಂತ್ರ್ಯ ಸಂಗ್ರಾಮವೆಂದು ಹೇಳಲಿಲ್ಲ. ಅವರು ತಮ್ಮ ಗ್ರಂಥದಲ್ಲಿ ಈ ದಂಗೆ ಮತ್ತು ಅದರ ಸುತ್ತ ಭುಗಿಲೆದ್ದ ವಿಪ್ಲವದ ಬಗ್ಗೆ ಹೇಳುತ್ತಾ, "೧೮೫೭ರ ಹೋರಾಟವು ಸಿಪಾಯಿಗಳಿಂದ ಆರಂಭವಾಗಿದ್ದರಿಂದಾಗಿ ಅದು ಸಿಪಾಯಿ ದಂಗೆ. ಸಿಪಾಯಿಗಳು ದಂಗೆ ಏಳುವುದಕ್ಕೆ ಸ್ವಲ್ಪ ಮುಂಚಿನಿಂದಲೇ, ಗ್ರಾಮಾಂತರ ಪ್ರದೇಶಗಳಾದ ಮಧ್ಯಭಾರತ, ಮಧ್ಯಪೂರ್ವ ಭಾರತದಲ್ಲಿ ಸಾಧಾರಣ ರೈತಾಪಿ ಬಡಜನರು ಹಲವು ರೀತಿಯಲ್ಲಿ ಸಿಡಿದೆದ್ದರು. ಅದು ಅಖಿಲ ಭಾರತದ ವ್ಯಾಪ್ತಿಯದಲ್ಲ; ನಡೆದದ್ದು ಕೇವಲ ಸೀಮಿತ ಪ್ರದೇಶಗಳಲ್ಲಿ, ಭಾರತದವರೇ ಆದ ಇತರ ರಾಜ್ಯಗಳ ರಾಜರೂ, ಸರಕಾರಗಳು ಅಲ್ಲಿಯ ಜನರು, ಸೈನಿಕರು ಈ ದಂಗೆ ಹತ್ತಿಕ್ಕಲು ಪರಂಗಿಯವರ ಪರವಾಗಿ ನಿಂತರು. ಆದ್ದರಿಂದ ಇದು ಪ್ರಥಮ ಸ್ವಾತಂತ್ರ್ಯ ಸಂಗ್ರಾಮವೆಂದೆನಿಸಿಕೊಳ್ಳುವುದಿಲ್ಲ ಎಂದು ಅಭಿಪ್ರಾಯ ಪಟ್ಟಿದ್ದಾರೆ.[೨೮]

**ಸಬಾಲ್ಟರ್ನ್ ನಿಲುವು**

ಸಬಾಲ್ಟರ್ನ್ ಎಂದರೆ 'ಕೆಳಸ್ತರದ' ಎಂದರ್ಥ. ಆ್ಯಂಟನಿ ಗ್ರಾಂಸಿಯು 'ಯಜಮಾನಿಕೆ'ಯ (ಹೆಜಿಮನಿ) ವಿವಿಧ ಮಜಲುಗಳ ಬಗ್ಗೆ, ಆಳ್ವಿಕೆಯ ಅಧಿಕಾರದಿಂದ ಶೋಷಣೆಗೆ ಒಳಪಟ್ಟ ಕೆಳಸ್ತರದ ವರ್ಗಗಳನ್ನು ವಿಶ್ಲೇಷಿಸುವ ಸಂದರ್ಭದಲ್ಲಿ 'ಸಬಾಲ್ಟರ್ನ್' ಅಧ್ಯಯನವನ್ನು ಪ್ರಚಾರಪಡಿಸಿದ. 'ಹೆಜಿಮನಿ' ಎನ್ನುವ ಶಬ್ದವನ್ನು ಮಾರ್ಕ್ಸಿಸ್ಟರು ೧೯ನೆಯ ಶತಮಾನದಿಂದಲೂ ಬಳಸುತ್ತಿದ್ದರು. ಇಟಲಿಯ ಮಾರ್ಕ್ಸಿಸ್ಟನಾದ ಆ್ಯಂಟೋನಿಯೊ ಗ್ರಾಂಸಿಯು ಆ ಪದಕ್ಕೆ ತನ್ನದೇ ಆದ ವಿವರಣೆಗಳನ್ನು ೧೯೨೦ ಮತ್ತು ೧೯೩೦ರ ದಶಕದ ಮುಸಲೋನಿಯ ಸರ್ವಾಧಿಕಾರಿ ರಾಜ್ಯದ ಶೋಷಣೆಗಳ ಹಿನ್ನೆಲೆಯಲ್ಲಿ ನೀಡಿದ್ದಾನೆ. 'ಪ್ರಬಲ ವರ್ಗಗಳು ಕೆಳವರ್ಗಗಳನ್ನು ಒತ್ತಾಯಪೂರ್ವಕವಾಗಿ', ಶೋಷಣೆ ಮಾಡುವುದರ ಜೊತೆ ಜೊತೆಗೆ ಮನ ಒಲಿಸಿಯೇ ಶೋಷಣೆ ಮಾಡುವ ಬಗೆಗಳನ್ನು 'ಹೆಜಿಮನಿ'ಯನ್ನು ವಿವರಿಸುವ

ಮೂಲಕ ತಿಳಿಸಿದ್ದಾನೆ.[೨೯] ಅಧಿಕಾರ ವರ್ಗವು ತನ್ನ ಹಿತಾಸಕ್ತಿಗಳನ್ನು ಸಮಾಜದಲ್ಲಿ ಯಾವ್ಯಾವ ರೀತಿಯಲ್ಲಿ ಕಾಪಾಡಿಕೊಳ್ಳುತ್ತವೆ ಎಂಬುದನ್ನು 'ಹೆಜಿಮನಿ' ಮೂಲಕ ಚರ್ಚಿಸುತ್ತಾ, ಅಧಿಕಾರ ವರ್ಗವು ಉತ್ಪಾದನೆಯ ಮೇಲೆ ಒಡೆತನವನ್ನು ಹೊಂದುವುದರೊಂದಿಗೆ, ರಾಜ್ಯದ ಶಿಕ್ಷಣ ಮತ್ತು ಮಾಧ್ಯಮಗಳನ್ನು ಉಪಯೋಗಿಸಿ ಕೊಳ್ಳುತ್ತಾ, 'ಸಾಮಾನ್ಯ ಜನರ ಆಶಯವನ್ನು ಪ್ರತಿನಿಧಿಸುತ್ತಿದ್ದೇವೆ ಎಂಬ ಭ್ರಾಂತಿ ಹುಟ್ಟಿಸಿ ತಮ್ಮ ಹಿತಾಸಕ್ತಿಯನ್ನು ಕಾಪಾಡಿಕೊಳ್ಳುತ್ತವೆ ಎಂದು ತಿಳಿಸುತ್ತಾನೆ.

ಅಧಿಕಾರದಿಂದ ದೂರ ತಳ್ಳಲ್ಪಟ್ಟ ರೈತ, ಕಾರ್ಮಿಕ ಮತ್ತಿತರ ಗುಂಪುಗಳು ಸಬಾಲ್ಟರ್ನ್ ವರ್ಗದಲ್ಲಿ ಬರುತ್ತವೆ. ಚರಿತ್ರೆ ಎಂದರೆ ಅಧಿಕಾರದಲ್ಲಿರುವವರ ಚರಿತ್ರೆ ಅಥವಾ ರಾಜ್ಯಗಳ ಚರಿತ್ರೆ, ಬಲಾಢ್ಯ ವರ್ಗಗಳ ಚರಿತ್ರೆಗೆ ಪ್ರಾಮುಖ್ಯತೆ ನೀಡದೆ, ಸಬಾಲ್ಟರ್ನ್ ವರ್ಗಗಳ ಚರಿತ್ರೆಯ ರಚನೆಗೆ ಪ್ರಾಮುಖ್ಯತೆ ನೀಡಬೇಕಾಗಿದೆ ಮತ್ತು ಸಬಾಲ್ಟರ್ನ್ ವರ್ಗಗಳ ಅಧ್ಯಯನ ಮಾಡುವ ವಿಧಾನವನ್ನು ಗ್ರಾಂಸಿಯು 'ಸೆಲೆಕ್ಷನ್ ಫ್ರಂ ದ ಪ್ರಿಸನ್ ನೋಟ್‌ಬುಕ್ಸ್'ನಲ್ಲಿ ವಿವರಿಸಿದ್ದಾನೆ.

೧೯೮೦ರ ದಶಕದ ಆರಂಭದಲ್ಲಿ ಪ್ರಥಮ ಬಾರಿಗೆ ಭಾರತದಲ್ಲಿ ಭಿನ್ನಮತೀಯ ಮಾರ್ಕ್ಸಿಸ್ಟರು ಸಬಾಲ್ಟರ್ನ್ ಸಿದ್ಧಾಂತಗಳಿಂದ ಪ್ರಭಾವಿತರಾದರು. ಸಬಾಲ್ಟರ್ನ್ ಅಧ್ಯಯನವನ್ನು 'ತಳದಿಂದ ಚರಿತ್ರೆ ಅಧ್ಯಯನ' ಎಂದು ವಿಶ್ಲೇಷಿಸುತ್ತಾ, ಭಾರತೀಯ ರಾಷ್ಟ್ರೀಯತೆ ಎಂದರೆ ಸ್ಥಳೀಯ ಪ್ರಬಲ ವರ್ಗಗಳು ಮುಖ್ಯವಾಗುವುದಿಲ್ಲ, ಬದಲಾಗಿ ಸಬಾಲ್ಟರ್ನ್ ವರ್ಗಗಳು ಮತ್ತು ಜನಸಾಮಾನ್ಯ ಸಮುದಾಯಗಳ ಪಾತ್ರ ಬಹಳ ಮುಖ್ಯವಾಗುತ್ತದೆ.

೧೮೫೭ರ ಘಟನೆಯಲ್ಲಿ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಭಾಗವಹಿಸಿದ ಎಷ್ಟೋ ಸಾಮಾನ್ಯ ವರ್ಗದ ಜನರು, ಕೆಳಸ್ತರದ ಜನರು, ಇತಿಹಾಸದ ಪುಟಗಳಲ್ಲಿ ಪ್ರಮುಖ ಸ್ಥಾನ ಪಡೆದಿಲ್ಲ. ಕೇವಲ ಬೆರಳೆಣಿಕೆಯ ನಾಯಕರನ್ನು ಮಾತ್ರ ೧೮೫೭ರ ಘಟನೆಯಲ್ಲಿ ಹೋರಾಡಿದ ವೀರರು, ಹುತಾತ್ಮರು ಎಂದು ನಾವಿಂದು ಓದುತ್ತಿದ್ದೇವೆ. ಸಬಾಲ್ಟರ್ನ್ ಚಿಂತಕರು ೧೮೫೭ರ ಹೋರಾಟವು ಜನಸಾಮಾನ್ಯರ ಹಾಗೂ ಕೆಳವರ್ಗದವರ ಹೋರಾಟವೆಂಬ ನಿಲುವನ್ನು ಹೊಂದಿದ್ದು, ಹೋರಾಟವನ್ನು ಅಖಂಡವಾಗಿ ನೋಡುವ ಬದಲು ಬಿಡಿ ಬಿಡಿಯಾಗಿ ನೋಡುವ ಹೊಸ ಪ್ರಯೋಗ ಹಾಗೂ ಪ್ರಯತ್ನವನ್ನು ಮಾಡಿದ್ದಾರೆ. ಆದಿವಾಸಿಗಳು, ಬುಡಕಟ್ಟು ಜನರು, ರೈತರು, ಮಹಿಳೆಯರು ಹಾಗೂ ಈ ರೀತಿಯ ಅಲಕ್ಷಿತ ವರ್ಗಕ್ಕೆ ತಳ್ಳಲ್ಪಟ್ಟ ಜನಸಮುದಾಯಗಳು ಬ್ರಿಟಿಷರ ವಿರುದ್ಧ ನಡೆಸಿದ ಹೋರಾಟದ ಅಧ್ಯಯನ ಕೈಗೊಂಡಾಗ ಮಾತ್ರ ಸ್ವಾತಂತ್ರ್ಯ ಹೋರಾಟದ ಇನ್ನೊಂದು ಮುಖದ ಪರಿಚಯವಾಗಲು ಸಾಧ್ಯ. ಈ ನಿಟ್ಟಿನಲ್ಲಿ ಸಬಾಲ್ಟರ್ನ್ ಚಿಂತಕರು ನಡೆಸುತ್ತಿರುವ ಅಧ್ಯಯನ ಚರಿತ್ರೆ ಬರವಣಿಗೆಗೆ ಹೊಸ ದಿಕ್ಕನ್ನು ಸೂಚಿಸಿದೆ.

ಕೆಲವು ನಾಗರಿಕರು ನೇರವಾಗಿ ಬಂಡಾಯಗಾರರೊಂದಿಗೆ ಪಾಲ್ಗೊಳ್ಳದಿದ್ದರೂ, ಬ್ರಿಟಿಷರಿಗೆ ಅಸಹಕಾರ ತೋರುವುದರ ಮೂಲಕ ರಾಷ್ಟ್ರಪ್ರೇಮವನ್ನು ಮೆರೆದಿದ್ದಾರೆ. ಉದಾಹರಣೆಗೆ, ಆಗಿನ ಬ್ರಿಟಿಷ್ ಮಿಲಿಟರಿ ಅಧಿಕಾರಿಯಾಗಿದ್ದ ಜನರಲ್ ಹ್ಯಾಲ್‌ಲಾಕ್ ತನ್ನ ಸೈನಿಕರನ್ನು ನದಿ ದಾಟಿಸಲು ದೋಣಿಗಳು ಹಾಗೂ ದೋಣಿ ನಡೆಸುವ ಬೆಸ್ತರನ್ನು ಕೇಳಿಕೊಂಡಾಗ, ಅವರು ಸಹಕಾರ ನೀಡದೇ ಅಸಹಕಾರ

ತೋರಿದರು. ಅದೇ ರೀತಿ ಕಾನ್ಪುರ ಮತ್ತು ಇತರ ಸ್ಥಳಗಳಲ್ಲಿ ಬ್ರಿಟಿಷರಿಂದ ಕೂಲಿಕಾರರ ಸೇವೆಗೆ ಒತ್ತಾಯ ಬಂದಾಗ ಕೂಲಿಕಾರರು ಬ್ರಿಟಿಷರ ಸೇವೆ ಮಾಡಲು ಸಹಕಾರ ಕೊಡದೆ ರಾತ್ರಿ ವೇಳೆ ತಪ್ಪಿಸಿ ಕೊಳ್ಳುತ್ತಿದ್ದರು.[೬೦] ಈ ರೀತಿ ಕೆಳವರ್ಗದ ಜನರು ಈ ಹೋರಾಟದಲ್ಲಿ ತೋರಿದ ಅಸಹಕಾರವನ್ನು ಗಮನಿಸಿಯೆ ಸಬಾಲ್ಟರ್ನ್ ಚಿಂತಕರು ಈ ಹೋರಾಟವನ್ನು ಸಬಾಲ್ಟರ್ನ್ ಸಿದ್ಧಾಂತದಡಿಯಲ್ಲಿ ವಿಶ್ಲೇಷಿಸುವ ಪ್ರಯತ್ನಕ್ಕೆ ಮುಂದಾಗಿದ್ದು.

೧೮೫೭ರ ಹೋರಾಟದ ಮೊದಲ ಹುತಾತ್ಮ ಎಂದು ಕರೆಯುವ ಮಂಗಲಪಾಂಡೆಯನ್ನು ಮೂದಲಿಸಿ, ಕ್ರಿಯಾಶೀಲನಾಗಿಸಿದ 'ದಲಿತ ಮತದಿನ್ ಭಂಗಿ'ಯನ್ನು ನಾವು ಮಂಗಲಪಾಂಡೆಯೊಂದಿಗೆ ನೆನೆಸಿಕೊಳ್ಳು ವುದು ನ್ಯಾಯಯುತವಾಗಿದೆ. ಕಲ್ಕತ್ತದ ಡಂ-ಡಂ ಸೇನಾ ನೆಲೆಯಲ್ಲಿ ಮತದಿನ್‌ಭಂಗಿ ಎಂಬ ದಲಿತ, ಮಂಗಲಪಾಂಡೆಯನ್ನು ಕುಡಿಯಲು ನೀರು ಕೊಡುವಂತೆ ಕೇಳಿದಾಗ, ದಲಿತನ ನೀರಿನ ಲೋಟ ಮುಟ್ಟಿದರೆ, ನನ್ನ ಜಾತಿ ಕೆಡುವುದೆಂದು, ಮಂಗಲಪಾಂಡೆ ನೀರು ಕೊಡಲು ನಿರಾಕರಿಸಿದ. ಆಗ ಮತದಿನ್ ಭಂಗಿ ಕೋಪದಿಂದ, 'ಮಹಾದೊಡ್ಡ ಬ್ರಾಹ್ಮಣ ನೀನು, ದಿನವೂ ನೀನು ಕೈಯಲ್ಲಿ ಮುಟ್ಟಿ, ಹಲ್ಲಲ್ಲಿ ಕಚ್ಚುವ ತೋಟಾದ ಮೇಲೆ ಹಂದಿ, ದನದ ಕೊಬ್ಬು ಸವರಿದ್ದು, ಅದನ್ನು ಮುಟ್ಟುವುದರಿಂದ ನಿನ್ನ ಬ್ರಾಹ್ಮಣತ್ವ ಎಲ್ಲಿ ಉಳಿಯಿತು ಎಂದು ಮೂದಲಿಸಿದ. ಇದರಿಂದಲೇ ಉದ್ವಿಗ್ನನಾದ ಮಂಗಳಪಾಂಡೆ ಮುಂದಿನ ಘಟನೆಗಳಿಗೆ ಕಾರಣನಾದ.[೬೧]

ಜೊತೆಗೆ ಸೋನಾರ್ ಪೇಟೆಯ ಉದಯರಾಮ್, ಕುರ್ರಲ್ ಬುಡಕಟ್ಟು ಸಮುದಾಯದ ಅಹಮ್ಮದ್, ಅಂಜೂಲಾದ ಮಾರ್‌ಮಾಯನ್, ಜಗದೀಶ್‌ಪುರದ ಅಮಿರ್‌ಸಿಂಗ್, ಪಾಟ್ನಾದ ಇರ್ ಆಲಿ, ಹಲಗಲಿ ಬೇಡರಲ್ಲಿ 'ರಾಮಿ' ಎಂಬ ಮಹಿಳೆ.[೬೨] ಇವರೆಲ್ಲರೂ ೧೮೫೭ರ ಘಟನೆಯಲ್ಲಿ ಪ್ರಮುಖ ಪಾತ್ರವಹಿಸಿದ ಅಲಕ್ಷಿತ ವರ್ಗದ ಜನರಾಗಿದ್ದಾರೆ.



### ೩.೨. ಭಾರತದಲ್ಲಿ ೧೮೫೭ರ ಹೋರಾಟ

ಭಾರತದಲ್ಲಿ ಬ್ರಿಟಿಷ್ ಪ್ರಭುತ್ವ ಪ್ರಬಲವಾದಂತೆಲ್ಲಾ ಅದರ ಜೊತೆ ಜೊತೆಗೆ ಬ್ರಿಟಿಷ್ ವಿರೋಧಿ ಚಟುವಟಿಕೆಗಳು ಸಹ ಪ್ರಬಲವಾಗತೊಡಗಿದವು. ಕ್ರಿ.ಶ. ೧೭೭೩ರ ರೆಗ್ಯುಲೇಟಿಂಗ್ ಆ್ಯಕ್ಟ್ ನಂತರ ಗವರ್ನರ್ ಜನರಲ್‌ಗಳಾಗಿ ನೇಮಕವಾಗಿ ಬಂದ ಎಲ್ಲ ಅಧಿಕಾರಿಗಳು ಸಾಮ್ರಾಜ್ಯ ವಿಸ್ತರಣಾ ಗುರಿಯೊಂದಿಗೆ ವಸಾಹತು ನೀತಿಗೆ ಮಹತ್ವವನ್ನು ಕೊಟ್ಟರು. ಇವರಲ್ಲಿ ಕೆಲವರು ಮಾತ್ರ ಆಡಳಿತದಲ್ಲಿ ಸುಧಾರಣ ನೀತಿಗಳನ್ನು ಜಾರಿಗೊಳಿಸಿ, ಸಾಮಾಜಿಕ ಮತ್ತು ಧಾರ್ಮಿಕ ಪರಿವರ್ತನೆಯ ಕೆಲಸಗಳನ್ನು ಕೈಗೊಂಡರು. ಉಳಿದ ಆಡಳಿತಗಾರರು ಯುದ್ಧ ರಹಿತವಾಗಿಯೇ ಎಷ್ಟು ಸಾಧ್ಯವೋ ಅಷ್ಟು ಸಂಸ್ಥಾನಗಳನ್ನು, ರಾಜ್ಯಗಳನ್ನು ಸೇರ್ಪಡೆ ಮಾಡಿಕೊಳ್ಳುವತ್ತ ಗಮನ ಹರಿಸಿದರು. ಆ ಸಮಯಕ್ಕಾಗಲೇ ಅನೈಕ್ಯತೆಯ ಬೀಡಾಗಿದ್ದ ಭಾರತ ಅತ್ಯಂತ ಸುಲಭವಾಗಿ ಬ್ರಿಟಿಷರ ಕುಟಿಲ ನೀತಿಗಳಿಗೆ ಬಲಿಯಾಗಬೇಕಾಯಿತು. ದೇಶೀಯರು ತಮ್ಮ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳುವ ಸಲುವಾಗಿ ಬ್ರಿಟಿಷರ ಸಹಾಯ - ಸಹಕಾರ ಪಡೆಯುವ ಸಂದರ್ಭ ಬಂದೊದಗಿತು. ಹೀಗಾಗಿ ಬ್ರಿಟಿಷರು ಭಾರತದಲ್ಲಿ ಸದೃಢವಾದ ಪ್ರಭುತ್ವವನ್ನು ಸ್ಥಾಪಿಸುವಲ್ಲಿ ಯಶಸ್ವಿಯಾದರು.

ಬ್ರಿಟಿಷರ ಆಡಳಿತ ನೀತಿಯಿಂದ ಶೋಷಣೆ, ದಬ್ಬಾಳಿಕೆ ಮತ್ತು ದೌರ್ಜನ್ಯಕ್ಕೆ ಒಳಗಾದ ಭಾರತೀಯರಲ್ಲಿ, ಬ್ರಿಟಿಷರ ಬಗ್ಗೆ ಕ್ರಮೇಣ ಬೇಸರ, ಜಿಜ್ಞಾಸೆ ಪ್ರಾರಂಭವಾದವು. ಇದರ ಜೊತೆಗೆ ಬ್ರಿಟಿಷರ ಶಿಕ್ಷಣ, ಇಂಗ್ಲಿಷ್ ಭಾಷೆ, ವೈಚಾರಿಕತೆ, ವೈಜ್ಞಾನಿಕ ಚಿಂತನೆ, ಸೈನಿಕ ಚಟುವಟಿಕೆಗಳು, ಪರೋಕ್ಷವಾಗಿ ಭಾರತೀಯರನ್ನು ಜಾಗೃತಗೊಳಿಸಿದವು. ಇದರ ಪರಿಣಾಮವಾಗಿಯೇ ಭಾರತದಾದ್ಯಂತ ಬ್ರಿಟಿಷರ ವಿರುದ್ಧ ಬಂಡಾಯಗಳು ಆರಂಭವಾದವು. ಪ್ರತಿಯೊಂದು ಬಂಡಾಯವು ಮತ್ತೊಂದು ಬಂಡಾಯಕ್ಕೆ ಪ್ರಚೋದನೆ ನೀಡಿತು. ಇಂತಹ ಹೋರಾಟಗಳಲ್ಲಿ ಐತಿಹಾಸಿಕವಾಗಿ ಪ್ರಾಮುಖ್ಯತೆ ಪಡೆದಿರುವ ಮತ್ತು ಚರಿತ್ರೆಯಲ್ಲಿ ಅನೇಕ ಹೆಸರಿನಿಂದ ಕರೆಯಲ್ಪಡುತ್ತಿರುವ ಹೋರಾಟವೆಂದರೆ ೧೮೫೭ರ ಹೋರಾಟ. ಇದನ್ನು '೧೮೫೭ರ ಪ್ರಥಮ ಸ್ವಾತಂತ್ರ್ಯ ಹೋರಾಟ'ವೆಂದೂ ಕರೆಯಲಾಗಿದೆ.

ಮೊದಲು ಉತ್ತರ ಭಾರತದಲ್ಲಿ ಆರಂಭಗೊಂಡ ೧೮೫೭ರ ಹೋರಾಟದ ಪ್ರಮುಖ ಕೇಂದ್ರ ಗಳೆಂದರೆ, ಬ್ಯಾರಕ್‌ಪುರ, ಮೀರತ್, ದೆಹಲಿ, ಕಾನ್ಪುರ, ನಾಗಪುರ, ಝಾನ್ಸಿ, ಪಾಟ್ನಾ, ಅಲಹಬಾದ್, ಲಕ್ನೋ, ಔಧ್, ಬರೈಲಿ, ಅಂಬಾಲ. ಈ ಎಲ್ಲ ಸಂಸ್ಥಾನಗಳ ಅರಸರು ಬ್ರಿಟಿಷರ ಆಡಳಿತ ನೀತಿಯ ಅಪಾಯಕ್ಕೆ ತುತ್ತಾಗಬೇಕಾದ ಪರಿಸ್ಥಿತಿಯಿಂದ ದಂಗೆ ಏಳಬೇಕಾದ ಪರಿಸ್ಥಿತಿ ಉಂಟಾಯಿತು. ೧೮೫೭ರ ಹೋರಾಟದಲ್ಲಿ ಪಾಲ್ಗೊಂಡ ಸಂಸ್ಥಾನಗಳು, ಅಲ್ಲಿಯ ನಾಯಕರು, ಹೋರಾಟದ ಉದ್ದೇಶ, ಗತಿ, ವಿಫಲತೆ, ಪರಿಣಾಮ ಹಾಗೂ ಭವಿಷ್ಯದ ಇತಿಹಾಸದ ಮೇಲೆ ಇದರ ಪ್ರಭಾವ ಮುಂತಾದ ಅಂಶಗಳನ್ನು ಪರಿಶೀಲಿಸಲು, ಹೋರಾಟದ ಆರಂಭದಿಂದ ಅಂತ್ಯದವರೆಗಿನ ಘಟನೆಯ ಪ್ರತಿಯೊಂದು ಹಂತವನ್ನು ವಿಶ್ಲೇಷಣೆ ಮಾಡಿದಾಗ ಈ ಹೋರಾಟದ ಚಾರಿತ್ರಿಕ ಅಂಶಗಳು ಬೆಳಕಿಗೆ ಬರುತ್ತವೆ.

೧೮೫೭ರ ಹೋರಾಟದ ಆರಂಭದ ಪೂರ್ವದಲ್ಲಿಯೂ ಸಹ ಬ್ರಿಟಿಷರ ವಿರುದ್ಧ ನಡೆದ ಕೆಲವು ಹೋರಾಟಗಳು ಇತಿಹಾಸದಲ್ಲಿ ದಾಖಲಾಗಿವೆ. ಆದರೆ ಈ ಪ್ರಮುಖ ಹೋರಾಟಕ್ಕೆ ರಾಜಕೀಯ, ಸಾಮಾಜಿಕ, ಧಾರ್ಮಿಕ, ದತ್ತಕ ನೀತಿ, ಆಕ್ರಮಣ ನೀತಿ, ಸೈನಿಕ ಕಾರಣಗಳಿಂದ ರಂಗ ಸಜ್ಜುಗೊಂಡಿ ತ್ತಾದರೂ, ಅದು ಸ್ಫೋಟಗೊಳ್ಳಲು ಒಂದು ತತ್‌ಕ್ಷಣದ, ತುರ್ತುಕಾರಣ ಅಥವಾ ನೆಪದ ಅವಶ್ಯಕತೆ ಯಿತ್ತು. ಇಂತಹ ಸಮಯದಲ್ಲಿ ಬಂದೂಕಿನ ತೋಟಗಳಿಗೆ ಹಂದಿ ಮತ್ತು ಹಸುವಿನ ಕೊಬ್ಬನ್ನು ಸವರಿದ ಅಂಶವೇ ದಂಗೆಗೆ ತತ್‌ಕ್ಷಣದ ಕಾರಣವಾಯಿತು. ಬ್ರಿಟಿಷರು ಉಲ್‌ವಿಚ್‌ನಿಂದ ತರಿಸಿದ್ದ ಹೊಸ ಬಂದೂಕಿನ ತೋಟಾಗಳಿಗೆ ಹಂದಿ ಮತ್ತು ಹಸುವಿನ ಕೊಬ್ಬನ್ನು ಸವರಿದ್ದ ವಿಷಯ ತಿಳಿದ ಬ್ಯಾರಕ್‌ಪುರದ ಸಿಪಾಯಿಗಳು, ಇಂತಹ ಬಂದೂಕುಗಳ ಬಳಕೆಯಿಂದ ತಮ್ಮ ಧಾರ್ಮಿಕ ನಂಬಿಕೆಗಳಿಗೆ ಧಕ್ಕೆ ಬರುವುದೆಂದು, ಹಾಗಾಗಿ ಸಿಪಾಯಿಗಳೆಲ್ಲ ಒಂದುಗೂಡಿ ನಿರ್ದಿಷ್ಟ ಸಮಯದಲ್ಲಿ ಪ್ರತಿಭಟಿಸಲು ಯೋಜನೆ ರೂಪಿಸಿದರು.[೬೬] ಆದರೆ ಸಂದರ್ಭಗಳ ಒತ್ತಡದಿಂದ ಮಂಗಲಪಾಂಡೆ ಎನ್ನುವ ಸಿಪಾಯಿ ಒಬ್ಬನೆ ಬ್ರಿಟಿಷ್ ಅಧಿಕಾರಿಗಳ ಆಜ್ಞೆ ಉಲ್ಲಂಘಿಸಿ, ಅಧಿಕಾರಿಗಳ ಮೇಲೆ ಗುಂಡು ಹಾರಿಸುವ ಸಂದರ್ಭದಲ್ಲಿ ಸೆರೆ ಸಿಕ್ಕನು. ಅವನನ್ನು ಕ್ಷಿಪ್ರ ವಿಚಾರಣೆಗೆ ಒಳಪಡಿಸಿ, ೮ನೇ ಏಪ್ರಿಲ್ ೧೮೫೭ ರಂದು ೨೬ ವರ್ಷದ ಮಂಗಲಪಾಂಡೆಯನ್ನು ಗಲ್ಲಿಗೇರಿಸಲಾಯಿತು. ಹೀಗೆ ಮಂಗಲಪಾಂಡೆಯು ೧೮೫೭ರ

ಹೋರಾಟದ ಪ್ರಪ್ರಥಮ ಹುತಾತ್ಮನಾದ. ತದನಂತರ ಬ್ಯಾರಕ್‌ಪುರದ ಸೈನಿಕರು ವಿಶ್ವಾಸಕ್ಕೆ ಅರ್ಹರಲ್ಲವೆಂದು ಇಡೀ ತುಕಡಿಯನ್ನು ಬರ್ಖಾಸ್ತ್ ಮಾಡಲಾಯಿತು. ಹೀಗೆ ಮಂಗಲಪಾಂಡೆ ಹುತಾತ್ಮನಾದ ಸುದ್ದಿಯಿಂದ ಪ್ರೇರಿತರಾದ ಇತರ ಸೇನಾ ನೆಲೆಗಳ ಸಿಪಾಯಿಗಳು ಸಹ ವಿವಿಧ ಸ್ಥಳಗಳಲ್ಲಿ ಬ್ರಿಟಿಷರ ವಿರುದ್ಧ ಪ್ರತಿಭಟನೆ ಆರಂಭಿಸಿದರು. ಮೀರತ್‌ನಲ್ಲಿದ್ದ ಭಾರತೀಯ ಸೈನ್ಯ ತುಕಡಿಗೆ ಕೊಬ್ಬು ಸವರಿದ ತೋಟಾಗಳನ್ನು ಬಳಸಲು ಆಜ್ಞೆ ಮಾಡಿದಾಗ, ಸಿಪಾಯಿಗಳು ಆಜ್ಞೆ ಪಾಲಿಸಲು ನಿರಾಕರಿಸಿದರು. ಆಗ ಆ ಸಿಪಾಯಿಗಳನ್ನು ಸೈನಿಕ ನ್ಯಾಯಾಲಯದಲ್ಲಿ ವಿಚಾರಣೆಗೆ ಒಳಪಡಿಸಿ, ಅಪಮಾನಗೊಳಿಸಿ ಕಠಿಣ ಶಿಕ್ಷೆಗೆ ಒಳಪಡಿಸಲಾಯಿತು. ಈ ಘಟನೆಯಿಂದ ಅವಮಾನಕ್ಕೀಡಾದ ಇತರ ಸಿಪಾಯಿಗಳು ಪ್ರತಿಭಟನೆಗೆ ನಿಗದಿಯಾಗಿದ್ದ ೩೧ ಮೇ ೧೮೫೭ರ ನಿರ್ದಿಷ್ಟ ದಿನಾಂಕದವರೆಗೆ ಕಾಯದೆ, ತಾಳ್ಮೆಯನ್ನು ಕಳೆದುಕೊಂಡು, ಈ ಹೋರಾಟಕ್ಕಿಳಿದರು. ದಿನಾಂಕ ೧೦ ಮೇ ೧೮೫೭ರಂದು ಸಿಪಾಯಿಗಳು ಮತ್ತು ಮೀರತ್ ಪಟ್ಟಣದ ಸಾವಿರಾರು ಸಂಖ್ಯೆಯ ನಾಗರಿಕರು ಸೇರಿಕೊಂಡು ಸರ್ಕಾರಿ ಕಚೇರಿಗಳ ನಾಶ, ಬ್ಯಾಂಕುಗಳು ಮತ್ತು ಬ್ರಿಟಿಷ್ ನಾಗರಿಕರ ಮೇಲೆ ಹಲ್ಲೆ ನಡೆಸುತ್ತಾ ಮೀರತ್‌ನ್ನು ತಮ್ಮ ಹತೋಟಿಗೆ ತೆಗೆದುಕೊಂಡ ಕ್ರಾಂತಿಕಾರರು ಮುಂದೆ ದೆಹಲಿಯತ್ತ ಸಾಗಿದರು.[34]

ಮೇಲಿನ ಈ ಘಟನೆಯನ್ನು ನೋಡಿದಾಗ, ನಿಗದಿಯಾದ ದಿನಾಂಕಕ್ಕಿಂತ ಮುಂಚೆ, ಅವಸರದಲ್ಲಿ ಆರಂಭವಾದ ಈ ಕ್ರಾಂತಿಯ ಫಲವು, ಕ್ರಾಂತಿಕಾರರಿಗಿಂತಲೂ ಬ್ರಿಟಿಷ್ ಪ್ರಭುತ್ವಕ್ಕೆ ಹೆಚ್ಚು ಅನುಕೂಲವಾಗಿ ಪರಿಣಮಿಸಿತು ಎಂದು ಹೇಳಬಹುದು. ಏಕೆಂದರೆ, ನಾನಾಸಾಹೇಬ ಮತ್ತು ಸಹೋದ್ಯೋಗಿಗಳಿಂದ ರೂಪಿಸಿದ್ದ ಯೋಜನೆಯಂತೆ ನಿರ್ದಿಷ್ಟ ದಿನಾಂಕವಾದ ೩೧ನೇ ಮೇ ೧೮೫೭ ರಂದು ಇಡೀ ಭಾರತದಲ್ಲಿ ಏಕಕಾಲಕ್ಕೆ ಈ ಕ್ರಾಂತಿ ಆರಂಭವಾಗಿದ್ದರೆ, ಅದರ ಫಲಿತಾಂಶವೇ ಬೇರೆ ಆಗುತ್ತಿತ್ತು. ಅಷ್ಟೇ ಅಲ್ಲ ಬ್ರಿಟಿಷ್ ಪ್ರಭುತ್ವವನ್ನೊಳಗೊಂಡಂತೆ, ಯಾವೊಬ್ಬ ಬ್ರಿಟಿಷ್ ಪ್ರಜೆಯು ಜೀವದಿಂದುಳಿಯಲು ಸಾಧ್ಯವಿರಲಿಲ್ಲ ಎಂದೆನಿಸುತ್ತದೆ.[35]

ಮೀರತ್‌ನಿಂದ ಬಂದ ಸುಮಾರು ಎರಡು ಸಾವಿರ ಭಾರತೀಯ ಸಿಪಾಯಿಗಳು, ದಿನಾಂಕ ೧೧ ಮೇ ೧೮೫೭ ರಂದು ದೆಹಲಿಯನ್ನು ಪ್ರವೇಶಿಸಿದರು. ದೆಹಲಿಯಲ್ಲಿ ಬ್ರಿಟಿಷರ ಅಧಿಕಾರಿಯ ಅಧೀನದಲ್ಲಿದ್ದ ಭಾರತೀಯ ಸೈನಿಕರು ಸಹ ಇವರಿಗೆ ಬೆಂಬಲ ನೀಡಿ, ಬ್ರಿಟಿಷ್ ಅಧಿಕಾರಿಯಾಗಿದ್ದ ಕರ್ನಲ್ ರಿಪ್ಲೇಯನ್ನು ಕೊಂದು ಹಾಕಿ ಕೆಲವೇ ದಿನಗಳಲ್ಲಿ ದೆಹಲಿಯನ್ನು ವಶಪಡಿಸಿಕೊಂಡು, ಬಹದ್ದೂರ್ ಷಾನನ್ನು 'ಹಿಂದೂಸ್ಥಾನದ ಚಕ್ರವರ್ತಿ' ಎಂದು ಘೋಷಿಸಿದರು. ಹೀಗೆ ಕ್ರಾಂತಿಕಾರರು ದೆಹಲಿಯನ್ನು ವಶಪಡಿಸಿಕೊಂಡ ಸುದ್ದಿಯು ಇಡಿ ಉತ್ತರ ಭಾರತದಾದ್ಯಂತ ಕಾಡ್ಗಿಚ್ಚಿನಂತೆ ಹರಡಿ, ನೆರೆಹೊರೆಯ ಪ್ರದೇಶಗಳಾದ ಅಲಿಘರ್, ಇಟಾವ, ಮೇನ್‌ಪುರಿ ಪ್ರದೇಶಗಳು ಸ್ವತಂತ್ರವನ್ನು ಘೋಷಿಸಿಕೊಂಡವು. ಹಾಗೆಯೇ ಈ ಸುದ್ದಿಯು ರೋಹಿಲಖಂಡ ಪ್ರದೇಶಕ್ಕೆ ಹರಡಿ ಅಲ್ಲಿನ ಸುಲ್ತಾನ ಖಾನ್ ಬಹದ್ದೂರ್‌ಖಾನ್ ಕ್ರಾಂತಿಕಾರರ ಜೊತೆ ಕೈ ಜೋಡಿಸಿದನು. ಈ ಒಂದು ದೃಷ್ಟಾಂತವು ಬ್ರಿಟಿಷರನ್ನು ಭಾರತದ ನೆಲದಿಂದ ಹೊರಹಾಕುವ ಈ ಹೋರಾಟದಲ್ಲಿ ಹಿಂದೂ ಮತ್ತು ಮುಸ್ಲಿಂರ ಐಕ್ಯತೆ ಮತ್ತು ಸಹಕಾರವನ್ನು ಗುರುತಿಸಬಹುದು.

ನಂತರ ಈ ಕ್ರಾಂತಿಯ ಸುದ್ದಿಯು ಕಾನ್ಪುರ, ಲಕ್ನೋ, ಬಿಹಾರ, ಮಧ್ಯ ಪ್ರಾಂತ್ಯಗಳಿಗೂ ಹರಡಿ ಅಲ್ಲಿಂದಲೂ ಕ್ರಾಂತಿಕಾರರಿಗೆ ಬೆಂಬಲ ಸಿಕ್ಕಿತು.

ಕಾನ್ಪುರದಲ್ಲಿ ನಾನಾಸಾಹೇಬ ಮತ್ತು ತಾತ್ಯಾಟೋಪಿ ಇವರ ನೇತೃತ್ವದಲ್ಲಿ ಆರಂಭವಾದ ಈ ಕ್ರಾಂತಿಗೆ ಸಿಪಾಯಿಗಳು ಮತ್ತು ಎಲ್ಲ ವರ್ಗದ ನಾಗರಿಕರಿಂದ ಅತ್ಯುತ್ಸಾಹದ ಬೆಂಬಲ ದೊರೆಯಿತು. ನಾನಾಸಾಹೇಬನು ಕ್ರಾಂತಿಯ ನೇತೃತ್ವವಹಿಸಿ, ಕ್ರಾಂತಿಯನ್ನು ಮುನ್ನಡೆಸಲು ಮುಖ್ಯ ಕಾರಣವೇನೆಂದರೆ, ಆತನಿಗೆ ದೊರೆಯಬೇಕಾಗಿದ್ದ ವರ್ಷಾಸನ ಮುಂತಾದ ಸೌಲಭ್ಯಗಳನ್ನು ನಿರಾಕರಿಸಿದ ಪರಿಣಾಮವಾಗಿ ಅತೃಪ್ತಿ ಮತ್ತು ಸೇಡನ್ನು ಹೊಂದಿದ್ದನು.[೩೬] ಔಧ್‌ನಲ್ಲಿ ಕ್ರಾಂತಿಯ ಕಿಡಿಯನ್ನು ಹೊತ್ತಿಸಿದವರು ಬೇಗಂ ಹಜರತ್ ಮಹಲ್ ಮತ್ತು ವಜೀರ್ ಅಲಿ ನಾಕೀಖಾನ್.

ಝಾನ್ಸಿ ಮತ್ತು ಇಡೀ ಮಧ್ಯ ಪ್ರಾಂತ್ಯಗಳಲ್ಲಿ ಕ್ರಾಂತಿಯ ಮುಂದಾಳತ್ವವನ್ನು ವಹಿಸಿದವರು ಧೀರ ಮಹಿಳೆ ರಾಣಿ ಲಕ್ಷ್ಮೀಬಾಯಿ. ಲಕ್ಷ್ಮೀಬಾಯಿ ಕ್ರಾಂತಿಯಲ್ಲಿ ಪಾಲ್ಗೊಳ್ಳಲು ಕಾರಣ ಎಂದರೆ, ಝಾನ್ಸಿಯ ರಾಣಿ ಲಕ್ಷ್ಮಿಬಾಯಿಯ ಪತಿಯಾಗಿದ್ದ ಗಂಗಾಧರರಾವ್ ಮರಣದ ಸಮಯದಲ್ಲಿ ದಾಮೋದರರಾವ್‌ನನ್ನು ದತ್ತುಪುತ್ರನನ್ನಾಗಿ ಸ್ವೀಕರಿಸಿದ್ದ. ಆದರೆ ಈ ದತ್ತಕವನ್ನು ಮಾನ್ಯ ಮಾಡದ ಸರ್ಕಾರ ೧೮೫೪ರಲ್ಲಿ ಝಾನ್ಸಿಯನ್ನು, ಕಂಪನಿಯ ನೇರ ಆಡಳಿತಕ್ಕೆ ಸೇರಿಸಿಕೊಂಡು, ರಾಣಿಗೆ ವರ್ಷಾಸನವನ್ನು ನಿಗದಿಪಡಿಸಿತ್ತು. ಇದನ್ನು ವಿರೋಧಿಸಿದ ಲಕ್ಷ್ಮೀಬಾಯಿ ಕ್ರಾಂತಿಗೆ ಧುಮುಕಿ ಮುಂದಾಳತ್ವ ವಹಿಸಿದಳು. ಕ್ರಾಂತಿಯು ಆರಂಭಕ್ಕೆ ಗೊತ್ತುಪಡಿಸಲಾಗಿದ್ದ ಪೂರ್ವಯೋಜಿತ ನಿರ್ದಿಷ್ಟ ದಿನಾಂಕದಂದು ಆರಂಭವಾಗುವುದರ ಬದಲಾಗಿ ತತ್‌ಕ್ಷಣ ಆರಂಭವಾಗಿದ್ದರಿಂದಲೂ, ಎಲ್ಲ ಪ್ರದೇಶಗಳಲ್ಲಿ ಏಕಕಾಲಕ್ಕೆ ಕಾರ್ಯಾಚರಣೆ ಮಾಡದೇ ಇದ್ದುದರಿಂದಲೂ, ಏಕನಾಯಕತ್ವ ಮತ್ತು ನಿರ್ದಿಷ್ಟ ಗುರಿ ಇಲ್ಲದ್ದ ರಿಂದಾಗಿಯೂ, ಕ್ರಾಂತಿಕಾರಿಗಳಲ್ಲಿ ಶಸ್ತ್ರಾಸ್ತ್ರಗಳು ಮತ್ತು ಸಂಪನ್ಮೂಲಗಳ ಕೊರತೆಯಿಂದಲೂ ಮತ್ತು ಅನೇಕ ಪ್ರಾಂತೀಯ ಅರಸರು ಬ್ರಿಟಿಷರಿಗೆ ಬೆಂಬಲ ಮತ್ತು ಸಹಕಾರವನ್ನು ನೀಡಿದ್ದರಿಂದ ಕ್ರಾಂತಿ ಅಲ್ಪಕಾಲದಲ್ಲಿ ವಿಫಲವಾಗಲು ಕಾರಣವಾಯಿತು.[೩೭]

ಕ್ರಾಂತಿಯು ಏಕಕಾಲಕ್ಕೆ ಎಲ್ಲ ಪ್ರದೇಶಗಳಲ್ಲಿ ಹರಡದೇ ಒಂದೊಂದು ಪ್ರದೇಶದಲ್ಲಿ, ಒಂದೊಂದು ಸಮಯಕ್ಕೆ ಆರಂಭವಾಗಿದ್ದರಿಂದ, ಬ್ರಿಟಿಷರು ಸುಲಭವಾಗಿ ಒಂದೊಂದೇ ದಂಗೆಗಳನ್ನು ಅಡಗಿಸುತ್ತ, ದಂಗೆಯನ್ನು ದಮನ ಮಾಡಿದರು. ಕಾನ್ಪುರದಲ್ಲಿ ಸೋತ ನಾನಾಸಾಹೇಬ ನೇಪಾಳದ ಗಡಿಯಲ್ಲಿನ ತರಾಯ್ ಅರಣ್ಯದಲ್ಲಿ ತಲೆಮರೆಸಿಕೊಂಡ. ಮುಂದೆ ಆತನ ಬಗ್ಗೆ ಯಾವುದೇ ವಿವರಗಳು ತಿಳಿಯು ವುದಿಲ್ಲ.[೩೮] ಕ್ರಾಂತಿಯಲ್ಲಿ 'ಜೋನ್ ಆಫ್ ಆರ್ಕ್ ಆಫ್ ದ ರಿವೋಲ್ಟ್' ಎಂದು ಬಣ್ಣಿಸಲ್ಪಟ್ಟಿರುವ ರಾಣಿ ಲಕ್ಷ್ಮೀಬಾಯಿ ಹೋರಾಡುತ್ತಲೇ ೧೭ ಜೂನ್ ೧೮೫೮ರಂದು ಮರಣ ಹೊಂದಿದಳು. ತಾತ್ಯಾಟೋಪಿ ಬ್ರಿಟಿಷರ ವಿರುದ್ಧ ತೀವ್ರ ಹೋರಾಟದಲ್ಲಿ ತೊಡಗಿದ್ದಾಗ, ಗೆಳೆಯ ರಜಪುಟಾಣದ ಮಾನಸಿಂಗ್‌ನ ಕುತಂತ್ರದಿಂದ ಬ್ರಿಟಿಷರಿಗೆ ಸೆರೆ ಸಿಕ್ಕ. ಸೆರೆ ಸಿಕ್ಕ ತಾತ್ಯಾಟೋಪಿಯನ್ನು ನ್ಯಾಯ ವಿಚಾರಣೆ ಮಾಡಿ ೧೮ನೇ ಏಪ್ರಿಲ್ ೧೮೫೯ರಂದು ನೇಣು ಹಾಕಿದರು. ಈ ರೀತಿ ೧೮೫೭ರಲ್ಲಿ ಆರಂಭವಾದ ಈ

ಮಹಾಕ್ರಾಂತಿಯು ಏಪ್ರಿಲ್ ೧೮೫೯ರ ವೇಳೆಗೆ ತನ್ನ ಪ್ರಖರತೆಯನ್ನು ಕಳೆದುಕೊಂಡು ಸಂಪೂರ್ಣವಾಗಿ ತಣ್ಣಗಾಯಿತು.

## ೩.೩. ಕರ್ನಾಟಕದಲ್ಲಿ ೧೮೫೭ರ ಹೋರಾಟ

ಬ್ರಿಟಿಷ್ ಸಾಮ್ರಾಜ್ಯಶಾಹಿ ನೀತಿಯು ವಿಸ್ತಾರಗೊಳ್ಳುತ್ತಾ, ಕ್ರಮೇಣ ಕರ್ನಾಟಕವು ಬ್ರಿಟಿಷರ ಅಧೀನಕ್ಕೆ ಒಳಪಟ್ಟಿತು. ೧೮ನೇ ಶತಮಾನದ ಅಂತ್ಯದ ವೇಳೆಗೆ ಕರ್ನಾಟಕದಲ್ಲಿ ಬ್ರಿಟಿಷರ ಅಧಿಕಾರ ಪೂರ್ಣ ವ್ಯಾಪಿಸಿ, ಅವರ ಅಧೀನದಲ್ಲಿ ಹರಿದು ಹಂಚಿ ಹೋಯಿತು. ಬ್ರಿಟಿಷರ ವಿಸ್ತರಣಾ ನೀತಿಯ ಅಪಾಯವನ್ನು ಅರಿತ ಮೈಸೂರಿನ ಹೈದರ್‌ಆಲಿ, ಬ್ರಿಟಿಷರಿಗೆ ತೀವ್ರ ಪ್ರತಿರೋಧವನ್ನು ಒಡ್ಡಿ ಹೋರಾಡಿದನು. ಇವನ ನಂತರ ಟಿಪ್ಪುಸುಲ್ತಾನನು ಬ್ರಿಟಿಷರ ವಿರುದ್ಧ ಹೋರಾಟವನ್ನು ಮುಂದುವರೆಸಿ, ಬ್ರಿಟಿಷರನ್ನು ಭಾರತದಿಂದ ಹೊರಹಾಕಲೇಬೇಕೆಂಬ ಸಂಕಲ್ಪದಿಂದ, ಅನೇಕ ದೇಶೀಯ ಮತ್ತು ವಿದೇಶೀಯರ ಸಹಕಾರ ಬೆಂಬಲ ಪಡೆಯಲು ಪ್ರಯತ್ನಿಸಿ ಬ್ರಿಟಿಷರಲ್ಲಿ ನಡುಕ ಹುಟ್ಟಿಸಿದ್ದನು. ಆದರೆ ನಾಲ್ಕನೇ ಮೈಸೂರು ಯುದ್ಧದಲ್ಲಿ ದೇಶಿ ಅರಸರ ನಯವಂಚಕತನ ಹಾಗೂ ವಿದೇಶಿಯರ ಕುತಂತ್ರದಿಂದಾಗಿ ಬ್ರಿಟಿಷರ ವಿರುದ್ಧ ಹೋರಾಡುತ್ತಲೇ ಮರಣ ಹೊಂದಿದನು. ಟಿಪ್ಪುವಿನ ಮರಣದ ನಂತರ ಕರ್ನಾಟಕದ ಹಲವು ಭಾಗಗಳಲ್ಲಿ ಬ್ರಿಟಿಷರ ವಿರುದ್ಧ ಸಶಸ್ತ್ರ ಬಂಡಾಯಗಳು ಸಂಭವಿಸಿದವು. ಇಂತಹ ಬಂಡಾಯಗಳಲ್ಲಿ ಶಿವಮೊಗ್ಗದ ದೊಂಢಿಯವಾಗ್‌ನ ಬಂಡಾಯ, ಶಿವಮೊಗ್ಗ ಜಿಲ್ಲೆಯ ಐಗೂರಿನ ಪಾಳೇಗಾರ ವೆಂಕಟಾದ್ರಿಯ ಬಂಡಾಯ, ೧೮೧೯ರಲ್ಲಿ ಕೊಪ್ಪಳದ ಜಮೀನುದಾರ ವೀರಪ್ಪನ ಪ್ರತಿಭಟನೆ, ೧೮೨೪ರಲ್ಲಿ ಕಿತ್ತೂರು ಸಂಸ್ಥಾನದ ಬಂಡಾಯಗಳು ಪ್ರಮುಖವಾದವು.[೩೯]

೧೮೫೭ರ ವೇಳೆಗೆ ಬ್ರಿಟಿಷರ ಸಾಮ್ರಾಜ್ಯಶಾಹಿ ನೀತಿಯಿಂದ ಶೋಷಣೆಗೆ ಒಳಗಾದ ಸಂಸ್ಥಾನಿಕರು, ಜಮೀನುದಾರರು, ರೈತರು ಮತ್ತು ನಾಗರಿಕರು ಬ್ರಿಟಿಷರ ವಿರುದ್ಧ ಅತೃಪ್ತಿ ಹೊಂದಿ, ಪ್ರತಿಭಟನಾ ಮನೋಭಾವ ಬೆಳೆಸಿಕೊಳ್ಳತೊಡಗಿದ್ದರು. ಇದೇ ವೇಳೆಗೆ ೧೮೫೭ರಲ್ಲಿ ಉತ್ತರ ಭಾರತದಲ್ಲಿ ಸಂಭವಿಸಿದ ಸಿಪಾಯಿಗಳ ದಂಗೆ ಮತ್ತು ಕಾನ್ಪುರದ ನಾನಾಸಾಹೇಬನು ಕರ್ನಾಟಕದ ಸಂಸ್ಥಾನಿಕರಿಗೆ ದಂಗೆ ಏಳಲು ಪ್ರೇರೇಪಿಸಿ ಬರೆದ ಪತ್ರವು, ಬಂಡಾಯಕ್ಕೆ ಪ್ರೇರಣೆ ನೀಡಿದವು. ಹೀಗಾಗಿ ೧೮೫೭ರ ಹೋರಾಟದಲ್ಲಿ ಕರ್ನಾಟಕದ ಅನೇಕ ಸಂಸ್ಥಾನಿಕರು, ಜಮೀನುದಾರರು, ಪ್ರತಿಭಟನೆ ಆರಂಭಿಸಿದರು.[೪೦] ಇಂತಹ ಪ್ರತಿಭಟನೆಗಳಲ್ಲಿ ಹಲಗಲಿಯ ಬೇಡರು, ಸುರಪುರದ ವೆಂಕಟಪ್ಪನಾಯಕ, ನರಗುಂದದ ಬಾಬಾಸಾಹೇಬ, ಮುಂಡರಗಿ ಭೀಮರಾಯರು ಪ್ರಮುಖರು. ಉತ್ತರ ಕರ್ನಾಟಕದ ಮುಧೋಳ ಸಂಸ್ಥಾನದ ಹಲಗಲಿ ಗ್ರಾಮದ ಬೇಡರು ಪ್ರಾಚೀನ ಕಾಲದಿಂದ ಬೇಟೆ ಮತ್ತು ಸೈನ್ಯಗಳಲ್ಲಿ ಸೇವೆ ಸಲ್ಲಿಸುತ್ತ, ಶಸ್ತ್ರಧಾರಣೆಯು ತಮ್ಮ ಕರ್ತವ್ಯ ಎಂದು ಪ್ರತಿಯೊಬ್ಬ ಬೇಡರು ನಂಬಿದ್ದರು. ಆಂಗ್ಲ ಪ್ರಭುತ್ವವು ೧೧ ಸೆಪ್ಟೆಂಬರ್ ೧೮೫೭ರಂದು ನಿಶ್ಶಸ್ತ್ರೀಕರಣ ಶಾಸನವನ್ನು ಹೊರಡಿಸಿ, ಆಯುಧ ಹೊಂದ ಬಯಸುವವರು ಕಡ್ಡಾಯವಾಗಿ ಪರವಾನಿಗೆ ಪಡೆಯಬೇಕೆಂದು ಘೋಷಿಸಿತು. ಆದರೆ ಹಲಗಲಿ ಬೇಡರಿಗೆ ಶಸ್ತ್ರಾಸ್ತ್ರಗಳು ಜೀವನಾವಶ್ಯಕವೂ, ಪೂಜಾವಸ್ತುಗಳು ಆಗಿದ್ದರಿಂದ, ಶಸ್ತ್ರಾಸ್ತ್ರಗಳನ್ನು ಸಮರ್ಪಿಸಲು ನಿರಾಕರಿಸಿದ ಹಲಗಲಿ ಬೇಡರು,

ನಿಂಬಾಳ್‌ಕರ್ ಎಂಬುವವನಿಂದ ಪ್ರೇರಿತರಾಗಿ ಜಡಗ್ಯಾ, ಬಾಳ್ಯ ಎಂಬುವವರ ನಾಯಕತ್ವದಲ್ಲಿ ಬ್ರಿಟಿಷ್ ಸರಕಾರದ ವಿರುದ್ಧ ಯುದ್ಧ ಹೂಡಿದರು.[೪೧]

ಗುಲಬರ್ಗಾ ಜಿಲ್ಲೆಯ ಯಾದಗಿರಿಯಿಂದ ಸುಮಾರು ೨೦ ಮೈಲು ದೂರದಲ್ಲಿರುವ ಸುರಪುರವು ಬೇಡ ವಂಶಸ್ಥರಿಂದ ಆಳಲ್ಪಡುತ್ತಿತ್ತು. ಕ್ರಿ.ಶ. ೧೮೪೧ರಲ್ಲಿ ಸುರಪುರದ ರಾಜಕೃಷ್ಣಪ್ಪ ನಾಯಕ ತೀರಿಕೊಂಡಾಗ, ಅವನ ಮಗ ವೆಂಕಟಪ್ಪನಾಯಕ ಇನ್ನೂ ಅಪ್ರಾಪ್ತವಯಸ್ಸಿನವನಾಗಿದ್ದರಿಂದ ಬ್ರಿಟಿಷರು, ಮೆಡೋಸ್ ಟೇಲರ್‌ನನ್ನು ಸುರಪುರದ ರಾಜಕೀಯ ಕಾರ್ಯಭಾರಿಯಾಗಿ ನೇಮಿಸಿದ್ದರು. ವೆಂಕಟಪ್ಪನಾಯಕ ಪ್ರಾಪ್ತ ವಯಸ್ಕನಾಗಿ ಆಳ್ವಿಕೆ ಮಾಡಲು ಆರಂಭಿಸಿದ ನಂತರವೂ ಸಲಹೆಗಾರನನ್ನಾಗಿ ಒಬ್ಬ ಬ್ರಿಟಿಷ್ ಅಧಿಕಾರಿಯನ್ನು ಇಟ್ಟುಕೊಳ್ಳುವಂತೆ ಒತ್ತಡ ಹೇರತೊಡಗಿದರು. ಆದರೆ, ವಿದೇಶೀಯರ ಮುಷ್ಟಿಯಿಂದ ದೇಶವನ್ನು ವಿಮೋಚಿಸಬೇಕೆಂದು ಬಯಸಿದ್ದ ವೆಂಕಟಪ್ಪನಾಯಕ, ಈಗಾಗಲೇ ಬ್ರಿಟಿಷರ ನಿರಂಕುಶ ವರ್ತನೆಯ ವಿರುದ್ಧ ದೇಶದೆಲ್ಲೆಡೆ ದ್ವೇಷ ಹೊಗೆಯಾಡುತ್ತಿರುವುದನ್ನು ಗಮನಿಸಿದ ತಾನೂ ಬ್ರಿಟಿಷರ ವಿರುದ್ಧ ಹೋರಾಡಲು ನಿರ್ಧರಿಸಿದ. ಈ ಉದ್ದೇಶಕ್ಕಾಗಿ ನಾನಾಸಾಹೇಬ, ಮುಂಡರಗಿ ಭೀಮರಾಯ, ನರಗುಂದದ ಬಾಬಾಸಾಹೇಬನೊಂದಿಗೆ ಗುಪ್ತಾಲೋಚನೆ ನಡೆಸಿ ಬ್ರಿಟಿಷರ ಮೇಲೆ ದಾಳಿ ಮಾಡಲು ನಿರ್ಧರಿಸಿದ್ದ.[೪೨]

ಧಾರವಾಡ ಜಿಲ್ಲೆಯ ಉತ್ತರ ಭಾಗದಲ್ಲಿರುವ ನರಗುಂದದ ಸಂಸ್ಥಾನಿಕ ಬಾಬಾಸಾಹೇಬನಿಗೆ, ಗಂಡು ಮಕ್ಕಳು ಇಲ್ಲದ ಕಾರಣ ದತ್ತು ಸ್ವೀಕಾರಕ್ಕೆ ಬ್ರಿಟಿಷರ ಅನುಮತಿ ಕೇಳಿದ್ದ. ಆದರೆ ಬ್ರಿಟಿಷರು ದತ್ತು ಸ್ವೀಕಾರದ ಅನುಮತಿಯನ್ನು ನಿರಾಕರಿಸಿದರಲ್ಲದೇ, ನರಗುಂದ ಸಂಸ್ಥಾನವನ್ನು ಬ್ರಿಟಿಷ್ ಪ್ರಭುತ್ವಕ್ಕೆ ಸೇರಿಸಿಕೊಳ್ಳುವ ನಿರ್ಧಾರ ಮಾಡಿದರು. ಹಾಗೆಯೇ ನಿಶಸ್ತ್ರೀಕರಣ ಶಾಸನದನ್ವಯ ಶಸ್ತ್ರಾಸ್ತ್ರಗಳನ್ನು ಒಪ್ಪಿಸುವಂತೆ ಆದೇಶಿಸಿದ್ದರು. ಇದರಿಂದ ಬೇಸತ್ತ ಬಾಬಾಸಾಹೇಬನು, ಬ್ರಿಟಿಷರ ನೀತಿಯನ್ನು ವಿರೋಧಿಸಿ, ಅವರ ವಿರುದ್ಧ ಹೋರಾಡಲು ನಿರ್ಧರಿಸಿ, ಪೇಶ್ವೆ ನಾನಾಸಾಹೇಬ, ಮುಂಡರಗಿ ಭೀಮರಾಯ ಹಮ್ಮಿಗಿಯ ದೇಸಾಯಿ ಕೆಂಚನಗೌಡ ಮತ್ತು ಸುತ್ತಮುತ್ತಲಿನವರೊಡನೆ ಸಂಚು ನಡೆಸಿ ಬಂಡಾಯಕ್ಕೆ ಸಿದ್ಧತೆ ನಡೆಸಿದ.[೪೩]

ಮುಂಡರಗಿ ನಾಡಗೌಡರ ವಂಶಸ್ಥರಾದ ಮುಂಡರಗಿ ಭೀಮರಾಯರು, ಬ್ರಿಟಿಷ್ ಸರಕಾರದಲ್ಲಿ ಸೇವೆ ಸಲ್ಲಿಸಿ, ಕ್ರಮೇಣ ಅವರ ನೀತಿಗಳಿಂದ ಬೇಸತ್ತು, ತಮ್ಮ ಸೇವೆಗೆ ರಾಜೀನಾಮೆ ಸಲ್ಲಿಸಿ, ಮುಂಡರಗಿ ಬಳಿ ಬೆಣ್ಣೆಹಳ್ಳಿಯಲ್ಲಿ ನೆಲೆಸಿ, ರೈತರನ್ನು, ಜನರನ್ನು ಸಂಘಟಿಸುತ್ತ, ಸುತ್ತಮುತ್ತಲಿನ ಸಂಸ್ಥಾನಿಕರ ಜೊತೆ ಸಂಪರ್ಕ ಸಾಧಿಸಿ ಬಂಡಾಯದ ಸಿದ್ಧತೆಗಳನ್ನು ಕೈಗೊಂಡಿದ್ದರು. ಭೀಮರಾಯರ ಜೀವನ, ಹೋರಾಟ, ತ್ಯಾಗ, ಬಲಿದಾನಗಳ ಬಗ್ಗೆ ಮುಂದಿನ ಅಧ್ಯಾಯಗಳಲ್ಲಿ ವಿವರವಾಗಿ ಚರ್ಚಿಸಲಾಗಿದೆ.

ಈ ರೀತಿ ಕರ್ನಾಟಕದ ಅನೇಕ ಪ್ರದೇಶಗಳಲ್ಲಿ ಬ್ರಿಟಿಷ್ ಪ್ರಭುತ್ವದ ವಿರುದ್ಧ ೧೮೫೭ರಲ್ಲಿ ಅನೇಕ ಸಂಸ್ಥಾನಿಕರು ದಂಗೆ ಎದ್ದರು. ಈ ಎಲ್ಲ ಹೋರಾಟಗಾರರ ಉದ್ದೇಶ, ಗುರಿ ಒಂದೇ ಆಗಿದ್ದರೂ, ಸಂಪರ್ಕ ಸಾಧನದ ಕೊರತೆಯಿಂದ, ಏಕಕಾಲಲ್ಲಿ ಎಲ್ಲ ಸಂಸ್ಥಾನಿಕರು ಒಟ್ಟಾಗಿ ದಾಳಿ ಮಾಡದೇ ಇದ್ದದ್ದು ಹಾಗೂ ಬ್ರಿಟಿಷ್ ಪ್ರಭುತ್ವವನ್ನು ಎದುರಿಸಿ ಹೋರಾಡುವಷ್ಟು ಉತ್ತಮ ಸೈನ್ಯ ಶಸ್ತ್ರಾಸ್ತ್ರಗಳು,

ಇವರ ಬಳಿ ಇಲ್ಲದ ಕಾರಣ, ಈ ಎಲ್ಲ ಸಂಸ್ಥಾನಿಕರು ಹೋರಾಟದಲ್ಲಿ ವಿಫಲರಾಗಿ ಹುತಾತ್ಮರಾದರು. ಹಲಗಲಿ ಬೇಡರು, ಬ್ರಿಟಿಷರ ಬೃಹತ್ ಸೈನ್ಯದ ಮುಂದೆ ಹೋರಾಡಲಾಗದೇ ತಮ್ಮ ಗುಡಿಸಲಿನಲ್ಲಿಯೇ ಇದ್ದಾಗ, ಬ್ರಿಟಿಷರು ಇವರ ಗುಡಿಸಲುಗಳಿಗೆ ಬೆಂಕಿ ಇಟ್ಟರು. ಆದರೆ ಯಾವೊಬ್ಬ ಬೇಡನು ಜೀವಭಯ ದಿಂದ ಹೊರಬರದೇ ಗುಡಿಸಲಿನಲ್ಲಿಯೇ ಉರಿದು ಬೂದಿಯಾದರು.[೪೪] ಸುರಪುರದ ವೆಂಕಟಪ್ಪನಾಯಕ ದೀರ್ಘ ಹೋರಾಟದ ನಂತರ ಬ್ರಿಟಿಷರಿಗೆ ಸೆರೆಸಿಕ್ಕನು. ವೆಂಕಟಪ್ಪ ನಾಯಕನಿಗೆ ೪ ವರ್ಷಗಳವರೆಗೆ ದಿಗ್ಬಂದನ ಶಿಕ್ಷೆ ವಿಧಿಸಿ ದಿಗ್ಬಂದನ ಸ್ಥಳಕ್ಕೆ ಕರೆದುಕೊಂಡು ಹೋಗುತ್ತಿರುವಾಗ ಮರಣ ಹೊಂದಿದ. ನರುಗಂದದಲ್ಲಿ ಬಾಬಾಸಾಹೇಬ ಬ್ರಿಟಿಷರಿಗೆ ತೀವ್ರ ಪ್ರತಿರೋಧ ಒಡ್ಡಿದ ಸಮಯದಲ್ಲೇ ಕೃಷ್ಣಾಜಿಪಂತ ಮತ್ತು ಬನಿಯಾಬಾಪು ಎಂಬ ದ್ರೋಹಿಗಳು ಬ್ರಿಟಿಷರೊಡನೆ ಒಪ್ಪಂದ ಮಾಡಿಕೊಂಡು, ಬಾಬಾಸಾಹೇಬ ಸೆರೆಸಿಕ್ಕುವ ಹಾಗೆ ಮಾಡಿದರು. ಬಾಬಾಸಾಹೇಬನನ್ನು ಬೆಳಗಾವಿಯಲ್ಲಿ ಗಲ್ಲಿಗೇರಿಸಲಾಯಿತು. ಇದೇ ರೀತಿ, ಮುಂಡರಗಿ ಭೀಮರಾಯ ಮತ್ತು ಹಮ್ಮಿಗಿ ಕೆಂಚನಗೌಡರು, ಬ್ರಿಟಿಷರ ವಿರುದ್ಧ ಹೋರಾಡುತ್ತಲೇ ಕೊಪ್ಪಳ ಕೋಟೆಯಲ್ಲಿ ಹುತಾತ್ಮರಾದರು.

### ೩.೪. ೧೮೫೭ರ ಹೋರಾಟದ ಪರಿಣಾಮಗಳು

೧೮೫೭ರ ಕ್ರಾಂತಿಯಿಂದಾಗಿ ಬ್ರಿಟಿಷ್ ಆಡಳಿತ ಕಾಲದ ಭಾರತದ ಚರಿತ್ರೆಯ ಒಂದು ಶಕೆಯು ಕೊನೆಗೊಂಡು ಹೊಸ ಶಕೆಯ ಕಾಲಘಟ್ಟ ಎಂದು ಗುರುತಿಸಬಹುದಾಗಿದೆ. ಇದರೊಂದಿಗೆ ಬ್ರಿಟನ್ನಿನ ಆಡಳಿತ ವಿಧಾನದಲ್ಲಿ ಅತಿ ಪ್ರಮುಖ ಬದಲಾವಣೆಗಳಾದವಲ್ಲದೇ, ಭಾರತ ಸರ್ಕಾರ ನೀತಿಯಲ್ಲೂ ಬ್ರಿಟಿಷರ ಧೋರಣೆ ಬದಲಾಯಿತು. ೧೮೫೭ರ ಹೋರಾಟದ ಪರಿಣಾಮಗಳನ್ನು ಬ್ರಿಟಿಷರ ನೆಲೆಗಟ್ಟಿನಲ್ಲಿ ಹಾಗೂ ಭಾರತೀಯರ ನೆಲೆಗಟ್ಟಿನಲ್ಲಿ ನೋಡಬೇಕಾಗುತ್ತದೆ.

ಬ್ರಿಟಿಷರ ನೆಲೆಗಟ್ಟಿನಲ್ಲಿ ನೋಡಿದಾಗ, ೧೮೫೮ರ ಮಹಾರಾಣಿಯ ಘೋಷಣೆಯು ಭಾರತೀಯರ 'ಮ್ಯಾಗ್ನಕಾರ್ಟ್'ವಾಯಿತು. ಭಾರತದಲ್ಲಿ ಈಸ್ಟ್ ಇಂಡಿಯಾ ಕಂಪನಿಯ ಆಡಳಿತ ಅಂತ್ಯಗೊಂಡು, ಭಾರತದ ಆಡಳಿತವನ್ನು ಕಂಪನಿಯಿಂದ ರಾಣಿ ವಿಕ್ಟೋರಿಯಾಗೆ ವಹಿಸಿ ಕೊಡಲಾಯಿತು. ಭಾರತದ ಗವರ್ನರ್ ಜನರಲ್ ಇನ್ನು ಮುಂದೆ ವೈಸರಾಯ್ ಎನಿಸಿಕೊಂಡ.

ಭಾರತದ ಅರಸರ ಬಗ್ಗೆ ಬ್ರಿಟಿಷ್ ಸರಕಾರದ ನೀತಿಯಲ್ಲಿ ಮೃದು ಧೋರಣೆಯನ್ನು ಅನುಸರಿಸ ಲಾಯಿತು. ಅಂದರೆ ಭಾರತೀಯ ಅರಸರ ಸ್ಥಾನಮಾನಗಳಿಗೆ ಗೌರವ ಕೊಡುವುದಾಗಿಯೂ, ಸಾಮ್ರಾಜ್ಯ ವಿಸ್ತರಣಾ ನೀತಿಯನ್ನು ಕೈಬಿಡುವುದಾಗಿ ಒಪ್ಪಿಕೊಂಡಿತು.

ಭಾರತೀಯರ ನೆಲೆಗಟ್ಟಿನಲ್ಲಿ ನೋಡಿದಾಗ, ೧೮೫೭ರ ಹೋರಾಟದ ಆಯಾಮ ಮತ್ತು ಗಾತ್ರವನ್ನು ಪರಾಮರ್ಶಿಸಿದರೆ ಕ್ರಾಂತಿಯು ಬ್ರಿಟಿಷ್ ಸಾಮ್ರಾಜ್ಯದ ಆಡಳಿತದ ಬುಡವನ್ನೇ ಅಲುಗಾಡಿಸಿತು. ಮತ್ತು ಮುಂದೆ ಬ್ರಿಟಿಷರಿಗೆ ಎಚ್ಚರಿಕೆಯ ಗಂಟೆಯಾಗಿ ಪರಿಣಮಿಸಿತು. ಈ ಹೋರಾಟವು ಭಾರತೀಯರಲ್ಲಿ ಆತ್ಮವಿಶ್ವಾಸವನ್ನು ಮತ್ತು ರಾಷ್ಟ್ರೀಯತೆಯನ್ನು, ರಾಷ್ಟ್ರೀಯ ಭಾವನೆಗಳನ್ನು ಜಾಗೃತಗೊಳಿಸಲು ಕಾರಣ ವಾಯಿತು. ಈ ಹೋರಾಟದ ನಂತರ ಭಾರತ ಎನ್ನುವ ರಾಷ್ಟ್ರದ ಕಲ್ಪನೆ ಗಟ್ಟಿಯಾಯಿತು. ಶೋಷಣೆಯ

ವಿರುದ್ಧ ಹೋರಾಡುವ ಮನೋದಾರ್ಢ್ಯವನ್ನು ಪ್ರಥಮ ಬಾರಿಗೆ ಭಾರತೀಯರಲ್ಲಿ ತಂದು ಕೊಟ್ಟಿತು. ಮುಂದಿನ ದಿನಗಳಲ್ಲಿ ಭಾರತೀಯರು ರಾಷ್ಟ್ರೀಯ ಭಾವನೆಗಳನ್ನು ಬೆಳೆಸಿಕೊಂಡು, ಆಂಗ್ಲರ ವಿರುದ್ಧ ಸಂಘಟಿತರಾಗಿ ಹೋರಾಡಲು ಸಹಕಾರಿಯಾಯಿತು. ಕ್ರಾಂತಿಯು ಬ್ರಿಟಿಷರು ಮತ್ತು ಭಾರತೀಯರ ಮಧ್ಯೆ ಅತೀವ ದ್ವೇಷ, ಹಗೆತನ ಹೆಚ್ಚಿಸಿತಲ್ಲದೆ, ಭಾರತೀಯರಿಗೆ ನಮ್ಮ ನಿಜವಾದ ವೈರಿ ಯಾರು ಮತ್ತು ಅವರ ಸಾಮರ್ಥ್ಯವೇನು ಎನ್ನುವುದನ್ನು ತಿಳಿಸಿತು.

## ಕೊನೆಟಿಪ್ಪಣಿಗಳು

೧. ಎಡ್ವರ್ಡ್ ಥಾಮಸನ್, ಗ್ಯಾರೆಟ್ ಜೆ.ಟಿ., ಹಿಸ್ಟರಿ ಆಫ್ ಬ್ರಿಟಿಷ್ ರೂಲ್ ಇನ್ ಇಂಡಿಯ, ಪು. ೪೪೧.

೨. ಪಾರ್ಥಸಾರಥಿ ಕೆ.ಎಸ್., ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ, ಪು. ೪೬.

೩. ಚಾರ್ಲ್ಸ್ ಬಾಲ್, ಹಿಸ್ಟರಿ ಆಫ್ ದ ಇಂಡಿಯನ್ ಮ್ಯೂಟನಿ, ಪು. ೪೧೧.

೪. ಪೀಟರ್ ಹೀಸ್, ಇಂಡಿಯಾಸ್ ಫ್ರೀಡಂ ಸ್ಟ್ರಗಲ್, ಪು. ೨೭.

೫. ಅನಿಲ್ ಸಕ್ಸೇನಾ, ಎನ್‌ಸೈಕ್ಲೋಪೀಡಿಯಾ ಆಫ್ ಇಂಡಿಯನ್ ಹಿಸ್ಟರಿ, ಸಂಪುಟ-೨೪, ಪು ೧೯೬.

೬. ಥಾಮಸನ್, ಗ್ಯಾರೆಟ್, ರೈಸ್ ಅಂಡ್ ಫಾಲ್ ಆಫ್ ಬ್ರಿಟಿಷ್ ಇನ್ ಇಂಡಿಯ, ೧೮೫೭-೫೮, ಪು. ೪೬.

೭. ವೈಟ್, ಕಂಪ್ಲೀಟ್ ಹಿಸ್ಟರಿ ಆಫ್ ಗ್ರೇಟ್ ಸಿಪಾಯ್ ವಾರ್, ಪು. ೪೩.

೮. ತಾರಾಚಂದ್, ಹಿಸ್ಟರಿ ಆಫ್ ಫ್ರೀಡಂ ಮೂವ್‌ಮೆಂಟ್ ಇನ್ ಇಂಡಿಯ, ಸಂಪುಟ-೨, ಪು. ೪೩.

೯. ಜಾನ್ ಖೇ, ಎ ಹಿಸ್ಟರಿ ಆಫ್ ಸಿಪಾಯ್‌ವಾರ್ ಇನ್ ಇಂಡಿಯ, ೧೮೫೭-೫೮, ಪು. ೪೬.

೧೦. ತಾರಾಚಂದ್, ಹಿಸ್ಟರಿ ಆಫ್ ದ ಫ್ರೀಡಂ ಮೂವ್‌ಮೆಂಟ್ ಇನ್ ಇಂಡಿಯ, ಪು. ೪೦.

೧೧. ಅನಿಲ್ ಸಕ್ಸೇನಾ, ಎನ್‌ಸೈಕ್ಲೋಪೀಡಿಯಾ ಆಫ್ ಇಂಡಿಯನ್ ಹಿಸ್ಟರಿ, ಸಂಪುಟ-೨೪, ಪು. ೧೯೬.

೧೨. ಪರಿಣಿತ ಬಿ.ಆರ್, ಹಿಸ್ಟರಿ ಆಫ್ ಮಾಡ್ರನ್ ಇಂಡಿಯ, ಪು. ೬೪.

೧೩. ಪೂರ್ವೋಕ್ತ.

೧೪. ಪ್ರಕಾಶ್ ಚಂದರ್, ಎನ್‌ಸೈಕ್ಲೋಪೀಡಿಯಾ ಆಫ್ ಇಂಡಿಯನ್ ಹಿಸ್ಟರಿ, ಸಂಪುಟ-೪, ಪು. ೯೭೪.

೧೫. ಮುಜುಂದಾರ್ ಆರ್.ಸಿ., ಸಿಪಾಯ್ ಮ್ಯೂಟನಿ, ಪು. ೩೯೪.

೧೬. ಶಾರದಾ ಕೆ. (ಅನು), ೧೮೫೭ ನಾವು ಮರೆತಿರುವ ಮಹಾಯುದ್ಧ, ಪು. ೧೦.

೧೭. ಅಗರ್‌ವಾಲ್ ಆರ್.ಸಿ., ಕಾನ್‌ಸ್ಟ್ಯೂಷನಲ್ ಡೆವಲಪ್‌ಮೆಂಟ್ ಅಂಡ್ ನ್ಯಾಷನಲ್ ಮೂವ್‌ಮೆಂಟ್ ಇನ್ ಇಂಡಿಯ, ಪು. ೬೦.

೧೮. ಸೇನ್ ಎಸ್.ಎನ್, ಎಯ್ಟೀನ್ ಫಿಫ್ಟಿ ಸೆವೆನ್, ಪು. ೬೭.

೧೯. ಅಶೋಕ್ ಮೆಹತ, ೧೮೫೭ರ ಮಹಾಬಂಡಾಯ, ಪು. ೫೮.

೨೦. ಸಾವರ್ಕರ್ ವಿ.ಡಿ., ಬಾಬು ಕೃಷ್ಣಮೂರ್ತಿ (ಸಂಗ್ರಹನುವಾದ), ೧೮೫೭ ಭಾರತದ ಸ್ವಾತಂತ್ರ್ಯ ಸಂಗ್ರಾಮ, ಪು IV.

೨೧. ಪರಿಣಿತ ಬಿ.ಆರ್, ಹಿಸ್ಟರಿ ಆಫ್ ಮಾಡ್ರನ್ ಇಂಡಿಯ, ಪು. ೬೪-೬೫.

೨೨. ಹೋಮ್ಸ್ ಟಿ.ಆರ್., ಹಿಸ್ಟರಿ ಆಫ್ ದ ಇಂಡಿಯನ್ ಮ್ಯೂಟನಿ, ಪು. ೭೩.

೨೩. ರಾಮ್ಸೆ (ಸಂ.), ದ ಮೇಕಿಂಗ್ ಆಫ್ ಬ್ರಿಟಿಷ್ ಇಂಡಿಯ, ಪು. ೧೪೩.

೨೪. ಅನಿಲ್ ಸಕ್ಸೇನಾ, ಎನ್‌ಸೈಕ್ಲೋಪಿಡಿಯಾ ಆಫ್ ಇಂಡಿಯನ್ ಹಿಸ್ಟರಿ, ಸಂಪುಟ೨-೫, ಪು. ೨೮೮.

೨೫. ಮಾರ್ಕ್ಸ್ ಏಂಗೆಲ್ಸ್, ಪ್ರಥಮ ಭಾರತೀಯ ಸ್ವಾತಂತ್ರ್ಯ ಸಂಗ್ರಾಮ, ಪು. ೮.

೨೬. ಪೂರ್ವೋಕ್ತ, ಪು. ೧೩.

೨೭. ಪ್ರಕಾಶ್ ಚಂದರ್, ಎನ್‌ಸೈಕ್ಲೋಪಿಡಿಯಾ ಆಫ್ ಇಂಡಿಯನ್ ಹಿಸ್ಟರಿ, ಪು. ೪೧೯.

೨೮. ಪಾರ್ಥಸಾರಥಿ ಕೆ.ಎಸ್., ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ, ಪು. ೧೦೪.

೨೯. ತಂಬಂಡ ವಿಜಯ್ ಪೂಣಚ್ಚ (ಸಂ.), ಚರಿತ್ರೆ ವಿಶ್ವಕೋಶ-೪, ಪು. ೩೩.

೩೦. ಮೈಕಲ್ ಎಡ್ವರ್ಡ್ಸ್ (ಸಂ.), ಇಂಡಿಯನ್ ಮ್ಯೂಟನಿ ಡೈರಿ, ಪು. ೩೩.

೩೧. ಪಾರ್ಥಸಾರಥಿ ಕೆ.ಎಸ್., ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ, ಪು. ೪೪.

೩೨. ಲಕ್ಷ್ಮಣ್ ತೆಲಗಾವಿ, ಸ್ಥಳೀಯ ಚರಿತ್ರೆ, ಪು. ೨೬.

೩೩. ಕಾರ್ಲ್‌ಮಾರ್ಕ್ಸ್, ದ ರಿವೋಲ್ಟ್ ಇನ್ ದ ಇಂಡಿಯನ್ ಆರ್ಮೀ, ಆರ್ಟಿಕಲ್ ನ್ಯೂಯಾರ್ಕ್ ಡೈಲಿ ಟ್ರಿಬ್ಯೂನಲ್.

೩೪. ಎಡ್ವರ್ಡ್ ಥಾಮಸನ್, ಗ್ಯಾರೆಟ್ ಜೆ.ಟಿ., ಹಿಸ್ಟರಿ ಆಫ್ ಬ್ರಿಟಿಷ್ ರೂಲ್ ಇನ್ ಇಂಡಿಯ, ಪು. ೪೭.

೩೫. ಅಗರ್‌ವಾಲ್ ಆರ್.ಸಿ., ಕಾನ್‌ಸ್ಟ್ಯೂಷನಲ್ ಡೆವಲಪ್‌ಮೆಂಟ್ ಅಂಡ್ ನ್ಯಾಷನಲ್ ಮೂವ್‌ಮೆಂಟ್ ಇನ್ ಇಂಡಿಯ, ಪು. ೫೩.

೩೬. ಪ್ರೇಮ್‌ಕುಮಾರ್ ಬಿ.ಪಿ, ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ, ಪು. ೨೧.

೩೭. ಜೋಶಿ ಪಿ.ಎಸ್., ಗೋಲ್ಕರ್ ಎಸ್.ವಿ., ಹಿಸ್ಟರಿ ಆಫ್ ಮಾಡ್ರನ್ ಇಂಡಿಯ, ಪು. ೧೦೨.

೩೮. ಪ್ರತುಲ್ ಚಂದ್ರಗುಪ್ತ, ನಾನಾಸಾಹೇಬ ಅಂಡ್ ದ ರೈಸಿಂಗ್ ಅಟ್ ಕಾನ್ಪುರ್, ಪು. ೩೨.

೩೯. ಅನಿಲ್ ಸಕ್ಸೇನಾ, ಎನ್‌ಸೈಕ್ಲೋಪಿಡಿಯ ಆಫ್ ಇಂಡಿಯನ್ ಹಿಸ್ಟರಿ, ಸಂಪುಟ-೨೪, ಪು. ೨೦೫.

೪೦. ದಸ್ತಗೀರ್ ಎಂ, ರಾಷ್ಟ್ರೀಯ ಸ್ವಾತಂತ್ರ್ಯ ಸಂಗ್ರಾಮ, ಪು. ೫೭.

೪೧. ಸೂರ್ಯನಾಥ ಕಾಮತ್, ಕರ್ನಾಟಕದ ಸಂಕ್ಷಿಪ್ತ ಇತಿಹಾಸ, ಪು. ೨೬೧.

೪೨. ಪೂರ್ವೋಕ್ತ.

೪೪. ಬಾಬು ಕೃಷ್ಣಮೂರ್ತಿ (ಸಂಗ್ರಹನುವಾದ), ೧೮೫೭ ಭಾರತದ ಸ್ವಾತಂತ್ರ್ಯ ಸಂಗ್ರಾಮ, ಪು. ೨೬೬.

೪೫. ಕೃಷ್ಣರಾವ್ ಎಂ.ವಿ., ಕರ್ನಾಟಕ ಇತಿಹಾಸ ದರ್ಶನ, ಪು. ೩೬೪.

• • •

## ಅಧ್ಯಾಯ ೪

# ಮುಂಡರಗಿ ಪರಿಸರ

ಬ್ರಿಟಿಷ್ ಸಾಮ್ರಾಜ್ಯಶಾಹಿ ನೀತಿಯಿಂದ ಶೋಷಣೆಗೆ ಒಳಗಾದ ಸಂಸ್ಥಾನಿಕರು, ಜಮೀನುದಾರರು, ವ್ಯಾಪಾರಿಗಳು, ಕೃಷಿಕರು ಹಾಗೂ ಜನಸಾಮಾನ್ಯರು ಬ್ರಿಟಿಷ್ ಸರಕಾರದ ವಿರುದ್ಧ ಪ್ರತಿಭಟನೆ ನಡೆಸಿದರು. ಬ್ರಿಟಿಷರ ನೀತಿಯು ಉತ್ತರ ಭಾರತದಲ್ಲಿ ಮಾತ್ರವಲ್ಲದೇ ದಕ್ಷಿಣದ ಸಂಸ್ಥಾನಗಳ ಮೇಲೆಯೂ ಸಾಕಷ್ಟು ದುಷ್ಪರಿಣಾಮವನ್ನು ಬೀರಿದ್ದರಿಂದ ಇಲ್ಲಿಯೂ ಸಹ ವಿವಿಧ ವರ್ಗಗಳಿಂದ ಬ್ರಿಟಿಷರ ವಿರುದ್ಧ ಬಂಡಾಯಕ್ಕೆ ದಾರಿ ಮಾಡಿಕೊಟ್ಟಿತು. ಆ ಸಂದರ್ಭದಲ್ಲಿ ೧೮೫೭ನೇ ಹೋರಾಟದ ಪೂರ್ವದಲ್ಲಿಯೇ ಕರ್ನಾಟಕದಲ್ಲಿ ದೊಂಡೀಯವಾಘನ ದಂಗೆ (೧೮೦೦), ಸಿಂದಗಿ ಬಂಡಾಯ, ೧೮೨೪ರಲ್ಲಿ ಕಿತ್ತೂರು ಚೆನ್ನಮ್ಮಳ ಹೋರಾಟ, ೧೮೨೮ರಲ್ಲಿ ಸಂಗೊಳ್ಳಿ ರಾಯಣ್ಣನ ಬಂಡಾಯ, ೧೮೩೦-೩೧ರ ನಗರ ದಂಗೆ, ೧೮೩೪ರಲ್ಲಿ ಕೊಡಗು ಬಂಡಾಯ, ೧೮೪೧ರಲ್ಲಿ ಬಾದಾಮಿ ವಿಪ್ಲವಗಳು ಕಾಣಿಸಿಕೊಂಡು ಬ್ರಿಟಿಷ್ ವಿರೋಧಿ ಚಟುವಟಿಕೆಗಳಿಗೆ ಬಲ ನೀಡಿತ್ತು.[೧]

ಉತ್ತರ ಭಾರತದಲ್ಲಿ ಆರಂಭವಾದ ೧೮೫೭ರ ಹೋರಾಟದ ಪ್ರಭಾವ ದಕ್ಷಿಣ ಭಾರತಕ್ಕೂ ವ್ಯಾಪಿಸಿ, ಅನೇಕ ಸಂಸ್ಥಾನಿಕರು, ಸೈನಿಕರು, ನಾಯಕರು, ಸಾಮ್ರಾಜ್ಯಶಾಹಿ ವಿರುದ್ಧ ಹೋರಾಟಕ್ಕಿಳಿದರು. ಈ ರೀತಿಯ ಹೋರಾಟಕ್ಕಿಳಿದ ಸಂಸ್ಥಾನಗಳಲ್ಲಿ ಮುಂಡರಗಿ ಪ್ರದೇಶದ ಹೋರಾಟವು ಪ್ರಮುಖವಾಗಿದೆ. ಈ ಪ್ರದೇಶದ ಸಂಸ್ಥಾನಿಕರು, ನಾಡಗೌಡರು, ಸೈನಿಕರು ಹಾಗೂ ಜನಸಾಮಾನ್ಯರ ಹೋರಾಟ, ತ್ಯಾಗ, ಬಲಿದಾನಗಳು ಐತಿಹಾಸಿಕ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ.

## ೪.೧. ಚಾರಿತ್ರಿಕ ಹಿನ್ನೆಲೆ

ಚರಿತ್ರೆಯಲ್ಲಿ ತನ್ನದೇ ಆದ ಸ್ಥಾನಮಾನ ಮತ್ತು ಪ್ರಾಮುಖ್ಯತೆಯನ್ನು ಹೊಂದಿರುವ ಮುಂಡರಗಿಯು ಈ ಹಿಂದೆ ಅವಿಭಜಿತ ಧಾರವಾಡ ಜಿಲ್ಲೆಗೆ ಸೇರಿದ ಪ್ರದೇಶವಾಗಿತ್ತು. ಜಿಲ್ಲಾ ಪುನರ್ವಿಂಗಡಣೆಯ ಪರಿಣಾಮವಾಗಿ, ಧಾರವಾಡ ಜಿಲ್ಲೆಯನ್ನು ವಿಭಜಿಸಿದ ನಂತರ ಇಂದು ಮುಂಡರಗಿ ತಾಲೂಕು ಗದಗ ಜಿಲ್ಲೆಗೆ ಒಳಪಟ್ಟಿದ್ದು, ಗದಗ ಜಿಲ್ಲೆಯ ಅತ್ಯಂತ ಪ್ರಮುಖ ತಾಲೂಕು ಕೇಂದ್ರವಾಗಿದೆ. ಮುಂಡರಗಿಯು ಜಿಲ್ಲಾ ಕೇಂದ್ರವಾಗಿರುವ ಗದಗಿನಿಂದ ೩೬ ಕಿ.ಮೀ. ದೂರದಲ್ಲಿದ್ದು, ಕೊಪ್ಪಳ ಜಿಲ್ಲೆ ಹಾಗೂ ಬಳ್ಳಾರಿ ಜಿಲ್ಲೆಗಳ ಮಧ್ಯೆ ಕೇಂದ್ರೀಕೃತವಾಗಿದೆ.[೨] ಇಲ್ಲಿರುವ ಇತಿಹಾಸ ಪ್ರಸಿದ್ಧ ಕಪ್ಪತ್ತಕಲ್ಲುಗುಡ್ಡದ

ಪೂರ್ವಕ್ಕೆ ತುಂಗಭದ್ರ ನದಿಯು ಹರಿಯುತ್ತಿದ್ದು, ಈ ಭಾಗದ, ಈ ತಾಲೂಕಿನ ಶಿಂಗಟಾಲೂರು, ಹಮ್ಮಿಗಿ, ಕೊರ್ಲಹಳ್ಳಿ, ಬಿದರಹಳ್ಳಿ, ಹೆಸರೂರು ಮೊದಲಾದ ಗ್ರಾಮಗಳಿಗೆ ಈ ನದಿಯೇ ಜೀವದಾಯಿಯಾಗಿದೆ.

ಪ್ರಾಚೀನ ಕಾಲದಿಂದಲೂ ಪ್ರಸಿದ್ಧಿಯನ್ನು ಪಡೆದಿರುವ ಕಪ್ಪತ್ತಗುಡ್ಡವು ಯರಮಲೆಬೆಟ್ಟ, ದ್ರೋಣಗಿರಿ, ಕಪ್ಪತ್‌ಗಿರಿಗಳಿಂದ ಕೂಡಿಕೊಂಡಿದ್ದು ಯರಮಲೆ ಬೆಟ್ಟವು ಮುಂಡರಗಿ ತಾಲೂಕಿನ ಪೂರ್ವಕ್ಕಿದ್ದು, ಡಂಬಳದಿಂದ ಹಿರೇವಡ್ಡಟ್ಟಿಯವರೆಗೆ ಹಬ್ಬಿದೆ. ಪಶ್ಚಿಮ ದಿಕ್ಕಿನಲ್ಲಿರುವ ದ್ರೋಣಗಿರಿ ಬೆಟ್ಟವು ಮಹಾಲಿಂಗಪ್ಪನ ಗುಡಿಯಿಂದ ಗಂಗೀಭಾವಿಯವರೆಗಿದೆ. ಕಪ್ಪತ್‌ಗಿರಿಯು ಈ ಎರಡೂ ಗುಡ್ಡಗಳ ಮಧ್ಯದಲ್ಲಿದ್ದು, ಗಂಗೀಭಾವಿಯಿಂದ ತುಂಗಭದ್ರೆಯ ತೀರದಲ್ಲಿರುವ ಸಿಂಗಟಾಲೂರವರೆಗೆ ಹಬ್ಬಿದೆ.[೩]

ಮುಂಡರಗಿ ತಾಲ್ಲೂಕಿನ ಅನೇಕ ಗ್ರಾಮಗಳಲ್ಲಿ ಪ್ರಾಚೀನ ಅವಶೇಷಗಳು ದೊರೆತಿವೆ. ಧಾರವಾಡ ಜಿಲ್ಲೆಯನ್ನೊಳಗೊಂಡ ದಕ್ಷಿಣ ಭಾರತದ ಪ್ರಸ್ಥಭೂಮಿಯನ್ನು ಅತ್ಯಂತ ಪ್ರಾಚೀನವೆಂದೂ, ಆದಿಕಲ್ಪ ಯುಗಕ್ಕೆ ಸೇರಿದ್ದೆಂದೂ ಸುಮಾರು ಮೂರುನೂರು ಸಾವಿರ ವರ್ಷಗಳ ಹಿಂದಿನದಿರಬಹುದೆಂದು ಭೂವಿಜ್ಞಾನಿಗಳು ಅಭಿಪ್ರಾಯಪಟ್ಟಿದ್ದಾರೆ. ಮೊದಲು ಸಾಗರದ ಭಾಗವಾಗಿದ್ದ ಈ ಪ್ರದೇಶ ಸಮುದ್ರ ನೀರಿನ ಹಿಂಜರಿಕೆಯಿಂದ ಮೇಲೆದ್ದು ಕಾಲಾಂತರದಲ್ಲಿ ಹಲವಾರು ಬದಲಾವಣೆಗಳನ್ನು ಹೊಂದುತ್ತಾ, ಇಂದಿನ ಈ ಸ್ಥಿತಿಗೆ ಬಂದಿದೆ. ಪುರಾತನ ಶಿಲಾಯುಗದ ಕಾಲದಿಂದಲೂ ಈ ಭಾಗದಲ್ಲಿ ಮತ್ಸ್ಯ, ನಾಗ, ಅಭೀಶರ, ಮಹೀಷ, ಕೋಲ, ಮುಂಡ, ಅಜ, ವಾನರ ಮೊದಲಾದ ಆದಿವಾಸಿಗಳು ಈ ಭಾಗದಲ್ಲಿ ವಾಸಿಸುತ್ತಿದ್ದುದಾಗಿ ತಿಳಿದುಬಂದಿದೆ. ಹೀಗೆ ಮುಂಡರಗಿ ಎಂಬ ಗ್ರಾಮವು ಮುಂಡರೆಂಬ ಆದಿವಾಸಿ ಜನಾಂಗದ ಮೂಲಕ ಬಂದಿರಬೇಕೆಂದು ಗ್ರಾಮನಾಮ ಶಾಸ್ತ್ರಜ್ಞರು ಅಭಿಪ್ರಾಯಪಟ್ಟಿದ್ದಾರೆ.[೪]

ಸಾಮಾನ್ಯವಾಗಿ ಗ್ರಾಮನಾಮಗಳು ಜನಾಂಗವಾಚಿ, ನಿಸರ್ಗವಾಚಿ, ವ್ಯಕ್ತಿವಾಚಿ, ಆದರ್ಶವಾಚಿ ಎಂದು ಗುರುತಿಸಲ್ಪಟ್ಟಿರುತ್ತವೆ. ಮುಂಡರಗಿ ನಾಮದ ಬಗ್ಗೆಯೂ ಹಲವಾರು ಈ ರೀತಿ ಅಭಿಪ್ರಾಯಗಳು, ವ್ಯಾಖ್ಯಾನಗಳು ಹಾಗೂ ವಿಶ್ಲೇಷಣೆಗಳು ವ್ಯಕ್ತವಾಗಿವೆ. ಒಂದು ಅಭಿಪ್ರಾಯದಂತೆ, ಮುಂಡರಗಿ ಎನ್ನುವ ಹೆಸರು ಸಂಸ್ಕೃತ ಶಬ್ದಾರ್ಥದ ಪ್ರಕಾರ, ಮುಂಡರಗಿ ಗುಡ್ಡದ ಮೇಲೆ ಮೃಡ-ಸಿದ್ದೇಶ್ವರ ಮಲ್ಲಿಕಾರ್ಜುನನ ದೇವಾಲಯವಿದೆ. ಈ ಮೃಡ ಮತ್ತು ಗಿರಿ ಎನ್ನುವುದು ಕ್ರಮೇಣ ಮುಂಡರಗಿ ಆಗಿರಬೇಕು ಎನ್ನುವುದು ಸಂಸ್ಕೃತ ನಿಷ್ಕರ ನಿಲುವಾಗಿದೆ.[೫] ಇನ್ನೊಂದು ಅಭಿಪ್ರಾಯದಂತೆ, ಜನಪದರು ಕರೆದು ಹಾಗೆಯೇ ಮುಂದುವರೆಸಿಕೊಂಡು ಬಂದಿರುವಂತೆ, ಮುಂಡರಗಿಯ ಗುಡ್ಡವು ಬೋಳಾಗಿದ್ದು, ಜನರು ಬೋಳಾದ ಗುಡ್ಡವನ್ನು ಮುಡಗಿರಿ ಎಂದು ಕರೆದಿರಬೇಕು. ಕ್ರಮೇಣ ಜನಪದರ ಬಾಯಲ್ಲಿ ಮುಡಗಿರಿ ಎನ್ನುವುದು ಮುಂಡರಗಿ ಆಗಿರಬಹುದೆಂದು ಅಭಿಪ್ರಾಯ ಪಟ್ಟಿದ್ದಾರೆ.

ಗ್ರಾಮ ಶಾಸ್ತ್ರಜ್ಞರ ಪ್ರಕಾರ, ಮುಂಡರಗಿ ಎನ್ನುವುದು ಜನಾಂಗವಾಚಿಯಾಗಿದ್ದು, ಪುರಾತನ ಕಾಲದಿಂದಲೂ ಈ ಭಾಗದಲ್ಲಿ ಮಹೀಷ, ಕೋಲ, ಮುಂಡ ಎನ್ನುವ ಆದಿವಾಸಿಗಳು ವಾಸಿಸುತ್ತಿದ್ದುದರಿಂದ 'ಮುಂಡ' ಎಂಬ ಮೂಲನಿವಾಸಿಗಳಿಂದ ಈ ಹೆಸರು ಮುಂಡ+ರ+ಗೈ = ಮುಂಡರಗೈ, ಮುಂಡರಗಿ

ಆಗಿರಬಹುದು ಎನ್ನುವ ಅಭಿಪ್ರಾಯಕ್ಕೆ ಬಂದಿದ್ದಾರೆ.[೬] ಈ ರೀತಿ ಮುಂಡರಗಿ ಮೂಲನಾಮದ ಬಗ್ಗೆ ವಿಭಿನ್ನ ಅಭಿಪ್ರಾಯಗಳಿದ್ದು, ಸ್ಪಷ್ಟವಾದ ಯಾವುದೇ ಆಧಾರಗಳಿಲ್ಲದಿರುವುದರಿಂದ, ಈ ಮುಂಡರಗಿ ನಾಮದ ಬಗೆಗೆ ಆಳವಾದ ಅಧ್ಯಯನ ಮತ್ತು ಸಂಶೋಧನೆಗಳು ಆಗುವ ಅವಶ್ಯವಿದ್ದು, ಚರಿತ್ರೆಕಾರರಿಗೆ ಹಾಗೂ ಸಂಶೋಧಕರಿಂದ ಹೊಸ ವಿಚಾರಗಳು ಬೆಳಕಿಗೆ ಬರಬೇಕಾಗಿದೆ.

ಪ್ರಾಚೀನ ಕಾಲದಲ್ಲಿ ರಾಜಕೀಯ ಸ್ಥಿತಿಗತಿಗಳಿಗೆ ಅನುಗುಣವಾಗಿ ಹಾಗೂ ಆಡಳಿತಾತ್ಮಕ ಅನುಕೂಲ ದೃಷ್ಟಿಯಿಂದ ಒಂದು ಭೌಗೋಳಿಕ ವಿಸ್ತಾರವಾಗಿದ್ದ ರಾಜ್ಯಗಳನ್ನು ಮೂರು ಆಡಳಿತ ಭಾಗಗಳನ್ನಾಗಿ ವಿಂಗಡಿಸಿದ್ದರು. ಅವುಗಳನ್ನು ಮಂಡಲ, ನಾಡು, ಊರು ಎಂದು ಕರೆಯಲಾಗುತ್ತಿತ್ತು. ರಾಜಧಾನಿಯ ಸುತ್ತಮುತ್ತಲಿನ ಭಾಗವು ರಾಜನ ನೇರ ಆಡಳಿತಕ್ಕೆ ಒಳಪಟ್ಟಿದ್ದು, ರಾಜನೇ ನೇರವಾಗಿ ಆಡಳಿತದ ಮುಖ್ಯಸ್ಥನಾಗಿರುತ್ತಿದ್ದನು. ಉಳಿದ ಭಾಗವನ್ನು ಮಂಡಲಗಳೆಂದು ವಿಂಗಡಿಸಿ ಒಂದೊಂದು ಮಂಡಲಕ್ಕೂ ಮಂಡಲೇಶ್ವರನನ್ನು ನೇಮಿಸಲಾಗುತ್ತಿತ್ತು. ಪ್ರತಿಯೊಂದು ಮಂಡಲವನ್ನು ನಾಡುಗಳನ್ನಾಗಿ ವಿಭಜಿಸಿ ಆಯಾ ನಾಡಿಗೆ ರಾಜನ ಪ್ರತಿನಿಧಿಯಾಗಿ ನಾಡಗೌಡರನ್ನು ನೇಮಿಸಲಾಗುತ್ತಿತ್ತು.[೭]

ರಾಷ್ಟ್ರಕೂಟರ ಚಕ್ರವರ್ತಿ ಅಮೋಘವರ್ಷ ನೃಪತುಂಗ, ಎರಡನೆಯ ಕೃಷ್ಣರು ರಾಜ್ಯವಾಳುತ್ತಿದ್ದಾಗ ಮಾಸೆಯವಾಡಿ ೧೪೦ ಎಂಬುದು ಒಂದು ಭೌಗೋಳಿಕ ವಿಭಾಗವಾಗಿದ್ದು ಅದರಲ್ಲಿ ೧೪೦ ಗ್ರಾಮಗಳು ಸೇರಿದ್ದವು. ಮುಂಡರಗಿ ನಾಡು ಆ ಕಾಲದ ಕಲ್ಯಾಣಿ ಚಾಲುಕ್ಯರ ಆಡಳಿತಕ್ಕೆ ಒಳಪಟ್ಟು ಮಾಸೆಯವಾಡಿ ೧೪೦ ಎಂದು ಕರೆಯಲಾಗುತ್ತಿತ್ತು. ಈಗಿನ ಮುಂಡರಗಿ ತಾಲ್ಲೂಕಿನ ಪ್ರದೇಶಗಳು, ಗದಗಿನ ಲಕ್ಕುಂಡಿ ಮತ್ತು ಅದರ ಸುತ್ತಮುತ್ತಲಿನ ಪ್ರದೇಶಗಳು, ಹಾವೇರಿ ತಾಲ್ಲೂಕಿನ ವರದ ನದಿಯ ಉತ್ತರಪೂರ್ವ ಭಾಗ, ಗದಗ ತಾಲ್ಲೂಕಿನ ಪೂರ್ವಭಾಗಗಳನ್ನು ಒಳಗೊಂಡಂತೆ ಸುತ್ತಮುತ್ತಲಿನ ಪ್ರದೇಶಗಳು 'ಮಾಸೇವಾಡಿ' ನಾಡಿನಲ್ಲಿ ಸೇರಿದ್ದವು. ಮಾಸೆವಾಡಿ ೧೪೦ ಎಂಬುದು ಭೌಗೋಳಿಕ ವಿಭಾಗವಾಗಿದ್ದು, ೧೪೦ ಗ್ರಾಮಗಳು ಇದರ ವ್ಯಾಪ್ತಿಗೆ ಸೇರಿದ್ದವು ಎನ್ನುವುದನ್ನು ಡಂಬಳದ ಶಾಸನವೊಂದು ತಿಳಿಯಪಡಿಸುತ್ತದೆ.[೮] ಕ್ರಿ.ಶ. ೧೨ನೆಯ ಶತಮಾನದ ಈ ಡಂಬಳ ಶಾಸನದಲ್ಲಿ ಮಾಸೆವಾಡಿ ನಾಡನ್ನು ಕುರಿತು,

'ಶ್ರೀ ಕುಂತಳ ವಿಷಯದ ದಕ್ಷಿಣ ಗಂಗಾ ನದಿಯೋತ್ತರ
ತೀರಂ ಬೀಡಿದೊರ್ಪ್ಪುತ್ತಿರ್ಪ ಮಾಸವಾಡಿ ನಾಡದಂ......'

'ಶ್ರೀ ಮತ್ಕುಂತಳ ಭೂಮಿ ಕಾಮಿನಿಯ
ವಕ್ತ್ರಾದರ್ಶಮಂ ಮೋತ್ತು
ಸದ್ಧಾಮಂ ಶೋಭೆಗೆ ಮಾಸವಾಡಿಯಸಗುಂ
ನಾಡದಂತದಂ.....'

''ಬೆಳೆಸಲ್ಲದಲ್ಲರಿಸಿನ ಮೆಣಸು ಸರಾಜಾ

ನವಿಕ್ಷು ವೃಕ್ಷಮವೆಲ್ಲಂ ಹಲಸೀಳೆ ಮಾಮರ....."

"ಸತುಕುಲರ್ ಸಪುಣ್ಯ ಸ್ವರೂಪಿಗಳು

........... ನರರೆಲ್ಲರಂ ಅಲ್ಲಿ ...........

ಪ್ರಿಯದಿಂ ಚಕ್ರಿಯ ಮೆಚ್ಚೆ ವಿಕ್ರಮದ ಪೆತ್ತಂ

ರೂಢಿಯಂ ಮಾಸವಾಡಿಯ .............."

ಈ ಶಾಸನದ ಪ್ರಕಾರ ಮಾಸೆವಾಡಿ ನಾಡು ಕುಂತಲ ವಿಷಯದಲ್ಲಿತ್ತಲ್ಲದೇ ದಕ್ಷಿಣ ಗಂಗೆಯೆಂದು ಪ್ರಸಿದ್ಧವಾಗಿದ್ದ ತುಂಗಭದ್ರೆಯ ಉತ್ತರಕ್ಕಿದ್ದುದೆಂದು, ಇಂತಹ ನಾಡಿನ, ಮಣ್ಣಿನಲ್ಲಿ ಹುಟ್ಟಿ ಬೆಳೆದ ಮಕ್ಕಳೇನು ಸಾಮಾನ್ಯರೇ ಎಂಬ ಅರ್ಥವನ್ನು ನೀಡುತ್ತದೆ.[೯] ಈ ರೀತಿ ಪ್ರಾಚೀನ ಕಾಲದಿಂದಲೂ ಮುಂಡರಗಿ ನಾಡು ತನ್ನದೇ ಆದ ಸ್ಥಾನ, ಹಿರಿಮೆಗಳನ್ನು ಗಳಿಸಿಕೊಂಡು ಬಂದಿದೆ.

**೪.೨. ಆರಂಭಿಕ ಹೋರಾಟಗಳು**

ಮುಂಡರಗಿಯು ಭೀಮರಾಯರ ಹೋರಾಟಕ್ಕಿಂತಲೂ ಮೊದಲು ಬ್ರಿಟಿಷ್ ಸಾಮ್ರಾಜ್ಯಶಾಹಿ ಧೋರಣೆಯನ್ನು ವಿರೋಧಿಸಿತ್ತು. ಆಗ ಬ್ರಿಟಿಷರ ವಿರುದ್ಧ ಹೋರಾಡಿ ಜನಜಾಗೃತಿ ಮೂಡಿಸಿದವರೆಂದರೆ ಡಂಬಳದ ಶ್ರೀನಿವಾಸ ವೆಂಕಟಾದ್ರಿ ಬಹಾದ್ದೂರ್ ದೇಸಾಯಿಯವರು ಹಾಗೂ ಕೊಪ್ಪಳದ ವೀರಪ್ಪ ದೇಸಾಯಿಯವರು.[೧೦]

ಟಿಪ್ಪುಸುಲ್ತಾನ ಬ್ರಿಟಿಷರ ವಿರುದ್ಧ ನಾಲ್ಕನೇ ಮೈಸೂರು ಯುದ್ಧದಲ್ಲಿ ಹೋರಾಡುತ್ತ ೧೭೯೯ರಲ್ಲಿ ಮರಣ ಹೊಂದಿದ ನಂತರ, ಅವನ ಬಂಧನದಲ್ಲಿದ್ದ ಧೊಂಡೋಜಿವಾಘನು ಬಿಡುಗಡೆ ಹೊಂದಿದ. ಹೀಗೆ ಬಿಡುಗಡೆ ಆದ ಧೋಂಡೋಜಿವಾಘನು ಶಿವಮೊಗ್ಗ, ಸೊರಬ ಮೊದಲಾದ ಭಾಗಗಳನ್ನು ಗೆದ್ದು ಸ್ವತಂತ್ರನೆಂದು ಘೋಷಿಸಿಕೊಂಡನು ಹಾಗೂ ಮರಾಠರ ಪ್ರದೇಶಗಳನ್ನು ಒಳಗೊಂಡಂತೆ ಅನೇಕ ಪ್ರದೇಶಗಳಲ್ಲಿ ಲೂಟಿ, ಸುಲಿಗೆ ಆರಂಭಿಸಿದ. ಹೀಗಾಗಿ ಬ್ರಿಟಿಷರು ಮರಾಠರೊಡನೆ ಒಪ್ಪಂದ ಮಾಡಿಕೊಂಡು ಧೊಂಡೋಜಿವಾಘನನ್ನು ಸೆರೆಹಿಡಿಯಲು ಮುಂದಾದರು. ಆಗ ಧೊಂಡೋಜಿವಾಘನು ಮುಂಡರಗಿ ನಾಡಿನ ಡಂಬಳದ ದೇಸಾಯಿಯಾಗಿದ್ದ ಶ್ರೀನಿವಾಸ ವೆಂಕಟಾದ್ರಿ ಬಹಾದ್ದೂರ ದೇಸಾಯಿಯವರ ಆಶ್ರಯ ಕೋರಿ ಡಂಬಳ ಕೋಟೆಗೆ ಬಂದ. ಆಗ ಡಂಬಳದ ದೇಸಾಯಿಯವರು ಧೊಂಡೋಜಿವಾಘನಿಗೂ ಅವನೊಂದಿಗೆ ಬಂದ ಆರುಸಾವಿರ ಅಶ್ವದಳಕ್ಕೂ ಕ್ರಿ.ಶ. ೧೮೦೦ ಎಪ್ರಿಲ್ ೨೮ರಂದು ಆಶ್ರಯ ಕೊಟ್ಟರು.[೧೧] ಆದರೆ ದೇಸಾಯಿಯವರು ವಾಘನಿಗೆ ಆಶ್ರಯ ನೀಡಿದ್ದನ್ನು ಸಹಿಸದ ಬ್ರಿಟಿಷರು ದೇಸಾಯಿಯವರ ಮೇಲೆ ದಾಳಿಗೆ ಮುಂದಾದರು. ಆಗ ಧೊಂಡೋಜಿವಾಘನು, ಬ್ರಿಟಿಷರನ್ನು ಎದುರಿಸುವುದು ಸುಲಭ ಸಾಧ್ಯವಲ್ಲವೆಂದೂ ಮತ್ತು ತನಗೆ ಆಶ್ರಯ ಕೊಟ್ಟ ದೇಸಾಯಿಯವರಿಗೆ ತನ್ನಿಂದಾಗಿ ತೊಂದರೆ ಆಗಬಾರದೆಂದು ಬಯಸಿ, ಡಂಬಳ ಕೋಟೆಯನ್ನು ತೊರೆದು ತನ್ನ ಸೈನಿಕರೊಂದಿಗೆ ಅಣ್ಣಿಗೇರಿ ಪ್ರದೇಶಕ್ಕೆ ಮತ್ತು ಮುಂದೆ ಕೊಪ್ಪಳದ ಕಡೆ ಹೊರಟು ಹೋದನು.

ಆದರೆ, ಬ್ರಿಟಿಷ್ ಅಧಿಕಾರಿ ಅರ್ಥರ್ ವೆಲ್ಲೆಸ್ಲಿಯು ವಾಘನಿಗೆ ಆಶ್ರಯ ಕೊಟ್ಟಿದ್ದ ಡಂಬಳದ ದೇಸಾಯಿಯವರನ್ನು ಶಿಕ್ಷಿಸಲು ೨೬ ಜುಲೈ ೧೮೦೦ರಂದು ಡಂಬಳದ ಕೋಟೆಗೆ ಮುತ್ತಿಗೆ ಹಾಕಿ,

ಒಂದು ತಾಸಿನೊಳಗೆ ದೇಸಾಯಿಯು ಶರಣಾಗಿ ಕೋಟೆಯನ್ನು ತೆರವು ಮಾಡಿ, ತನಗೆ ಒಪ್ಪಿಸಬೇಕೆಂದು ಆದೇಶ ಮಾಡಿದನು. ಆದರೆ ಸ್ವಾಭಿಮಾನಿಯಾದ ಡಂಬಳದ ದೇಸಾಯಿಯವರು ಬ್ರಿಟಿಷ್ ಅಧಿಕಾರಿ ವೆಲ್ಲೆಸ್ಲಿಯ ಆದೇಶವನ್ನು ತಿರಸ್ಕರಿಸಿ, ಕೋಟೆಯೊಳಗಿದ್ದ ಕೇವಲ ಆರುಸಾವಿರ ಸೈನಿಕರೊಡನೆ ಯುದ್ಧಕ್ಕೆ ಸನ್ನದ್ಧರಾದರು. ಆ ಸಂದರ್ಭದಲ್ಲಿ ಬ್ರಿಟಿಷ್ ಮತ್ತು ಮರಾಠ ಸೈನ್ಯಗಳು ಡಂಬಳದ ಕೋಟೆಯ ಮಹಾದ್ವಾರಗಳನ್ನು ಒಡೆಯಲು ಪ್ರಯತ್ನಿಸಿ ವಿಫಲರಾದರು. ಕೊನೆಗೆ ಮರಾಠಿ ಸೈನಿಕರು ಏಣಿಗಳ ಮೂಲಕ ಕೋಟೆಯ ಗೋಡೆ ಏರಿ ಒಳಗಿಳಿದು, ದಾಳಿ ಆರಂಭಿಸಿದರು. ಹೀಗೆ ಕೋಟೆಯ ಒಳಭಾಗದಲ್ಲಿ ಮರಾಠರ ದಾಳಿಗೂ, ಕೋಟೆಯ ಹೊರಭಾಗದಲ್ಲಿ ಬ್ರಿಟಿಷರ ದಾಳಿಗೆ ಸಿಕ್ಕ ದೇಸಾಯಿಯ ಸೈನ್ಯ ದಾಳಿ ಎದುರಿಸಲಾರದೆ ಶರಣಾಗತೊಡಗಿದರು. ಕೊನೆಗೆ ದೇಸಾಯಿಯವರು ಶರಣಾಗಿ ಸೆರೆಸಿಕ್ಕರು. ಸೆರೆಹಿಡಿಯಲ್ಪಟ್ಟ ದೇಸಾಯಿಯವರನ್ನು ಅರ್ಥರ್ ವೆಲ್ಲೆಸ್ಲಿಯು, ಸೈನಿಕ ನ್ಯಾಯಾಲಯಕ್ಕೆ ಹಾಜರುಪಡಿಸದೇ ಹಾಗೂ ವಿಚಾರಣೆಗೂ ಒಳಪಡಿಸದೇ ಆತುರದಿಂದ ಸ್ಟೀವನ್‌ಸನ್ ಸಮ್ಮುಖದಲ್ಲಿ ದೇಸಾಯಿಯವರನ್ನು ಗಲ್ಲಿಗೇರಿಸಲಾಯಿತು. ಹೀಗೆ ಡಂಬಳದ ದೇಸಾಯಿಯವರು ಸ್ವಾಭಿಮಾನಕ್ಕಾಗಿ ಬ್ರಿಟಿಷರ ವಿರುದ್ಧ ಹೋರಾಡಿ, ಮುಂಡರಗಿ ನಾಡಿನ ಸ್ವಾತಂತ್ರ್ಯಕ್ಕಾಗಿ ಹುತಾತ್ಮರಾದ ಪ್ರಪ್ರಥಮ ವ್ಯಕ್ತಿಯಾದರು.[೧೨]

ಮುಂಡರಗಿ ಪ್ರದೇಶದ ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಂಡು ಪ್ರಾಣತ್ಯಾಗ ಮಾಡಿದ ಮತ್ತೊಬ್ಬ ವ್ಯಕ್ತಿ ಕೊಪ್ಪಳ ಭಾಗದ ಜಮೀನುದಾರ ವೀರಪ್ಪ ದೇಸಾಯಿ. ಟಿಪ್ಪುಸುಲ್ತಾನನ ಮರಣದ ನಂತರ ಶ್ರೀರಂಗಪಟ್ಟಣದ ಒಪ್ಪಂದದಂತೆ, ಮೈಸೂರು ರಾಜ್ಯವನ್ನು ನಾಲ್ಕು ಭಾಗಗಳಾಗಿ ವಿಂಗಡಿಸಿದ ಬ್ರಿಟಿಷರು ತಮಗೆ ಅನುಕೂಲವಾಗುವ ರೀತಿಯಲ್ಲಿ ಪ್ರದೇಶಗಳನ್ನು ಮರಾಠರಿಗೂ, ಹೈದರಾಬಾದಿನ ನಿಜಾಮನಿಗೂ, ಮೈಸೂರಿನ ಒಡೆಯರಿಗೂ ಹಾಗೂ ತಮಗೂ ಹಂಚಿಕೊಂಡರು. ಈ ಅನಿರೀಕ್ಷಿತ ರಾಜಕೀಯ ಬೆಳವಣಿಗೆಗಳು ಹಾಗೂ ಬ್ರಿಟಿಷರ ನೀತಿಯು ಜಮೀನುದಾರ ವೀರಪ್ಪ ದೇಸಾಯಿಯವರು ಬ್ರಿಟಿಷರ ವಿರುದ್ಧ ಹೋರಾಟ ಮಾಡಲು ಕಾರಣವಾಯಿತು. ಟಿಪ್ಪುವಿನ ಮರಣದ ನಂತರ ಬ್ರಿಟಿಷರು ಕೊಪ್ಪಳದ ಭಾಗಗಳನ್ನು ಹೈದರಾಬಾದಿನ ನಿಜಾಮನ ವಶಕ್ಕೆ ಒಪ್ಪಿಸಿದರು. ಹೀಗೆ ಕೊಪ್ಪಳದ ಭಾಗಗಳನ್ನು ನಿಜಾಮನಿಗೆ ನೀಡಿದ ವಿಚಾರ ವೀರಪ್ಪ ದೇಸಾಯಿ ಮತ್ತು ಈ ಭಾಗದ ಜನರಿಗೆ ಸರಿಕಾಣದೇ ಅವರಲ್ಲಿ ಒಂದು ರೀತಿಯ ಪರಾಧೀನರಾದ ಭಾವನೆ ವ್ಯಕ್ತವಾಯಿತು. ಇದನ್ನು ಸಹಿಸದ ವೀರಪ್ಪ ದೇಸಾಯಿ ಬಂಡೆದ್ದು, ಕೊಪ್ಪಳ ಹಾಗೂ ಬಹಾದ್ದೂರ ಬಂಡೆ ಕೋಟೆಗಳನ್ನು ವಶಪಡಿಸಿಕೊಂಡು ಸ್ವತಂತ್ರನೆಂದು ಘೋಷಿಸಿ ಕೊಂಡರು.[೧೩] ಈ ಅನಿರೀಕ್ಷಿತ ಘಟನೆಯು ಬ್ರಿಟಿಷರಿಗೆ ಅಘಾತವುಂಟು ಮಾಡಿತು. ಏಕೆಂದರೆ ವೀರಪ್ಪ ದೇಸಾಯಿ ಶೂರನಾಗಿರುವುದರ ಜೊತೆಗೆ, ಕೊಪ್ಪಳದ ಸುತ್ತಮುತ್ತಲಿನ ದೇಸಾಯಿಗಳಾದ ಹನಕನಹಳ್ಳಿ ದೇಸಾಯಿಗಳು, ಕಲಕೇರಿ ದೇಸಾಯಿ, ತಿಪ್ಪಾಪೂರ ದೇಸಾಯಿಗಳು ಇವರ ಸಂಬಂಧಿಕ ರಾಗಿದ್ದರು. ಕೊಪ್ಪಳ ಮತ್ತು ಬಹಾದ್ದೂರಬಂಡೆ ಕೋಟೆಗಳು ಬಲಿಷ್ಠವಾಗಿದ್ದು, ಅವುಗಳನ್ನು ವಶಪಡಿಸಿಕೊಳ್ಳುವುದು ಸುಲಭವಾಗಿರಲಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಬ್ರಿಟಿಷರು ವೀರಪ್ಪ ದೇಸಾಯಿಯವರ ಸಾಮರ್ಥ್ಯ ಅರಿತು, ಇಲ್ಲಿನ ಬ್ರಿಟಿಷ್ ಸೈನಿಕರನ್ನೇ ಅವಲಂಬಿಸದೆ, ಸಿಕಂದರಾಬಾದಿನಿಂದ ವಿಶೇಷ ಸೈನ್ಯಪಡೆಯನ್ನು ತರಿಸಿಕೊಂಡು, ಮೇಜರ್ ಡೋವಿಟನ್‌ನ ನೇತೃತ್ವದಲ್ಲಿ ಅಶ್ವದಳ, ಬಟಾಲಿಯನ್‌ಗಳ ಪದಾತಿ ದಳ, ಭಾರೀ ತೂಕದ ತೋಪುಗಳು, ಗುಂಡುಗಳ ಮೂಲಕ ೨೩ ಮೇ, ೧೮೧೯ರಂದು ಕೋಟೆಯ ಮೇಲೆ

ದಾಳಿ ಮಾಡಿದರು. ಕೆಲವೇ ಸೈನಿಕರೊಡನೆ ಹೋರಾಟಕ್ಕಿಳಿದಿದ್ದ ದೇಸಾಯಿಗೆ ಬ್ರಿಟಿಷರ ತೋಪುಗಳ ದಾಳಿಯನ್ನು ತಡೆಯಲು ಸಾಧ್ಯವಾಗಲಿಲ್ಲ. ಕೋಟೆಯ ರಕ್ಷಣೆಗೆ ವೀರಪ್ಪ ದೇಸಾಯಿ ಮಾಡಿದ ಎಲ್ಲ ಪ್ರಯತ್ನಗಳು ವಿಫಲವಾಗಿ, ದೇಸಾಯಿ ಬ್ರಿಟಿಷರಿಗೆ ಶರಣಾದರು. ಸೆರೆಸಿಕ್ಕ ದೇಸಾಯಿಯವರನ್ನು ಬ್ರಿಟಿಷರು ಏನು ಮಾಡಿದರು ಎನ್ನುವುದರ ಬಗ್ಗೆ ಖಚಿತ ಮಾಹಿತಿ ತಿಳಿದುಬಂದಿಲ್ಲ.[೧೪]

ಈ ರೀತಿ ಡಂಬಳದ ಶ್ರೀನಿವಾಸ ವೆಂಕಟಾದ್ರಿ ಬಹಾದ್ದೂರ ದೇಸಾಯಿ ಹಾಗೂ ಕೊಪ್ಪಳದ ಜಮೀನುದಾರ ವೀರಪ್ಪ ದೇಸಾಯಿಯವರ ಹೋರಾಟವನ್ನು ನೋಡಿದಾಗ, ಮುಂಡರಗಿ ನಾಡು ೧೯ನೇ ಶತಮಾನದ ಆರಂಭದಲ್ಲಿಯೇ ಸ್ವಾರ್ಥ, ಸ್ವಹಿತಾಸಕ್ತಿಗಳಿಗೆ ಒಳಗಾಗದೆ ಆತ್ಮಾಭಿಮಾನದಿಂದ ಬ್ರಿಟಿಷರ ವಿರುದ್ಧ ಹೋರಾಟ ಮಾಡಿತ್ತು. ಈ ಆರಂಭಿಕ ಹೋರಾಟಗಳು ಮುಂಡರಗಿ ಭೀಮರಾಯರ ಹೋರಾಟಕ್ಕೆ ಪ್ರೇರಣೆ ನೀಡಿರಬೇಕು ಎಂಬುದಾಗಿಯೂ ವಿಚಾರ ಮಾಡಬೇಕಾಗುತ್ತದೆ. ಮುಂಡರಗಿ ಪರಿಸರ ಬ್ರಿಟಿಷರ ಈ ರೀತಿಯ ಕಹಿ ಅನುಭವಕ್ಕೆ ಒಳಗಾಗಿದ್ದರಿಂದಾಗಿ ಭೀಮರಾಯರ ನೇತೃತ್ವದಲ್ಲಿ ಮತ್ತೊಮ್ಮೆ ಬ್ರಿಟಿಷ್ ಅಧಿಪತ್ಯವನ್ನು ಪ್ರಶ್ನಿಸುವ ಹಾಗೂ ಸವಾಲು ಹಾಕುವ ದಿಟ್ಟ ನಿರ್ಧಾರವನ್ನು ಮಾಡಿತು.

**ಕೊನೆಟಿಪ್ಪಣಿಗಳು**


೧. ರೆಕಾರ್ಡ್ಸ್ ಫ್ರಂ ದಿ ಕಲೆಕ್ಟರ್ಸ್ ಆಫೀಸ್, ಧಾರವಾಡ.

೨. ಸೂರ್ಯನಾಥ್ ಯು. ಕಾಮತ್ (ಸಂ), **ಭಾರತದ ಗ್ಯಾಸೆಟಿಯರ್**, ಪು. ೯೮೯.

೩. ಹಣಜಿ ಜಿ.ಎಸ್., **ಕಪ್ಪತ್ತ ದರ್ಶನ**, ಪು. ೪೬.

೪. **ಆ್ಯನುಯಲ್ ರಿಪೋರ್ಟ್ ಆನ್ ಕನ್ನಡ ರಿಸರ್ಚ್ ಇನ್ ಬಾಂಬೆ ಪ್ರಾವಿನ್ಸಿ**, ಪು. ೨೭೧.

೫. ಸೂರ್ಯನಾಥ್ ಯು. ಕಾಮತ್ (ಸಂ), **ಭಾರತದ ಗ್ಯಾಸೆಟಿಯರ್**, ಪು. ೯೮೯.

೬. ಗೋಖಲೆ ಬಿ.ಜಿ., **ಎನ್ಸಿಯಂಟ್ ಇಂಡಿಯ**, ಪು. ೭೮.

೭. ಮಹಾಲಿಂಗ ಯಾಳಗಿ (ಸಂ.), **ಮುಂಡರಗಿ ನಾಡ ಸ್ವಾತಂತ್ರ್ಯ ಸಂಗ್ರಾಮ**, ಪು. ೪.

೮. ಅಣ್ಣಿಗೇರಿ ಎ.ಎಂ., **ಶಾಸನ ಸಾಹಿತ್ಯ ಸಂಚಯ**, ಪು. ೪೮.

೯. ಮಹಾಲಿಂಗ ಯಾಳಗಿ (ಸಂ.), **ಮುಂಡರಗಿ ನಾಡ ಸ್ವಾತಂತ್ರ್ಯ ಸಂಗ್ರಾಮ**, ಪು. ೫.

೧೦. ಅಕ್ಷಿತ ರಾಮಾಚಾರ್ಯರು, **ಕೊಪ್ಪಳ ದುರ್ಗ ಹೇಳುವ ಕಥೆ**, ಪು. ೩೧.

೧೧. ಚಿಟ್ನೀಸ್ ಕೆ.ಎಸ್., **ಲಕ್ಷ್ಮೇಶ್ವರ ಇತಿಹಾಸ**, ಪು. ೭೨.

೧೨. ಪೂರ್ವೋಕ್ತ.

೧೩. ಮಹಾಲಿಂಗ ಯಾಳಗಿ (ಸಂ.), **ಮುಂಡರಗಿ ನಾಡ ಸ್ವಾತಂತ್ರ್ಯ ಸಂಗ್ರಾಮ**, ಪು. ೧೧೬.

೧೪. ಅಕ್ಷಿತ ರಾಮಾಚಾರ್ಯರು, **ಕೊಪ್ಪಳ ದುರ್ಗ ಹೇಳುವ ಕಥೆ**, ಪು. ೮೫.


• • •

ಅಧ್ಯಾಯ ೫

# ಮುಂಡರಗಿ ಭೀಮರಾಯ

---

೫.೧. ಭೀಮರಾಯರ ಕೌಟುಂಬಿಕ ಹಿನ್ನೆಲೆ, ಬಾಲ್ಯ, ಶಿಕ್ಷಣ

೫.೨. ಬ್ರಿಟಿಷ್ ಸರಕಾರದಲ್ಲಿ ಭೀಮರಾಯರ ಸೇವೆ

೫.೩. ಭೀಮರಾಯರ ಉದ್ದೇಶ ಮತ್ತು ಗುರಿ

೫.೪. ಇತರ ಸಂಸ್ಥಾನಗಳೊಂದಿಗೆ ಭೀಮರಾಯರ ಸಂಬಂಧ

೫.೫. ಭೀಮರಾಯರ ಹೋರಾಟದ ಗತಿ

ಅಧ್ಯಾಯ ೫

# ಮುಂಡರಗಿ ಭೀಮರಾಯ

ಬ್ರಿಟಿಷ್ ಸಾಮ್ರಾಜ್ಯಶಾಹಿ ನೀತಿ ವಿರುದ್ಧ ಕರ್ನಾಟಕದಲ್ಲಿ ಅನೇಕ ಹೋರಾಟಗಳು ನಡೆದು ಚರಿತ್ರೆಯ ಪುಟಗಳನ್ನು ಸೇರಿವೆ. ಇಂತಹ ಹೋರಾಟಗಳಲ್ಲಿ ಮುಂಡರಗಿ ಪ್ರದೇಶದ ಹೋರಾಟವು ಐತಿಹಾಸಿಕ ಮಹತ್ವವನ್ನು ಪಡೆದುಕೊಂಡಿದೆ. ಇಡೀ ದಕ್ಷಿಣ ಭಾರತದಲ್ಲಿ ೧೮೫೭ರ ಸಂಗ್ರಾಮದಲ್ಲಿ ಬ್ರಿಟಿಷರಿಗೆ ತೀವ್ರ ಪ್ರತಿರೋಧವನ್ನು ಒಡ್ಡಿ, ಹೋರಾಡಿದ ಕೆಲವೇ ಪ್ರಮುಖ ಸಂಸ್ಥಾನಗಳಲ್ಲಿ ಮುಂಡರಗಿ ಸಂಸ್ಥಾನವು ಒಂದಾಗಿದೆ.

ಬ್ರಿಟಿಷ್ ಸಾಮ್ರಾಜ್ಯಶಾಹಿ ನೀತಿಯಿಂದ ಅನೇಕ ಅರಸು ಮನೆತನಗಳು, ಸಂಸ್ಥಾನಗಳು, ಸಾಮಂತರು, ತಮ್ಮ ಸ್ಥಾನಮಾನ ಮತ್ತು ಹಕ್ಕುಗಳನ್ನು ಕಳೆದುಕೊಳ್ಳುವ ಮತ್ತು ಕಳೆದುಕೊಂಡಂಥ ಸಂದರ್ಭ ಒದಗಿ ಬಂದಾಗ, ಅಂತಹ ಪರಿಸ್ಥಿತಿಯನ್ನು ವಿರೋಧಿಸಿ ಬ್ರಿಟಿಷರ ವಿರುದ್ಧ ಹೋರಾಟಕ್ಕಿಳಿದಿದ್ದರು. ಅದರಲ್ಲೂ ವಿಶೇಷವಾಗಿ ೧೮೫೭ರ ಹೋರಾಟದಲ್ಲಿ ಪಾಲ್ಗೊಂಡ ಅನೇಕರು, ದತ್ತು ಮಕ್ಕಳ ಸ್ವೀಕಾರದ ಸಮಸ್ಯೆಯ ಸುಳಿಗೆ ಸಿಲುಕಿದವರು ಮತ್ತು ಈ ನೀತಿಯನ್ನು ಒಪ್ಪಲು ಮನಸ್ಸಿಲ್ಲದೇ ಬ್ರಿಟಿಷರ ಕುತಂತ್ರ ಜಾಲಕ್ಕೆ ಸಿಕ್ಕು ಸೊರಗಿದವರಾಗಿದ್ದರು.[೧] ಆದರೆ ಮುಂಡರಗಿ ಭೀಮರಾಯರು ವೈಯಕ್ತಿಕವಾಗಿ ಇಂತಹ ಯಾವುದೇ ಸಮಸ್ಯೆಗಳಿಗಾಗಲಿ, ಶೋಷಣೆಗಾಗಲಿ ನೇರವಾಗಿ ಸಿಲುಕಿದವರಲ್ಲ. ಏಕೆಂದರೆ ಆಗ ಅವರ ಸ್ಥಾನಮಾನವನ್ನು ಅವಲೋಕಿಸಿದರೆ, ಅವರು ಯಾವ ಅರಸು ಮನೆತನಕ್ಕೆ ಸೇರಿದವರಲ್ಲ, ಸಂಸ್ಥಾನಿಕರಲ್ಲ, ಪಾಳೇಗಾರರಲ್ಲ ಅಥವಾ ದತ್ತುಮಕ್ಕಳ ಸ್ವೀಕಾರದಂತ ಸಮಸ್ಯೆಯಾಗಲಿ ಬಿರುದು ಬಾವಲಿಗಳ ನಿರಾಕರಣೆಯ ಪರಿಸ್ಥಿತಿಯು ಅವರಿಗಿರಲಿಲ್ಲ. ಬದಲಾಗಿ, ಬ್ರಿಟಿಷರ ದೌರ್ಜನ್ಯ ಮತ್ತು ಶೋಷಣೆ ನೀತಿಯ ವಿರುದ್ಧ ಹೋರಾಡಲು ಸ್ವಯಂ ಸ್ಫೂರ್ತಿಯಿಂದ ಮತ್ತು ನಿಸ್ವಾರ್ಥ ಮನೋಭಾವದಿಂದ, ಮೇಲಾಗಿ ಸ್ವದೇಶಾಭಿಮಾನದಿಂದ, ಸ್ವಾತಂತ್ರ್ಯಪ್ರಿಯರಾಗಿ, ಬ್ರಿಟಿಷ್ ಆಡಳಿತವನ್ನು ವಿರೋಧಿಸತೊಡಗಿದರು.[೨]

ಮುಂಡರಗಿ ಭೀಮರಾಯರು ಸಂಘಟನಾ ಶಕ್ತಿಯುಳ್ಳವರಾಗಿದ್ದು, ಆ ಸಂದರ್ಭದಲ್ಲಿ ಮುಂಡರಗಿ ಪ್ರದೇಶದ ಜನರು, ಸಂಸ್ಥಾನಿಕರು ಹಾಗೂ ದೇಸಾಯಿಗಳನ್ನು ಒಂದುಗೂಡಿಸಿ, ಎಲ್ಲ ವರ್ಗದ ಜನರ ಸಹಕಾರ ಮತ್ತು ಸಹಾನುಭೂತಿಯನ್ನು ಸಂಪಾದಿಸಿ, ಸಾಮ್ರಾಜ್ಯಶಾಹಿಗಳ ವಿರುದ್ಧ ಹೋರಾಡುತ್ತಲೇ ಆತ್ಮಾರ್ಪಣೆ ಮಾಡಿಕೊಂಡರು.

ಭೀಮರಾಯರು ಹುತಾತ್ಮರಾಗಿ ೧ನೇ ಜೂನ್ ೨೦೦೮ಕ್ಕೆ ೧೫೦ ವರ್ಷಗಳು ತುಂಬುವ ಈ ಐತಿಹಾಸಿಕ ಸಂದರ್ಭದಲ್ಲಿ, ಈ ಸ್ವಾತಂತ್ರ್ಯ ಹೋರಾಟಗಾರನನ್ನು ಸ್ಮರಿಸಿ ಅವರ ಹೋರಾಟ, ತ್ಯಾಗ, ಬಲಿದಾನದ ಚರಿತ್ರೆಯನ್ನು ಪುನರ್‌ನೆನಪಿಸಿಕೊಂಡು, ಹೊಸ ಆಕರಗಳೊಂದಿಗೆ, ಪುನರ್‌ರಚಿಸುವ ಹಾಗೂ ಪುನರ್‌ಮನನ ಮಾಡಿಕೊಳ್ಳುವ ಸಂದರ್ಭ ಇಂದಿನದು. ೧೮೫೭ರ ಸಂಗ್ರಾಮಕ್ಕೆ ೧೫೦ ವರ್ಷಗಳು ಸಂಪೂರ್ಣಗೊಂಡು ಹಾಗೂ ಈ ಸಂಗ್ರಾಮದಲ್ಲಿ, ಪಾಲ್ಗೊಂಡಿದ್ದ ಭೀಮರಾಯರು ಹುತಾತ್ಮರಾಗಿ, ೧೫೦ ವರ್ಷಗಳು ತುಂಬುತ್ತಿರುವ ಈ ಎರಡು ಐತಿಹಾಸಿಕ ಸಂದರ್ಭಗಳು ಕರ್ನಾಟಕಕ್ಕೆ ಮಹತ್ವದ್ದು.

ಈ ನಿಟ್ಟಿನಲ್ಲಿ ಮುಂಡರಗಿ ಭೀಮರಾಯರ ಬಗ್ಗೆ ಪ್ರಕಟಗೊಂಡ ಗ್ರಂಥಗಳು, ಪ್ರಕಟಣೆಗಳು, ಲಾವಣಿಗಳು, ಮೌಖಿಕ ಆಕರಗಳು, ಅವರ ವಂಶಜರ ಸಂದರ್ಶನ ಮತ್ತು ಮೌಖಿಕ ಹೇಳಿಕೆಗಳು, ಪತ್ರಾಗಾರಗಳ ದಾಖಲೆಗಳ ಪ್ರತಿಗಳು ಮತ್ತು ಕ್ಷೇತ್ರಕಾರ್ಯಗಳಿಂದ ಮಾಹಿತಿಯನ್ನು ಸಂಗ್ರಹಿಸಿ ಭೀಮರಾಯರ ಹೋರಾಟದ ಚರಿತ್ರೆಯನ್ನು ವಸ್ತುನಿಷ್ಠವಾಗಿ ನೋಡಿ ಅಧ್ಯಯನ ನಡೆಸಬೇಕಾದುದು, ಹೋರಾಟಕ್ಕೆ ೧೫೦ ವರ್ಷಗಳು ತುಂಬಿರುವ ಈ ಸಂದರ್ಭದಲ್ಲಿ ಚರಿತ್ರೆಕಾರರ ಮಹತ್ವದ ಕಾರ್ಯವಾಗಿದ್ದು, ಅರ್ಥಪೂರ್ಣವಾದದ್ದಾಗಿದೆ.

### ೫.೧. ಭೀಮರಾಯರ ಕೌಟುಂಬಿಕ ಹಿನ್ನೆಲೆ, ಬಾಲ್ಯ, ಶಿಕ್ಷಣ

ಪ್ರಸ್ತುತ ಲಭ್ಯವಿರುವ ಮಾಹಿತಿಗಳ ಆಧಾರಗಳ ಪ್ರಕಾರ, ಅಂಬಾಜಿರಾವ್ ಎನ್ನುವವರು ಮುಂಡರಗಿ ಭೀಮರಾಯರ ವಂಶಜರ ಮೂಲ ಪುರುಷ ಎಂದು ತಿಳಿದು ಬರುತ್ತದೆ. ಈ ವಂಶಜರು ಬ್ರಾಹ್ಮಣರಾಗಿದ್ದು, ಆಗಿನ ಕಾಲದಲ್ಲಿ ಹಿಂದುಗಳ ಧಾರ್ಮಿಕ ಕೇಂದ್ರವಾಗಿದ್ದ ಕಾಶಿಯಲ್ಲಿ ನೆಲಿಸಿದ್ದರು. ಮುಸ್ಲಿಂರ ದಾಳಿ ಮತ್ತು ಆಡಳಿತದ ಪ್ರಭಾವದಿಂದ ಇವರ ಆಚಾರ, ವಿಚಾರಗಳಿಗೆ ಧಕ್ಕೆ ಉಂಟಾದಾಗ, ಈ ಮನೆತನದವರು ಕಾಶಿಯನ್ನು ಬಿಟ್ಟು ದಕ್ಷಿಣಕ್ಕೆ ವಲಸೆ ಬಂದರೆಂದು ತಿಳಿದು ಬರುತ್ತದೆ.[೬] ಆಗ ಧಾರವಾಡ ವಿಭಾಗದ ಡಂಬಳ ಸಂಸ್ಥಾನದ ದೇಸಾಯಿಗಳ ಆಶ್ರಯ ಪಡೆದು ಇವರ ಬಳಿ ಮುತಾಲಿಕರಾಗಿ ಸೇವೆಯನ್ನು ಆರಂಭಿಸಿದರು. ಆಗ ಮುತಾಲಿಕ್ ಎಂದರೆ ಸಾರ್ವಜನಿಕ ಅಧಿಕಾರಿ ಅಥವಾ ದೇಸಾಯಿಯವರ ಮುಖ್ಯ ಕಾರ್ಯಭಾರಿ ಅಧಿಕಾರಿ ಸ್ಥಾನಮಾನವುಳ್ಳದ್ದಾಗಿತ್ತು. ಕ್ರಮೇಣ ಮುತಾಲಿಕರ ಸ್ಥಾನವು ವಂಶಪಾರಂಪರ್ಯ ವಾಗಿ ಮುಂದುವರೆಯಿತು.

ಅಂಬಾಜಿರಾಯರ ವಂಶದ ನಾಲ್ಕನೇ ತಲೆಮಾರಿನವನಾದ ತಿಮ್ಮಾಜಿಯ ಮಗ ಮೊಂಡುಗೈ ಭೀಮರಾಯ ಎನ್ನುವವರು ವಂಶಪಾರಂಪರ್ಯವಾಗಿ ಬಂದ, ಡಂಬಳದ ಬಹದ್ದೂರ ದೇಸಾಯಿಯವರ ಮುತಾಲಿಕರಾಗಿದ್ದರು. ನಂತರ ಮುಂಡರಗಿಯ ಕಲಕೇರಿಯಲ್ಲಿ 'ನಾಡಗೌಡ'ರಾಗಿ ಕಾರ್ಯ ನಿರ್ವಹಿಸಿದ್ದರು. ಮೊಂಡುಗೈ ಭೀಮರಾಯರಿಗೆ ಮೊಂಡುಗೈ ಎನ್ನುವ ಅಡ್ಡ ಹೆಸರು ಬಂದಿರುವ ಬಗ್ಗೆ ಎರಡು ವಿಭಿನ್ನ ಅಭಿಪ್ರಾಯಗಳಿವೆ.

ಒಂದು ಅಭಿಪ್ರಾಯದ ಪ್ರಕಾರ, ಟಿಪ್ಪುಸುಲ್ತಾನನ ಸೇನಾಧಿಪತಿಯಾಗಿದ್ದ ಖಮರುದ್ದೀನಖಾನ್‌ನು ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ ಮೇಲೆ ದಾಳಿ ಮಾಡಿದ. ಆಗ ಹರಪನಹಳ್ಳಿಯ ಪಾಳೇಗಾರನಾಗಿದ್ದ

ಸೋಮಶೇಖರ ನಾಯಕನು, ತನ್ನ ಸುತ್ತಮುತ್ತಲಿನ ದೇಸಾಯಿಗಳ ಸಹಾಯವನ್ನು ಯಾಚಿಸಿದಾಗ, ಭೀಮರಾಯರು ೫೦೦ ಸೈನಿಕರೊಂದಿಗೆ ಬಂದು ಪಾಳೇಗಾರನ ಪರವಾಗಿ ಹೋರಾಡಿದರು. ಆದರೆ ಹೋರಾಟದಲ್ಲಿ ಸೋತು ಸೆರೆ ಸಿಕ್ಕರು. ಖಮರುದ್ದೀನ್‌ಖಾನನು ಮೊಂಡುಗೈ ಭೀಮರಾಯ ಮತ್ತು ಅವರ ಸಂಗಡಿಗರಿಗೆ ಶಿಕ್ಷೆ ವಿಧಿಸಿ ಅವರೆಲ್ಲರ ಕೈಗಳನ್ನು ಕತ್ತರಿಸಲು, ಆಜ್ಞೆ ಮಾಡುತ್ತಾನೆ. ಆಗ ಭೀಮರಾಯರು ಒಂದು ಮನವಿಯನ್ನು ಸಲ್ಲಿಸಿ, ತನ್ನ ಸಂಗಡಿಗರೆಲ್ಲರೂ ನಿರಪರಾಧಿಗಳಾಗಿದ್ದು, ಅವರನ್ನು ಪ್ರಚೋದಿಸಿ, ಯುದ್ಧಕ್ಕೆ ಕರೆ ತಂದವನು ನಾನು. ಆದ್ದರಿಂದ ಅವರನ್ನು ಕ್ಷಮಿಸಿ, ನನಗೆ ಮಾತ್ರ ಶಿಕ್ಷೆ ವಿಧಿಸಲು ಕೇಳಿಕೊಂಡಾಗ, ಆ ಮನವಿಯ ಪ್ರಕಾರ ಭೀಮರಾಯನ ಕೈಗಳನ್ನು ಕತ್ತರಿಸಿ, ಶಸ್ತ್ರಾಸ್ತ್ರಗಳನ್ನು ಹಿಡಿಯದಂತೆ ಮೊಂಡುಗೈ ಮಾಡುತ್ತಾರೆ. ಅಂದಿನಿಂದ ಇವರಿಗೆ ಮೊಂಡುಗೈ ಎನ್ನುವ ಅಡ್ಡನಾಮ ಸೇರಿಸಿ, ಮೊಂಡುಗೈ ಭೀಮರಾಯ ಎಂದು ಕರೆಯಲಾಯಿತು.[೪]

ಇನ್ನೊಂದು ಅಭಿಪ್ರಾಯದ ಪ್ರಕಾರ, ಭೀಮರಾಯರು ಕತ್ತಿವರಸೆಯಲ್ಲಿ ಪ್ರವೀಣರಾಗಿದ್ದು, ಇವರ ಶಕ್ತಿ ಸಾಮರ್ಥ್ಯದ ಬಗ್ಗೆ ಅಸೂಯೆ ಪಟ್ಟ ಶತ್ರುಗಳು, ಭೀಮರಾಯರು ನಿದ್ರಾವಸ್ಥೆಯಲ್ಲಿದ್ದಾಗ, ಇವರ ಕೈಗಳನ್ನು ಕತ್ತರಿಸಿದ್ದರಿಂದ ಕೈಗಳು ಮೊಂಡಾದವೆಂದು, ಆದ್ದರಿಂದ ಇವರಿಗೆ ಮೊಂಡುಗೈ ಎನ್ನುವ ಅಡ್ಡನಾಮ ಬಂದಿರಬೇಕು ಎಂದು ಹೇಳಲಾಗಿದೆ. ಆದರೆ ಈ ಅಭಿಪ್ರಾಯದ ಬಗ್ಗೆ ಐತಿಹಾಸಿಕ ಮಾಹಿತಿಗಳು ಲಭ್ಯವಿಲ್ಲವಾದ್ದರಿಂದ ಮೊದಲಿನ ಅಭಿಪ್ರಾಯವೇ ಸರಿ ಇರಬೇಕೆಂದು ದಾಖಲಿಸಲಾಗಿದೆ.

ಮುಂಡರಗಿ ಭೀಮರಾಯರ ಪೂರ್ವಜರ ಮತ್ತೊಬ್ಬ ವ್ಯಕ್ತಿ ಎಂದರೆ, ಮೊಂಡುಗೈ ಭೀಮರಾಯರ ಮಗ ರಂಗರಾಯ (ಇವರು ಮುಂಡರಗಿ ಭೀಮರಾಯರ ತಂದೆ). ರಂಗರಾಯರು ಉತ್ತಮ ಶಿಕ್ಷಣ ಮತ್ತು ಇಂಗ್ಲಿಷ್ ಭಾಷಾಜ್ಞಾನ ಹಾಗೂ ಆಡಳಿತ ಚತುರರಾಗಿದ್ದರಿಂದ, ಇವರು ಪೇಶ್ವೆಯವರ ಆಡಳಿತದಲ್ಲಿ ನ್ಯಾಯಾಧೀಶರಾಗಿ ನೇಮಕಗೊಂಡಿದ್ದರು.[೫] ಹಾವೇರಿಯಲ್ಲಿ ನ್ಯಾಯಾಧೀಶರಾಗಿದ್ದ ರಂಗರಾಯರಿಗೆ, ಧಾರವಾಡ ವಿಭಾಗದ ಪರಿಸರ, ಭಾಷೆ, ಸಂಸ್ಕೃತಿಯ ಪೂರ್ಣ ಪರಿಚಯ ಇರುವುದನ್ನು ಗಮನಿಸಿದ ಆಗಿನ ಧಾರವಾಡದ, ಅಸಿಸ್ಟೆಂಟ್ ಕಲೆಕ್ಟರನಾಗಿದ್ದ ವಾಲ್ಟರ್ ಈಲಿಯಟ್ ಅವರು ರಂಗರಾಯರ ಸಾಹಯವನ್ನು ಪಡೆದು, ಈ ಭಾಗದ ಹಲವಾರು ಕನ್ನಡ ಶಾಸನಗಳನ್ನು ಇವರಿಂದ ಓದಿಸಿ ಸಂಶೋಧನೆ ಮಾಡಿದ್ದರು.[೬] ಇಂತಹ ಉತ್ತಮ ಹಿನ್ನೆಲೆ, ಸ್ಥಾನಮಾನವುಳ್ಳವರಾಗಿದ್ದ ರಂಗರಾಯರ ಮಗನೇ ಮುಂಡರಗಿ ಭೀಮರಾಯರು.

ಮುಂಡರಗಿ ಭೀಮರಾಯರು, ಮುಂಡರಗಿ ನಾಡಗೌಡಿಕೆಯ ಸ್ಥಾನಮಾನ ಹೊಂದಿದ್ದ ಪ್ರತಿಷ್ಠಿತ ಕುಟುಂಬಕ್ಕೆ ಸೇರಿದ್ದ ರಂಗರಾಯರ ಪುತ್ರರಾಗಿದ್ದಾರೆ. ಇವರ ಜನನ ದಿನಾಂಕದ ಬಗ್ಗೆ ನಿರ್ದಿಷ್ಟವಾದ ದಾಖಲೆಗಳು ಇಲ್ಲವಾದರೂ, ಇವರು ಮರಣ ಹೊಂದಿದಾಗ ಸುಮಾರು ೩೫ ವರ್ಷದವರಾಗಿದ್ದರೆಂದು ದಾಖಲೆಗಳಿಂದ ತಿಳಿದು ಬರುತ್ತದೆ. ಅವರ ಮರಣದ ದಿನಾಂಕ ೧ನೇ ಜೂನ್ ೧೮೫೮ ಆಗಿರುವುದರಿಂದ, ಇದರ ಆಧಾರದ ಮೇಲೆ ಅವರು ಸುಮಾರು ೧೮೨೩ರಲ್ಲಿ ಜನಿಸಿರಬಹುದೆನ್ನುವ ತೀರ್ಮಾನಕ್ಕೆ ಬರಬಹುದಾಗಿದೆ. ಮುಂಡರಗಿ ಭೀಮರಾಯರ ಬಾಲ್ಯ ಮತ್ತು ಶಿಕ್ಷಣದ ಬಗ್ಗೆ ಅಧ್ಯಯನ ಮಾಡುವಾಗ,

ಆ ಕಾಲದಲ್ಲಿ ಅವರ ತಂದೆ, ರಂಗರಾಯರು ಹೊಂದಿದ್ದ ಉತ್ತಮ ಸ್ಥಾನಮಾನವು ಭೀಮರಾಯರ ವ್ಯಕ್ತಿತ್ವ ರೂಪಿಸುವಲ್ಲಿ ಪ್ರಮುಖ ಪಾತ್ರವಹಿಸಿತು. ಇವರ ತಂದೆ ರಂಗರಾಯರು ಹಾವೇರಿಯಲ್ಲಿ ನ್ಯಾಯಾಧೀಶರಾಗಿ ಸೇವೆಯಲ್ಲಿದ್ದುದರಿಂದ ಭೀಮರಾಯರ ಆರಂಭದ ಶಿಕ್ಷಣ ಈ ಭಾಗದಲ್ಲಿಯೇ ಆಗಿರಬೇಕೆಂದು ಅಭಿಪ್ರಾಯ ಪಡಲಾಗಿದೆ. ಬ್ರಿಟಿಷ್ ಪರಿಸರದಲ್ಲಿಯೇ ಇದ್ದು, ಅವರ ಜೊತೆಯಲ್ಲಿಯೇ ಶಿಕ್ಷಣ ಪಡೆದು ವಿಶೇಷ ಜ್ಞಾನಾರ್ಜನೆಯೊಂದಿಗೆ ಇಂಗ್ಲಿಷ್ ಭಾಷೆಯಲ್ಲಿ ವಿಶೇಷ ಪ್ರಭುತ್ವ ಪಡೆದಿದ್ದರೆಂದು ತಿಳಿದು ಬರುತ್ತದೆ. ಆಗಿನ ಕಾಲದಲ್ಲಿ ಇಂಗ್ಲಿಷ್ ಭಾಷೆಯನ್ನು ಚೆನ್ನಾಗಿ ಮಾತನಾಡಬಲ್ಲ ಕೆಲವೇ ಕೆಲವು ದೇಶೀಯರಲ್ಲಿ ಭೀಮರಾಯರು ಒಬ್ಬರಾಗಿದ್ದರು. ಭೀಮರಾಯರ ಇನ್ನೊಂದು ವಿಶೇಷ ಎಂದರೆ, ಇಂಗ್ಲಿಷ್ ಭಾಷೆಯಲ್ಲಿ ಸಂಭಾಷಣೆ ನಡೆಸುವಾಗ ಇಂಗ್ಲಿಷರ ಧಾಟಿ ಮತ್ತು ಧ್ವನಿಯಲ್ಲಿಯೇ ಮಾತನಾಡುವಷ್ಟು ಮೇಧಾವಿ ಆಗಿದ್ದರು. ಈ ತಮ್ಮ ವಿಶೇಷ ಗುಣದಿಂದ ಅವರು ಬ್ರಿಟಿಷ್ ನಾಗರಿಕರು ಮತ್ತು ಅಧಿಕಾರಿಗಳಿಗೆ ಹತ್ತಿರದವರು ಮತ್ತು ಆತ್ಮೀಯರಾಗಲು ಕಾರಣವಾಯಿತು.[೬]

ಈಗ ಮುಂಡರಗಿಯಲ್ಲಿ ನೆಲೆಸಿರುವ ಭೀಮರಾಯರ ವಂಶಜರಲ್ಲಿ ನಾಲ್ಕನೇ ತಲೆಮಾರಿನವರಾದ ವೆಂಕಟರಾವ್ ಲಕ್ಷ್ಮಣರಾವ್ ನಾಡಗೌಡ ಇವರು ಭೀಮರಾಯರ ಇಂಗ್ಲಿಷ್ ಶಿಕ್ಷಣ ಮತ್ತು ಭಾಷಾಜ್ಞಾನದ ಬಗ್ಗೆ ಪ್ರಸ್ತಾಪಿಸುತ್ತಾ, ಭೀಮರಾಯರು ಇಂಗ್ಲಿಷ್ ಭಾಷೆಯ ಮೇಲೆ ಹೊಂದಿದ್ದ ವಿಶೇಷ ಜ್ಞಾನವನ್ನು ಗುರುತಿಸಿಯೇ ಬ್ರಿಟಿಷರು ಇವರನ್ನು ತಮ್ಮ ಸೇವೆಗೆ ನೇಮಕ ಮಾಡಿಕೊಂಡಿದ್ದರು ಎಂದು ತಿಳಿಸಿದರು. ಇವರ ಹೇಳಿಕೆಯನ್ನು ನಾವು ವಿಶ್ಲೇಷಣೆಗೆ ಒಳಪಡಿಸಿದಾಗ, ಭೀಮರಾಯರು ಬ್ರಿಟಿಷ್ ಸೇವೆಯಲ್ಲಿ ಮಾಮಲೆದಾರರಾಗಿ ನೇಮಕಗೊಂಡಾಗ, ಯಾವುದೇ ಉನ್ನತ ಶಿಕ್ಷಣವನ್ನು ಪಡೆದಿರಲಿಲ್ಲ. ಇವರು ಹೊಂದಿದ್ದ ವಿಶೇಷ ಇಂಗ್ಲಿಷ್ ಭಾಷೆಯ ಜ್ಞಾನದ ಆಧಾರದ ಮೇಲೆಯೇ ಇವರನ್ನು ಮಾಮಲೆದಾರನನ್ನಾಗಿ ನೇಮಿಸಿಕೊಂಡಿರುವುದು ಕಂಡು ಬರುವುದರಿಂದ, ಇವರ ಪೂರ್ವಜರ ಹೇಳಿಕೆಯು ಸಮಂಜಸವಾಗಿದೆ ಎನ್ನುವ ಅಭಿಪ್ರಾಯಕ್ಕೆ ಬರಬಹುದಾಗಿದೆ.

ಭೀಮರಾಯರು ತಮ್ಮ ಶಿಕ್ಷಣದ ಜೊತೆಗೆ, ವಿವಿಧ ಕ್ಷೇತ್ರಗಳಲ್ಲಿ ಪ್ರತಿಭಾವಂತರಾಗಿದ್ದರು. ಅವರ ಹವ್ಯಾಸಗಳಲ್ಲಿ ಕುದುರೆ ಸವಾರಿ ಮತ್ತು ವಿವಿಧ ಜಾತಿಯ ಕುದುರೆಗಳನ್ನು ಸಾಕುವುದು ಮತ್ತು ನಿರ್ವಹಿಸುವುದು ಅವರ ಹವ್ಯಾಸಗಳಲ್ಲಿ ಒಂದಾಗಿತ್ತು. ಬ್ರಿಟಿಷ್ ಅಧಿಕಾರಿಗಳು ಇವರು ಹೊಂದಿದ್ದ ವಿವಿಧ ಜಾತಿಯ ಕುದುರೆಗಳ ಸಾಕಣೆ ಮತ್ತು ನಿರ್ವಹಣೆ ಬಗ್ಗೆ ತಿಳಿಯಲು ಕುತೂಹಲದಿಂದ ಭೇಟಿ ನೀಡುತ್ತಿದ್ದರು. ಭೀಮರಾಯರು ಕುದುರೆಗಳನ್ನು ಸಾಕಿದ್ದ ಕುದುರೆ ಮನೆಯನ್ನು ಈಗಲೂ ನಾವು ಮುಂಡರಗಿಯಲ್ಲಿ ನೋಡಬಹುದಾಗಿದೆ.

ಭೀಮರಾಯರ ಮತ್ತೊಂದು ಪ್ರತಿಭೆ ಮತ್ತು ಹವ್ಯಾಸ ಎಂದರೆ ಬಂದೂಕು ಚಲಾಯಿಸುವಲ್ಲಿ ಉತ್ತಮ ನಿಪುಣತೆ ಹೊಂದಿದ್ದು, ಗುಂಡು ಹಾರಿಸುವ ಅವರ ಗುರಿ ಎಷ್ಟು ನಿಖರವಾಗಿತ್ತೆಂದರೆ, ಹಾರುತ್ತಿರುವ ಹಕ್ಕಿಯನ್ನೇ ಗುಂಡಿಟ್ಟು ಕೊಲ್ಲುವಷ್ಟು ಪರಿಣಿತಿಯನ್ನು ಹೊಂದಿದ್ದ ಗುರಿಕಾರರಾಗಿದ್ದರು ಎಂದು ತಿಳಿದು ಬರುತ್ತದೆ.[೮] ಇವರ ಬಂದೂಕಿನ ಗುರಿಯ ಪರಿಣಿತಿಯನ್ನು ನೋಡಲೆಂದೇ ಬ್ರಿಟಿಷ್ ಅಧಿಕಾರಿಗಳು ಇವರನ್ನು ಭೇಟಿ ಮಾಡುತ್ತಿದ್ದರೆಂದು ತಿಳಿದು ಬರುತ್ತದೆ.

## ೫.೨. ಬ್ರಿಟಿಷ್ ಸರ್ಕಾರದಲ್ಲಿ ಭೀಮರಾಯರ ಸೇವೆ

ಭೀಮರಾಯರ ಕೌಟುಂಬಿಕ ಹಿನ್ನಲೆ, ಪರಿಸರ ಮತ್ತು ಅವರ ಇಂಗ್ಲಿಷ್ ಭಾಷಾಜ್ಞಾನವು ಅವರು ಬ್ರಿಟಿಷ್ ಸರಕಾರದ ಸೇವೆಗೆ ಸೇರಲು ಸುಲಭವಾಗಿ ದಾರಿ ಮಾಡಿಕೊಟ್ಟಿತು.[೯] ಇವರ ತಂದೆಯವರು ನ್ಯಾಯಾಧೀಶರ ಹುದ್ದೆಯಲ್ಲಿ ಇದ್ದುದರಿಂದ ಹಾಗೂ ಭೀಮರಾಯರು ಬ್ರಿಟಿಷರ ಸಂಪರ್ಕ, ಒಡನಾಟದಲ್ಲಿಯೇ ತಮ್ಮ ಬಾಲ್ಯ ಮತ್ತು ಶಿಕ್ಷಣ ಪಡೆದಿದ್ದರಿಂದಾಗಿ ಸ್ವಾಭಾವಿಕವಾಗಿಯೇ ಅವರು ಬ್ರಿಟಿಷ್ ಸೇವೆಗೆ ಆಕರ್ಷಿತರಾಗಿರಬೇಕು. ಹೀಗಾಗಿ ಭೀಮರಾಯರು ಮಾಮಲೆದಾರರಾಗಿ ತಮ್ಮ ಸೇವೆಯನ್ನು ಆರಂಭಿಸಿದರು. ಸೇವೆಗೆ ಸೇರಿದ ಆರಂಭದಲ್ಲಿ ಅವರು ಬ್ರಿಟಿಷರಿಗೆ ಪೂರ್ಣ ಕರ್ತವ್ಯನಿಷ್ಠರಾಗಿ, ಸೇವಾ ದಕ್ಷತೆಗೆ ಹೆಸರಾಗಿ ಬ್ರಿಟಿಷರ ವಿಶ್ವಾಸಕ್ಕೆ ಪಾತ್ರರಾಗಿದ್ದರು. ಆರಂಭದ ಅವಧಿಯಲ್ಲಿ ಬ್ರಿಟಿಷರು ಮತ್ತು ಭೀಮರಾಯರ ಮಧ್ಯೆ ಯಾವುದೇ ಭಿನ್ನಾಭಿಪ್ರಾಯ ಇರಲಿಲ್ಲ. ಏಕೆಂದರೆ ಇವರು ಬಾಲ್ಯದಿಂದಲೂ, ತಮ್ಮ ಭಾಗದ ಜನರ ಜೊತೆಗಿನ ಒಡನಾಟಕ್ಕಿಂತಲೂ ಹೆಚ್ಚಾಗಿ ಬ್ರಿಟಿಷರೊಡನೆಯೇ ಹೆಚ್ಚಿನ ಸಂಪರ್ಕ ಮತ್ತು ಒಡನಾಟವನ್ನು ಹೊಂದಿದವರಾಗಿದ್ದರು. ಹೀಗಾಗಿ ಸ್ವಾಭಾವಿಕವಾಗಿಯೇ ಬ್ರಿಟಿಷರ ಸೇವೆಗೆ ಹೊಂದಿಕೊಂಡಿದ್ದರು.

ಭೀಮರಾಯರ ಆರಂಭದ ಕರ್ತವ್ಯನಿಷ್ಟೆಗೆ ಆಧಾರವಾಗಿ ದಾಖಲೆಗಳಲ್ಲಿ ಸಿಗುವ ಮಾಹಿತಿಯನ್ನು ಇಲ್ಲಿ ಪ್ರಸ್ತಾಪಿಸಬಹುದಾಗಿದೆ. ಬಳ್ಳಾರಿ ವಿಭಾಗಕ್ಕೆ ಸೇರಿದ ನೆಲ್ಲೂರಿನಲ್ಲಿ ಹಲವಾರು ವರ್ಷಗಳಿಂದ ರೈತರಿಂದ ಕಂದಾಯ ಸರಿಯಾಗಿ ವಸೂಲಾಗದೇ ಸರಕಾರಕ್ಕೆ ಸಮಸ್ಯೆಯಾಗಿತ್ತು. ಭೀಮರಾಯರ ಕರ್ತವ್ಯ ನಿಷ್ಠೆಯನ್ನು ಪರೀಕ್ಷಿಸಲು ಬಳ್ಳಾರಿಯ ಕಲೆಕ್ಟರನು ಇವರನ್ನು ಕಂದಾಯ ವಸೂಲಿಗಾಗಿ ನೆಲ್ಲೂರಿಗೆ ಕಳುಹಿಸಿದನು. ಅಶ್ವಪಡೆಯೊಂದಿಗೆ ನೆಲ್ಲೂರಿಗೆ ಆಗಮಿಸಿದ ಭೀಮರಾಯರು ರೈತರನ್ನು ಹೆದರಿಸಿ, ಒತ್ತಾಯದ ಮೂಲಕ ಕಂದಾಯವನ್ನು ವಸೂಲಿ ಮಾಡಿ ಕಲೆಕ್ಟರನಿಗೆ ಒಪ್ಪಿಸಿದರು. ಹಲವು ದಿನಗಳಿಂದ ಬ್ರಿಟಿಷರಿಗೆ ಸಮಸ್ಯೆಯಾಗಿದ್ದ ಈ ಕಾರ್ಯವನ್ನು ಯಶಸ್ವಿಯಾಗಿ ಮುಗಿಸಿದ ಭೀಮರಾಯರ ದಕ್ಷತೆಯನ್ನು ಗುರುತಿಸಿದ ಕಲೆಕ್ಟರನು, ಭೀಮರಾಯರನ್ನು ಹಡಗಲಿಯ 'ಮಾಮಲೆದಾರ'ರನ್ನಾಗಿ ನೇಮಿಸಿದರು. ಈ ನಿದರ್ಶನವನ್ನು ಅವಲೋಕಿಸಿದರೆ ಭೀಮರಾಯರು ನೆಲ್ಲೂರಿನಲ್ಲಿ ಕಂದಾಯ ವಸೂಲಿ ಮಾಡಿದ ಕ್ರಮವನ್ನು ನೋಡಿದಾಗ, ಆಗ ಅವರಿಗೆ ನಮ್ಮ ನಾಡು, ನಮ್ಮ ಜನ, ರೈತರ ಸಮಸ್ಯೆ, ಹೀಗೆ ಯಾವುದನ್ನು ನೋಡದೆ ಕಠಿಣ ಕ್ರಮ ಮತ್ತು ದೌರ್ಜನ್ಯದಿಂದ ಕಂದಾಯ ವಸೂಲಿ ಮಾಡಿದ ಕ್ರಮವನ್ನು ಅವಗಾಹಿನಿಸಿದರೆ, ಆಗ ಅವರಲ್ಲಿ ನಾಡಿನ ಮತ್ತು ಜನರ ಮೇಲಿನ ಪ್ರೀತಿ ವಿಶ್ವಾಸ, ಗೌರವಕ್ಕಿಂತಲೂ ಬ್ರಿಟಿಷರಲ್ಲಿ ಹೊಂದಿದ್ದ ವಿಧೇಯತೆ ಮತ್ತು ಕರ್ತವ್ಯ ನಿಷ್ಠೆಯನ್ನು ಗಮನಿಸಬಹುದಾಗಿದೆ.

ಹಡಗಲಿಯಲ್ಲಿ ಮಾಮಲೆದಾರರಾಗಿ ಸೇವೆ ಸಲ್ಲಿಸಿದ ನಂತರ ತಹಸೀಲ್ದಾರರಾಗಿ ಬಡ್ತಿ ಪಡೆದು ಹರಪನಹಳ್ಳಿ ಮತ್ತು ಬಳ್ಳಾರಿಯಲ್ಲಿ ಕಾರ್ಯನಿರ್ವಹಿಸಿದರು. ಈ ರೀತಿ ೧೮೫೨-೫೩ರವರೆಗೆ ತಹಸೀಲ್ದಾರ ರಾಗಿ ಬ್ರಿಟಿಷ್ ಸೇವೆಯಲ್ಲಿ ಕಾರ್ಯನಿರ್ವಹಿಸಿ ಈ ಭಾಗದಲ್ಲಿಯೇ ಅತ್ಯುತ್ತಮ ಮತ್ತು ದಕ್ಷ ಅಧಿಕಾರಿ ಎಂಬ ಹೆಸರಿಗೆ ಪಾತ್ರರಾಗಿದ್ದರು ಎನ್ನುವ ಮಾಹಿತಿಯು ಲಭ್ಯವಿರುವ ದಾಖಲೆಗಳಿಂದ ತಿಳಿದು ಬರುತ್ತದೆ.[೧೦]

ಬ್ರಿಟಿಷರ ಒಡನಾಟ ಮತ್ತು ಪರಿಸರದಲ್ಲಿಯೇ ಶಿಕ್ಷಣ ಪಡೆದು ಬೆಳೆದ ಭೀಮರಾಯರು, ಬ್ರಿಟಿಷರ ಒಡನಾಟದಿಂದಲೋ, ತಂದೆಯ ಪ್ರಭಾವದಿಂದಲೋ, ಬ್ರಿಟಿಷರ ಸೇವೆಗೆ ಸೇರಿದ್ದರು. ಕೇವಲ ಮಾಮಲೆದಾರರಾಗಿ ಸೇವೆ ಪ್ರಾರಂಭಿಸಿದ ಇವರು ಬಹುಬೇಗ ತಮ್ಮ ಉತ್ತಮ ಇಂಗ್ಲಿಷ್ ಶಿಕ್ಷಣ ಮತ್ತು ಕಾರ್ಯದಕ್ಷತೆಯಿಂದ ತಹಸೀಲ್ದಾರ ಪದವಿಗೇರಿದ್ದರು. ಕಂದಾಯ ವಸೂಲಿಯಲ್ಲಿ, ಆಡಳಿತದಲ್ಲಿ, ಬ್ರಿಟಿಷರ ನೀತಿ-ನಿಯಮಗಳ ಪಾಲನೆಯಲ್ಲಿ ಒಳ್ಳೆಯ ಹೆಸರನ್ನೇ ಸಂಪಾದಿಸಿ ತನ್ನದೇ ಆದ ಸ್ಥಾನಮಾನವನ್ನು ಗಳಿಸಿಕೊಂಡಿದ್ದರು.

ಆದರೆ ೧೮೫೭ರ ವೇಳೆಗೆ ಭೀಮರಾಯರು ಬ್ರಿಟಿಷ್ ಆಡಳಿತದ ಬಗ್ಗೆ ಜಿಗುಪ್ಸೆ, ಬೇಸರ ಹೊಂದಲಾರಂಭಿಸಿ ಕೊನೆಗೆ ೧೮೫೪ರಲ್ಲಿ ಸ್ವಪ್ರೇರಣೆಯಿಂದ ತಮ್ಮ ಸೇವೆಗೆ ರಾಜೀನಾಮೆ ನೀಡಿ ಹೊರಬಂದರು.[೧೧] ಇಲ್ಲಿ ಇನ್ನೂ ಬಗೆಹರಿಯದೇ ಚರ್ಚೆಗೆ ಒಳಗಾಗಬೇಕಿರುವ ವಿಷಯವೆಂದರೆ, ಅವರು ರಾಜೀನಾಮೆ ನೀಡಿದ ವಿಚಾರ. ಕೆಲವು ಅಭಿಪ್ರಾಯಗಳ ಪ್ರಕಾರ, ಭೀಮರಾಯರೇ ಸ್ವಪ್ರೇರಣೆಯಿಂದ ರಾಜೀನಾಮೆ ನೀಡಿ ಕೆಲಸ ಬಿಟ್ಟು ಬಂದರು ಎನ್ನುವುದು. ಇನ್ನೊಂದು ಅಭಿಪ್ರಾಯದ ಪ್ರಕಾರ, ೧೮೫೭ರ ಸಮಯಕ್ಕಾಗಲೇ ಭೀಮರಾಯರ ಕೆಲವು ಧೋರಣೆಗಳು ಬ್ರಿಟಿಷರಿಗೆ ಸರಿ ಬರುತ್ತಿರಲಿಲ್ಲವೆಂದು ಮತ್ತು ಅದೇ ಸಮಯದಲ್ಲಿ ಕೆಲವು ಆಳರಸರು ಭೀಮರಾಯರ ಮೇಲೆ ಸುಳ್ಳು ಆರೋಪಗಳನ್ನು ಹೊರಿಸಿದರು, ಹೀಗೆ ಮೇಲಿಂದ ಮೇಲೆ ಇವರ ಬಗ್ಗೆ ಕೇಳಿ ಬಂದ ಆರೋಪಗಳನ್ನು ಆಧರಿಸಿ, ಬ್ರಿಟಿಷರೇ ಇವರನ್ನು ಸೇವೆಯಿಂದ ೧೮೫೪ರಲ್ಲಿ ವಜಾ ಮಾಡಿದರು ಎನ್ನುವುದಾಗಿದೆ. ಆದರೆ ಈವರೆಗೆ ಲಭ್ಯವಿರುವ ದಾಖಲೆಗಳು, ಮಾಹಿತಿಗಳ ಪ್ರಕಾರ ಸ್ಪಷ್ಟ ಮತ್ತು ನಿರ್ದಿಷ್ಟ ಮಾಹಿತಿ ದೊರೆಯದೆ ಇರುವುದರಿಂದ, ಇದರ ಬಗ್ಗೆ ಹೆಚ್ಚಿನ ಸಂಶೋಧನೆಯ ಅಗತ್ಯವಿದೆ.

ಭೀಮರಾಯರು ಬ್ರಿಟಿಷ್ ಸೇವೆಯಿಂದ ಹೊರಬಂದ ರೀತಿ ಯಾವುದೇ ಇರಲಿ, ಇಲ್ಲಿ ಸೂಕ್ತವಾಗಿ ವಿಚಾರ ಮಾಡಬೇಕಾದ ಅಂಶ ಏನೆಂದರೆ ಪರಸ್ಪರ ವಿಶ್ವಾಸ, ನಂಬಿಕೆಯಿಂದಿದ್ದ ಬ್ರಿಟಿಷ್ ಮತ್ತು ಭೀಮರಾಯರ ಮಧ್ಯೆ ಉಂಟಾದ ಬಿರುಕು ಅಥವಾ ಭಿನ್ನಾಭಿಪ್ರಾಯಕ್ಕೆ ಕಾರಣ ಏನು ಎನ್ನುವ ಕುತೂಹಲ ಉದ್ಭವಿಸುತ್ತದೆ. ಭೀಮರಾಯರ ಬಗ್ಗೆ ಬ್ರಿಟಿಷ್ ಅಧಿಕಾರಿಗಳ ನಿಲುವಿನಲ್ಲಿ ಆದ ಬದಲಾವಣೆಗೆ ಕಾರಣವೇನು, ಭೀಮರಾಯರ ಬಗ್ಗೆ ಯಾವ ವಿಷಯದಲ್ಲಿ ಬ್ರಿಟಿಷರಿಗೆ ಅನುಮಾನ, ಅಪನಂಬಿಕೆ ಹುಟ್ಟಿತು, ಭೀಮರಾಯರು ಅನಿರೀಕ್ಷಿತವಾಗಿ ಬ್ರಿಟಿಷರ ಬಗ್ಗೆ ವಿರೋಧ ನೀತಿ ತಾಳಲು ಒದಗಿಬಂದ ಸಂದರ್ಭಗಳೇನು, ಯಾವ ನೀತಿಯು ಇವರಲ್ಲಿ ಕಂದಕವನ್ನುಂಟು ಮಾಡಿತು ಹಾಗೂ ಭೀಮರಾಯರು ತನ್ನ ಹುದ್ದೆಗೆ ರಾಜೀನಾಮೆ ನೀಡಲು ಕಾರಣ ಏನು ಎನ್ನುವ ಪ್ರಶ್ನೆಗಳು ಉದ್ಭವಿಸುತ್ತವೆ.

ಭೀಮರಾಯರ ವ್ಯಕ್ತಿತ್ವವನ್ನು ಗಮನಿಸಿದಾಗ, ಭೀಮರಾಯರು ಬ್ರಿಟಿಷ್ ಸೇವೆಗೆ ಸೇರಿದ್ದು ತನ್ನ ಶಿಕ್ಷಣ, ಬುದ್ಧಿವಂತಿಕೆ ದಕ್ಷತೆಯಿಂದ ಇವರು ನಾಡಗೌಡರಿಗೆ ರಕ್ತಗತವಾಗಿ ಬಂದ ಗುಣಗಳಾದ ಸ್ವತಂತ್ರ ಮನೋಭಾವ, ಕಾರ್ಯತತ್ಪರತೆ, ಆತ್ಮಾಭಿಮಾನ ಹೊಂದಿದ್ದರು.[೧೨] ಬ್ರಿಟಿಷರು ಕೈಗೊಂಡಿದ್ದ ಶೋಷಣ ನೀತಿ, ತಂತ್ರ-ಕುತಂತ್ರ, ಸಮಗ್ರ ದೇಶವನ್ನೇ ಅಧೋಗತಿಗೆ ತಳ್ಳುತ್ತಿರುವ ನೀತಿಗಳು, ಆಳರಸರ, ಸಂಸ್ಥಾನಿಕರ ರಾಜ್ಯಗಳನ್ನು ದತ್ತುಮಕ್ಕಳಿಗೆ ಹಕ್ಕಿಲ್ಲ ಎಂಬ ಕುತಂತ್ರದ ನೀತಿಯಿಂದ ವಶಪಡಿಸಿಕೊಂಡಿದ್ದು,

ರೈತರ ಮೇಲೆ ದೌರ್ಜನ್ಯದಿಂದ ಕಂದಾಯವನ್ನು ವಸೂಲಿ ಮಾಡುವ ಕ್ರಮಗಳು ಮತ್ತು ಬ್ರಿಟಿಷರಿಗೆ ಭಾರತೀಯರ ಬಗ್ಗೆ ಇದ್ದ ಕೀಳರಿಮೆ, ತಾತ್ಸರ ಮನೋಭಾವ, ಹೀಗೆ ಪ್ರತಿಯೊಂದು ಅವರು ಸೇವೆಯಲ್ಲಿ ಇರುವಾಗ ಅನುಭವವಾಗತೊಡಗಿತು. ಅದರಲ್ಲೂ ಮಾಮಲೆದಾರರಾಗಿ, ತಹಸೀಲ್ದಾರರಾಗಿ ತಮ್ಮ ಹುಟ್ಟೂರಿನ ಸುತ್ತಮುತ್ತಲಿನಲ್ಲಿಯೇ ಕಾರ್ಯನಿರ್ವಹಿಸುತ್ತಿದ್ದುದರಿಂದ ಅಲ್ಲಿನ ರೈತರ ಸಮಸ್ಯೆಗಳು, ಅಲ್ಲಿನ ಜನರ ಜೀವನಕ್ರಮ, ಜೀವನಮಟ್ಟ, ಅವರ ಮನೋಭಾವಗಳು ಕೂಡ ಇವರ ಮೇಲೆ ಪ್ರಭಾವ ಬೀರಿದವು. ಆಗ ಬ್ರಿಟಿಷರ ನಿಜವಾದ ಉದ್ದೇಶ, ಸ್ವಾರ್ಥ, ದೌರ್ಜನ್ಯ, ಆಕ್ರಮಣ ನೀತಿ, ದಮನ ನೀತಿಯಂತಹ ಅಘಾತಕರ ಆಡಳಿತ ನೀತಿಗಳಿಂದ ಅವರು ಬೇಸತ್ತಿದ್ದರು.[೧೩]

ಹೀಗೆ ತಾವು ಸೇವೆಯಲ್ಲಿದ್ದಾಗ ಗಮನಿಸುತ್ತಾ ಬಂದ ಬ್ರಿಟಿಷರ ಕೆಲವು ಆಡಳಿತ ನೀತಿಗಳು, ಅವರ ಮನಸ್ಸಿನ ಮೇಲೆ ತೀವ್ರ ಪರಿಣಾಮ ಬೀರಿದವು. ತಮ್ಮ ನಾಡಿನ ಬಗ್ಗೆ, ನಾಡಿನ ಜನರ ಬಗ್ಗೆ ವಿಚಾರ-ಚಿಂತನೆ ನಡೆಸಿ ಹಾಗೂ ಮುಂದೋದಗಬಹುದಾದ ಆಪತ್ತುಗಳ ಬಗ್ಗೆ ಚಿಂತಿತರಾಗಿದ್ದರು. ಅದೇ ಸಮಯದಲ್ಲಿ ನಾಡಿನಾದ್ಯಂತ ಬ್ರಿಟಿಷರು ಭಾರತೀಯರನ್ನು ಶೋಷಿಸುತ್ತಿದ್ದರಿಂದ ಅವರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿ ತೀರಾ ಶೋಚನೀಯವಾಗಿದ್ದು, ಬ್ರಿಟಿಷರ ಶೋಷಣೆಗೆ ಒಳಗಾದವರಿಂದ ನಾಡಿನಾದ್ಯಂತ ಪ್ರತಿಭಟನೆ ಬಂಡಾಯ ಏಳುವ ಬಗ್ಗೆ ಗುಪ್ತ ಸಮಾಚಾರಗಳು ಕೇಳಿ ಬರುತ್ತಿದ್ದವು. ಹಾಗಾಗಿ ಭೀಮರಾಯರು ತಮ್ಮ ನೌಕರಿಗೆ ರಾಜೀನಾಮೆ ಕೊಟ್ಟು, ತಮ್ಮ ಸ್ವಂತ ಊರಾದ ಮುಂಡರಗಿ ಬಳಿಯಿರುವ ಬೆಣ್ಣೆಹಳ್ಳಿಗೆ ಬಂದು ನೆಲಸಿದರು. ಬೆಣ್ಣೆಹಳ್ಳಿ ಮತ್ತು ಹೈತಾಪುರ ಹಳ್ಳಿಗಳು ಪೂರ್ಣವಾಗಿ ಭೀಮರಾಯರ ಇನಾಮು ಹಳ್ಳಿಗಳಾಗಿದ್ದವು.[೧೪]

**೫.೩. ಭೀಮರಾಯರ ಉದ್ದೇಶ ಮತ್ತು ಗುರಿ**

ಭೀಮರಾಯರು ಬ್ರಿಟಿಷರ ವಿರುದ್ಧ ಬಂಡೇಳಲು ವೈಯಕ್ತಿಕ ದ್ವೇಷವೇನೂ ಇರಲಿಲ್ಲ ಅಥವಾ ಸ್ವಾರ್ಥವೂ ಇರಲಿಲ್ಲ. ಏಕೆಂದರೆ ಭೀಮರಾಯರು ರಾಜನಲ್ಲ, ದೇಸಾಯಿಯಲ್ಲ ಅಥವಾ ಸಿಂಹಾಸನಕ್ಕಾಗಲಿ, ಒಡೆತನಕ್ಕಾಗಲಿ ಹೊಡೆದಾಡಿದವರಲ್ಲ. ಬದಲಾಗಿ ಸ್ವದೇಶವು, ವಿದೇಶಿಯರ ಪಾಲಾಗುತ್ತ, ಇಲ್ಲಿನ ಸಕಲ ಸಂಪತ್ತು ಸೂರೆಯಾಗಿ ಹೋಗುತ್ತಿದೆಯಲ್ಲ ಎಂದು ನೊಂದು, ಈ ವಿದೇಶಿಯರ ದಾಸ್ಯದಿಂದ ತನ್ನ ನಾಡನ್ನು ಬಿಡುಗಡೆ ಮಾಡಲು ಇಚ್ಚಿಸಿದರು. ಹಾಗಾಗಿಯೇ ಅಧಿಕಾರ, ಸಂಪತ್ತು, ಸ್ಥಾನಮಾನ ಎಲ್ಲವನ್ನು ತ್ಯಜಿಸಿ ತನ್ನ ಸ್ವಂತ ಗ್ರಾಮವಾದ ಬೆಣ್ಣೆಹಳ್ಳಿಗೆ ಬಂದು ನೆಲೆಸಿ, ಸಾಮ್ರಾಜ್ಯಶಾಹಿಗಳ ವಿರುದ್ಧ ಹೋರಾಡಲು ಸುತ್ತಮುತ್ತಲಿನ ರಾಜ-ಮಹಾರಾಜರು, ದೇಸಾಯಿಗಳು, ದೇಶಮುಖರು, ಜಹಗೀರ ದಾರರು ರೈತರು ಎಲ್ಲರನ್ನೂ ಒಂದುಗೂಡಿಸಿ ಸಿದ್ಧತೆಗಳನ್ನು ಮಾಡಿಕೊಳ್ಳತೊಡಗಿದರು.[೧೫]

ಭೀಮರಾಯರು ಸುತ್ತಮುತ್ತಲಿನ ಜನರನ್ನು, ಆಳರಸರನ್ನು, ಒಂದುಗೂಡಿಸುತ್ತಾ, ಮಾಡಿಕೊಂಡ ಸಿದ್ಧತೆಗಳನ್ನು ಗಮನಿಸಿದರೆ ಭೀಮರಾಯರ ಗುರಿ ಸಾಮ್ರಾಜ್ಯಶಾಹಿಗಳ ವಿರುದ್ಧ ಹೋರಾಟ ಮತ್ತು ಪರಕೀಯರನ್ನು ಸಂಪೂರ್ಣವಾಗಿ ಈ ನಾಡಿನಿಂದ ಹೊಡೆದೋಡಿಸಿ, ಸ್ವಾತಂತ್ರ್ಯವನ್ನು ಪಡೆಯುವುದಾಗಿತ್ತು ಎನ್ನುವ ಅಂಶ ಸ್ಪಷ್ಟವಾಗಿ ತಿಳಿದು ಬರುತ್ತದೆ.

ಮುಂದೆ ೧೮೫೭ನೇ ವರ್ಷದಲ್ಲಿ ಬ್ರಿಟಿಷರ ವಿರುದ್ಧ ಉತ್ತರ ಭಾರತದಲ್ಲಿ ಬಂಡೇಳುವ ಎಲ್ಲ ಸೂಚನೆಗಳು ದೊರೆತಾಗ, ಕರ್ನಾಟಕದಲ್ಲಿ ಹಮ್ಮಿಗಿ ಕೆಂಚನಗೌಡರು, ಡಂಬಳದ ದೇಸಾಯಿಗಳು, ನರಗುಂದದ ಬಾಬಾಸಾಹೇಬ, ಮುಂತಾದವರ ಜೊತೆ ಸಂಪರ್ಕ ಸಾಧಿಸಿ ಎಲ್ಲರನ್ನು ಒಗ್ಗಟ್ಟಾಗಿಸಿ ಬ್ರಿಟಿಷರ ವಿರುದ್ಧ ಬಂಡೇಳಲು ಯೋಜನೆ ರೂಪಿಸಿದರು.

**೫.೪. ಇತರ ಸಂಸ್ಥಾನಗಳೊಂದಿಗೆ ಭೀಮರಾಯರ ಸಂಬಂಧ**

ಭೀಮರಾಯರು ಸಾಮ್ರಾಜ್ಯಶಾಹಿಗಳ ವಿರುದ್ಧ ಹೋರಾಡಿ, ತಮ್ಮ ನಾಡನ್ನು ಪರಕೀಯರ ಹಿಡಿತದಿಂದ ಮುಕ್ತಗೊಳಿಸುವ ಪಣತೊಟ್ಟ ನಂತರ ಅವರು ತಮ್ಮ ಸುತ್ತಮುತ್ತಲಿನ ದೇಸಾಯಿಗಳು, ನಾಯಕರು, ಮುಂತಾದವರೊಡನೆ ಸಮಾಲೋಚನೆಗೆ ಮುಂದಾಗಿ ಮಾತುಕತೆಯನ್ನು ಆರಂಭಿಸಿದರು. ಅಂತಹ ನಾಯಕರಲ್ಲಿ ಪ್ರಮುಖರಾದವರೆಂದರೆ, ನರಗುಂದದ ಬಾಬಾಸಾಹೇಬ, ಪೇಶ್ವೆ ನಾನಾಸಾಹೇಬ, ಹಮ್ಮಿಗಿಯ ಕೆಂಚನಗೌಡ, ಡಂಬಳದ ದೇಸಾಯಿ, ಕುವಲಕೊಪ್ಪದ ಸರನಾಡಗೌಡ, ನರಗುಂದದ ಬಾಬಾಸಾಹೇಬ, ಕೊಪ್ಪಳದ ಮುಗುದಂ ಮೋದಿನ ನಾಯಕರು ಪ್ರಮುಖರು.[೧೬]

**ಭೀಮರಾಯ ಮತ್ತು ನರುಗುಂದದ ಬಾಬಾಸಾಹೇಬನೊಂದಿಗೆ ಸಂಪರ್ಕ** :- ನರಗುಂದದ ಬಾಬಾಸಾಹೇಬನಿಗೆ ಶಸ್ತ್ರಾಸ್ತ್ರಗಳನ್ನು ತಂದೊಪ್ಪಿಸುವಂತೆ ಬ್ರಿಟಿಷರಿಂದ ಆಜ್ಞೆ ಬಂದಾಗ, ಬಾಬಾಸಾಹೇಬನು ತನ್ನ ಸೇವಕನಾದ ಬಸಪ್ಪನನ್ನು ಭೀಮರಾಯನ ಬಳಿ ಸಂದೇಶಕಾರನನ್ನಾಗಿ ಕಳುಹಿಸಿ, ನಿಶ್ಯಸ್ತ್ರೀಕರಣದ ವಿಚಾರವನ್ನು ತಿಳಿಸಿ, ತಾವು ಮುಂದೆ ತೆಗೆದುಕೊಳ್ಳಬೇಕಾದ ಕ್ರಮ ಮತ್ತು ನಿರ್ಧಾರಗಳ ಬಗ್ಗೆ ಸಹಾಯ, ಸಹಕಾರವನ್ನು ಯಾಚಿಸಿದ್ದನು. ಸಂದೇಶಕನ ಮೂಲಕ ಈ ವಿಷಯ ತಿಳಿದ ಭೀಮರಾಯರು, ಹಮ್ಮಿಗಿಯ ಕೆಂಚನಗೌಡರೊಂದಿಗೆ ಚರ್ಚಿಸಿ, ಬಾಬಾಸಾಹೇಬರಿಗೆ ಸಹಾಯ ಮಾಡುವ ನಿರ್ಧಾರಕ್ಕೆ ಬಂದರು. ಈ ಬೆಳವಣಿಗೆಯಿಂದ ತಿಳಿದು ಬರುವ ವಿಚಾರವೆಂದರೆ ಈ ಬಂಡಾಯಕ್ಕೆ ಮೂಲ ಪ್ರೇರಣೆ ಮಾಡಿದವರು ಬಾಬಾಸಾಹೇಬರು ಎನ್ನುವುದು. ಮುಂದೆ ಭೀಮರಾಯರ ಗುಮಾಸ್ತ ನೀಡಿರುವ ತಪ್ಪೊಪ್ಪಿಗೆ ಹೇಳಿಕೆಯಲ್ಲಿ ಇದರ ಬಗ್ಗೆ ವಿವರವಾಗಿ ಚರ್ಚಿಸಲಾಗಿದೆ.

**ಪೇಶ್ವೆ ನಾನಾಸಾಹೇಬನ ಪತ್ರ** :- ಆ ದಿನಗಳಲ್ಲಿ ಮುಂಡರಗಿ ಭೀಮರಾಯರು ಮತ್ತು ಪೇಶ್ವೆ ನಾನಾಸಾಹೇಬನ ನಡುವೆ ಬಂಡಾಯದ ಬಗ್ಗೆ ಗುಪ್ತ ಪತ್ರ ವ್ಯವಹಾರಗಳು ನಡೆದವು. ಭೀಮರಾಯರಿಗೆ ನಾನಾಸಾಹೇಬ ಬರೆದ ಕೆಲವು ಪತ್ರಗಳನ್ನು ಬ್ರಿಟಿಷರು ವಶಪಡಿಸಿಕೊಂಡಿದ್ದು, ಇದಕ್ಕೆ ನಿದರ್ಶನವಾಗಿ ಒಂದು ಪತ್ರದ ವಿವರವನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

'ಪಂತ ಪ್ರಧಾನರಾದ ಧೋಂಡೋ ಪಂತ್ ನಾನಾ ಪೇಶ್ವೆ ಇವರು', ಎಲ್ಲಾ ಸುರಂಜಾಮದಾರರು, ಜಾಗೀರ್‌ದಾರರು, ದೇಶಮುಖರು, ದೇಶಪಾಂಡೆಗಳು ಮತ್ತು ಇತರ ಜಮೀನುದಾರರು, ಪಟೇಲರು ಕುಲಕರ್ಣಿಗಳು, ನಾಯಬವಾಡರು, ಶೆಟಿಸಂಧಿಗಳು ಮತ್ತು ದಕ್ಷಿಣ ಹಾಗೂ ಕರ್ನಾಟಕದ ಸಕಲ ಜನರಿಗೂ ಈ ಮೂಲಕ ಆಜ್ಞಾ ಮಾಡಿ ಹೊರಡಿಸಿದ ಘೋಷಣೆ ಪ್ರಕಟಣೆ, ಉದ್ಘೋಷಣೆಯೆಂದರೆ,

"ಕಾಫರರಾದ (ಧರ್ಮಾಂಧರು) ಇಂಗ್ಲಿಷರು ವ್ಯಾಪಾರ ಮಾಡುವ ನೆಪದಲ್ಲಿ ಈ ದೇಶಕ್ಕೆ ಬಂದರು. ನಂತರ ನಮ್ಮ ಸರಂಜಾಮದಾರರಲ್ಲಿಯೇ ಬಂಡಾಯಕ್ಕೆ ಒಳಸಂಚಿನ ಮೂಲಕ ಪ್ರಚೋದಿಸಿ, ಸರಕಾರ

ಸಂಸ್ಥಾನಗಳನ್ನು ಉರುಳಿಸುವ ಯತ್ನದ ಸಂಚು ರೂಪಿಸಿ, ಹಿಂದೂ ಮತ್ತು ಮಹಮ್ಮದರ ಎಲ್ಲ ಸಂಸ್ಥಾನಗಳನ್ನು, ರಾಜ್ಯಗಳನ್ನು ವಶಪಡಿಸಿಕೊಂಡಿದ್ದಲ್ಲದೇ, ಕೆಲವು ಅರಸರು, ಅವರ ವಂಶಜರು ಸಂಸ್ಥಾನಿಕರನ್ನು ಸೆರೆವಾಸಕ್ಕೆ ತಳ್ಳಿದರು ಮತ್ತು ಕೆಲವರನ್ನು ನಿರ್ಗತಿಕರನ್ನಾಗಿಸಿ, ತಾವು ಅಧಿಕಾರವನ್ನು, ಅಧಿಕಾರದ ಸುಖವನ್ನು ಅನುಭವಿಸುತ್ತಿದ್ದಾರೆ.

ಅನ್ಯಾಯವಾಗಿ ಜನರನ್ನು ಬಲಿ ತೆಗೆದುಕೊಂಡು ಜನರ ಪ್ರಾಣಹರಣದ ಮೂಲಕ ಅಕ್ರಮವಾಗಿ ಸಂಪತ್ತು, ಆಸ್ತಿ, ಸ್ವತ್ತುಗಳನ್ನು ವಶಪಡಿಸಿಕೊಂಡು, ದೌರ್ಜನ್ಯ, ಅಧರ್ಮದ ಮೂಲಕ ಜನರನ್ನು ಸದೆಬಡಿಯುತ್ತಿದ್ದಾರೆ.

ಇಂತಹ ಕೆಟ್ಟ ಕಾಫರರಿಗೆ ಶರಣಾಗುವುದು ಹಾಗೂ ಅವರ ಅಡಿಯಲ್ಲಿ ಬದುಕುವುದು ಅತ್ಯಂತ ಅವಮಾನಕರವಾದದ್ದರಿಂದ ಈ ತಕ್ಷಣ ಈ ಆಜ್ಞೆಯ ಅನುಸಾರ ನೀವು ಧೈರ್ಯವಾಗಿ ನಿಮ್ಮ ಖಡ್ಗಗಳನ್ನು ಹೊರತೆಗೆಯಿರಿ ಹಾಗೂ ನಿಷ್ಕರುಣೆಯಿಂದ ಕಾಫರರನ್ನು ಸದೆ ಬಡಿಯಿರಿ.

ಈ ಉದ್ಘೋಷಣೆಯನ್ನು (ಆಜ್ಞೆ) ಉಲ್ಲು ಷಾ ಬುಂಡೀಗಾಹ ಉಲ್ಲು-ಹುಜೂರ್, ದೆಹಲಿ ಸಾಮ್ರಾಟನ ಆಜ್ಞಾನುಸಾರ ಪ್ರಕಟಿಸಲಾಗಿದೆ.

ಇವರಿಂದ,

ರಾವ್ ಪಂತ್ ಪ್ರಧಾನ ಪೇಶ್ವೆ.[೧೭]

ಈ ಸಂದೇಶಕ್ಕೆ ಪ್ರತಿಕ್ರಿಯಿಸಿದ ಭೀಮರಾಯರು, ನಾನಾಸಾಹೇಬರಲ್ಲಿಗೆ ತಮ್ಮ ಪ್ರತಿನಿಧಿಗಳನ್ನು ಕಳುಹಿಸಿದರು ಎಂದು ತಿಳಿದು ಬರುತ್ತದೆ.

**ಭೀಮರಾಯ ಮತ್ತು ಹಮ್ಮಿಗಿ ಕೆಂಚನಗೌಡರೊಂದಿಗಿನ ಸಂಪರ್ಕ:-** ನರಗುಂದದ ಬಾಬಾಸಾಹೇಬನು ನಿಶ್ಶಸ್ತ್ರೀಕರಣ ವಿಚಾರವಾಗಿ ಭೀಮರಾಯರ ಸಹಾಯ, ಸಹಕಾರವನ್ನು ಕೇಳಿದರು. ಆಗ ಭೀಮರಾಯರು ತನ್ನ ಸ್ನೇಹಿತ ಮತ್ತು ಹಮ್ಮಿಗಿಯ ದೇಸಾಯಿಯಾಗಿದ್ದ ಕೆಂಚನಗೌಡರೊಂದಿಗೆ ಚರ್ಚಿಸಿ, ಬ್ರಿಟಿಷರ ನಿಶ್ಶಸ್ತ್ರೀಕರಣ ವಿಚಾರವಾಗಿ, ಬಾಬಾಸಾಹೇಬನಿಗೆ ಸಹಾಯ ನೀಡುವುದಾಗಿ ಭರವಸೆ ನೀಡಿದ್ದರು. ನಂತರ ಮರಾಠ ಪಂಥ ಪ್ರಧಾನರಾದ ದೋಂಡೋಪಂತ್ ನಾನಾ ಪೇಶ್ವೆಯವರು ಹೊರಡಿಸಿದ್ದ ಪತ್ರದಿಂದ ಪ್ರೇರಿಪಿತರಾದ ಭೀಮರಾಯ ಮತ್ತು ಕೆಂಚನಗೌಡರು ಒಟ್ಟಾಗಿ ಬ್ರಿಟಿಷರ ವಿರುದ್ಧ ದಂಗೆ ಏಳಬೇಕೆಂದು ಶಸ್ತ್ರಾಸ್ತ್ರಗಳನ್ನು ಸಂಗ್ರಹಿಸುವ ಜನರನ್ನು ಒಗ್ಗೂಡಿಸುವ, ಸುತ್ತಮುತ್ತಲಿನ ನಾಯಕರನ್ನು ಸಂಘಟಿಸುವ ಕಾರ್ಯದಲ್ಲಿ ತೊಡಗಿದರು. ಮುಂದೆ ಇವರಿಬ್ಬರು ಒಗ್ಗೂಡಿ ಕೊಪ್ಪಳ ಕೋಟೆಯನ್ನು ವಶಪಡಿಸಿಕೊಂಡು ಬ್ರಿಟಿಷರ ವಿರುದ್ಧ ಹೋರಾಡಿದರು.[೧೮]

**೫.೫. ಭೀಮರಾಯರ ಹೋರಾಟದ ಗತಿ**

ಬ್ರಿಟಿಷರು ಜಾರಿಗೊಳಿಸಿದ ಹೊಸ ಆಡಳಿತ ನೀತಿಗಳಿಂದಾಗಿ ಭಾರತದ ವಿವಿಧ ವರ್ಗದ ಜನರು ಶೋಷಣೆಗೆ ಒಳಗಾಗಿ ನಿರ್ಗತಿಕರಾಗಬೇಕಾಯಿತು. ನಾಡು ಅಧಃಪತನದ ದಾರಿ ಹಿಡಿದಿತ್ತು. ಬ್ರಿಟಿಷರ ಆಕ್ರಮಣ ನೀತಿಯನ್ನು ವಿರೋಧಿಸಿ ಉತ್ತರ ಭಾರತದ ಅನೇಕ ಸ್ಥಳಗಳಲ್ಲಿ, ವಿವಿಧ ವರ್ಗಗಳಿಂದ

ನಡೆದ ಪ್ರತಿಭಟನೆ ಹಾಗೂ ಬಂಡಾಯಗಳನ್ನು ಬ್ರಿಟಿಷರು ದೌರ್ಜನ್ಯ ಹಾಗೂ ಕ್ರೂರ ರೀತಿಯಿಂದ ದಮನ ಮಾಡಿದ್ದರು. ಈ ಎಲ್ಲ ಬೆಳವಣಿಗೆಯನ್ನು ಗಮನಿಸುತ್ತಿದ್ದ ಭೀಮರಾಯರಲ್ಲಿ ನಾಡಿನ ಜನರ ಬಗ್ಗೆ ಅನುಕಂಪ ಹಾಗೂ ಬ್ರಿಟಿಷರ ಬಗ್ಗೆ ಪ್ರತಿರೋಧ ಬೆಳೆಯಲು ಕಾರಣವಾಯಿತು.

ವಿವಿಧ ನಾಯಕರು ಹಾಗೂ ದೇಸಾಯಿಗಳೊಡನೆ ಸಂಪರ್ಕ ಮತ್ತು ಸಮಾಲೋಚನೆ ನಡೆಸುತ್ತಾ, ಕಂದಾಯವನ್ನು ಪಾವತಿ ಮಾಡದಂತೆ ರೈತರಿಗೆ ಕರೆ ಕೊಡುವ ಮೂಲಕ ಬಂಡಾಯದ ಪೂರ್ವಸಿದ್ಧತೆಯಲ್ಲಿ ತೊಡಗಿದರು. ಕ್ರಮೇಣ ತನ್ನ ಸುತ್ತಮುತ್ತಲಿನ ಜನರನ್ನು ಒಂದುಗೂಡಿಸುತ್ತಾ, ನಾನಾಸಾಹೇಬ ಮುಂತಾದವರೊಡನೆ ಪತ್ರ ವ್ಯವಹಾರ ಮಾಡುತ್ತಾ ಶಸ್ತ್ರಾಸ್ತ್ರಗಳನ್ನು ಕಲೆ ಹಾಕುತ್ತಾ ಕ್ರಾಂತಿಕಾರಿ ಚಟುವಟಿಕೆಗಳನ್ನು ಆರಂಭಿಸಿದ್ದರು. ಇವರ ಚಟುವಟಿಕೆಗಳ ಕುರಿತು ಅನುಮಾನ ಬಂದ ಸುತ್ತಮುತ್ತಲಿನ ಇವರ ವಿರೋಧಿಗಳು ಬ್ರಿಟಿಷರಿಗೆ ದೂರು ನೀಡತೊಡಗಿದರು. ಭೀಮರಾಯರ ಚಲನವಲನಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದ ಧಾರವಾಡ ಪೊಲೀಸ್ ಸೂಪರಿಟೆಂಡೆಂಟರು ಧಾರವಾಡದ ಮ್ಯಾಜಿಸ್ಟ್ರೇಟರಿಗೆ, 'ಈ ಭೀಮರಾಯನು ಅಪಾಯಕಾರಿ ವ್ಯಕ್ತಿ' ಎಂದು ತಿಳಿಸಿ ಎರಡು, ಮೂರು ಸಲ ಪತ್ರ ಬರೆದನು ಮತ್ತು ರಾಜದ್ರೋಹದ ಪರಿಣಾಮಗಳನ್ನು ಕುರಿತು, ಭೀಮರಾಯನಿಗೆ ಕಠಿಣವಾದ ಎಚ್ಚರಿಕೆ ನೀಡಿ ಅವರ ಚಲನವಲನಗಳನ್ನು ಗಮನಿಸತೊಡಗಿದರು.[೧೯]

ಭೀಮರಾಯರು ಬ್ರಿಟಿಷರ ವಿರುದ್ಧ ಪ್ರತಿರೋಧ ಒಡ್ಡಲು ಪೂರ್ವಸಿದ್ಧತೆಯಲ್ಲಿದ್ದಾಗ, ಬಂಗಾಳದ ಬ್ಯಾರಕ್‌ಪುರದಲ್ಲಿ ಮಂಗಲಪಾಂಡೆ ಎಂಬ ಸಿಪಾಯಿ ಬ್ರಿಟಿಷರ ವಿರುದ್ಧ ೨೯ ಮಾರ್ಚ್ ೧೮೫೭ರಂದು ದಂಗೆ ಎದ್ದನೆಂದು, ನಂತರ ಅವನನ್ನು ಏಪ್ರಿಲ್ ೮ರಂದು ನೇಣಿಗೆ ಹಾಕಲಾಯಿತೆಂದು, ನಂತರ ದೇಶೀಯ ಸೈನಿಕರು ದಂಗೆ ಎದ್ದು ಬ್ರಿಟಿಷ್ ಅಧಿಕಾರಿಗಳ ಮೇಲೇರಗಿದ ಸುದ್ಧಿ ಧಾರವಾಡಕ್ಕೂ ತಲುಪಿತು. ಈ ಬೆಳವಣಿಗೆಗಳಿಂದ ಸ್ಫೂರ್ತಿಗೊಂಡ ಭೀಮರಾಯರು ಮುಂದಿನ ಯೋಜನೆಗಳನ್ನು ರೂಪಿಸಲು, ಹಮ್ಮಿಗಿ ಕೆಂಚನಗೌಡ, ಡಂಬಳದ ಬಹದ್ದೂರ ದೇಸಾಯಿ, ನರಗುಂದದ ಬಾಬಾಸಾಹೇಬ ಇವರೊಂದಿಗೆ ಸಮಾಲೋಚಿಸಿ, ತಾವೆಲ್ಲರೂ ನಿರ್ದಿಷ್ಟ ದಿನದಂದು ಒಂದೇ ಕಾಲಕ್ಕೆ ಬಂಡಾಯ ಏಳುವುದೆಂಬ ತೀರ್ಮಾನಕ್ಕೆ ಬಂದರು. ಈ ಸಮಯದಲ್ಲಿ ಭೀಮರಾಯರ ಚಲನವಲಗಳನ್ನು ಸೂಕ್ಷ್ಮವಾಗಿ ಮತ್ತು ಸಂಶಯಾಸ್ಪದವಾಗಿ ಗಮನಿಸುತ್ತಿದ್ದ ಬ್ರಿಟಿಷರಿಗೆ, ಈ ಸಂಶಯ ನಿಜವೆಂದು ದಿಟವಾಯಿತು. ದಿನಾಂಕ ೧ನೇ ಆಗಸ್ಟ್ ೧೮೫೭ರಂದು ಬಳ್ಳಾರಿ ಕಲೆಕ್ಟರ್ ಅವರು ಧಾರವಾಡದ ಕಲೆಕ್ಟರ್ ಅವರಿಗೆ ಪತ್ರವೊಂದನ್ನು ಬರೆದು, ಮುಂಡರಗಿ ಭೀಮರಾಯ ಮತ್ತು ಡಂಬಳದ ದೇಸಾಯಿವರು ಸೇರಿಕೊಂಡು, ಡಂಬಳದಲ್ಲಿ ಕೆರೆಕಟ್ಟುವ ನೆಪದಲ್ಲಿ ಮುನ್ನೂರು, ನಾನೂರು ಜನರನ್ನು ಸೇರಿಸಿ, ಸರಕಾರದ ವಿರುದ್ಧ ಪಿತೂರಿ ನಡೆಸಿದ್ದಾರೆ ಎನ್ನುವ ವಿಷಯವನ್ನು ತಿಳಿಸಿದರು. ಆಗ ಧಾರವಾಡದ ಕಲೆಕ್ಟರನು ಭೀಮರಾಯ ಮತ್ತು ದೇಸಾಯಿಯವರನ್ನು ಕರೆದು ವಿಚಾರಣೆಗೆ ಒಳಪಡಿಸಿದನು. ಆದರೆ ಬ್ರಿಟಿಷರ ಸೇವೆಯಲ್ಲಿಯೇ ಪಳಗಿ, ಅವರ ನಾಡಿಮಿಡಿತಗಳನ್ನು ಬಲ್ಲವರಾಗಿದ್ದ ಮುಂಡರಗಿ ಭೀಮರಾಯ ಬ್ರಿಟಿಷರಿಗೆ ವಿಶೇಷ ಗೌರವವನ್ನು, ವಿಧೇಯತೆಯನ್ನು ಸೂಚಿಸಿ, ಬ್ರಿಟಿಷ್ ಪ್ರಭುತ್ವಕ್ಕೆ ತಾನು ಸದಾ ವಿಧೇಯನೆಂದು ತೋರ್ಪಡಿಸಿ, ಪಿತೂರಿಯ ಮಾಹಿತಿಯು ಸುಳ್ಳು ಸುದ್ಧಿ ಎಂದು ಬ್ರಿಟಿಷರಿಗೆ ದೃಢಪಡಿಸಿ ಹಿಂತಿರುಗಿದರು.[೨೦]

ಈ ಘಟನೆಯ ನಂತರ ಭೀಮರಾಯರು ತನ್ನ ಕಾರ್ಯಕ್ಷೇತ್ರವನ್ನು ಬಳ್ಳಾರಿ ಪ್ರದೇಶಕ್ಕೆ ಸ್ಥಳಾಂತರಿಸಿದರು. ಅಲ್ಲಿ ಹೊಸಪೇಟೆ, ಕಮಲಾಪುರ ಹಾಗೂ ಸುತ್ತಮುತ್ತಲ ಗ್ರಾಮದ ರೈತರನ್ನು ಸಂಘಟಿಸುತ್ತಾ, ಬಂಡಾಯಕ್ಕೆ ಬೇಕಾದ ಮದ್ದು - ಗುಂಡುಗಳು, ಶಸ್ತ್ರಾಸ್ತ್ರಗಳನ್ನು ಸಂಗ್ರಹಿಸುವಲ್ಲಿ ನಿರತನಾದರು.

ಕೊಪ್ಪಳದ ಮುಗುದಂ ಮೋದಿನಾಯಕರನ್ನು ಭೇಟಿ ಮಾಡಿ ಬ್ರಿಟಿಷರ ವಿರುದ್ಧ ಹೋರಾಡಲು ಸಹಾಯ ಯಾಚಿಸಿದರು. ನಂತರ ತನ್ನ ಕಾರಕೂನನಾದ ನರಹರಿಯನ್ನು ಆನೆಗೊಂದಿಗೆ ಕಳುಹಿಸಿ ಸಹಾಯ ಕೇಳಿದರು. ಆನೆಗೊಂದಿಯ ರಾಜನು ತನ್ನ ಜಮೇದಾರನನ್ನು ಭೀಮರಾಯರಲ್ಲಿಗೆ ಕಳುಹಿಸಿ, ತನ್ನ ಬೆಂಬಲವನ್ನು ಸೂಚಿಸಿದ್ದರು. ಈ ಮೇಲಿನ ಎಲ್ಲ ಅಂಶಗಳನ್ನು ಗಮನಿಸಿದರೆ, ಭೀಮರಾಯರು ಬ್ರಿಟಿಷರ ವಿರುದ್ಧ ಬಂಡಾಯಕ್ಕೆ ವ್ಯವಸ್ಥಿತವಾಗಿ ಸಾಕಷ್ಟು ಪೂರ್ವಸಿದ್ಧತೆಗಳನ್ನು ಮಾಡಿಕೊಂಡಿದ್ದರೆಂದು ತಿಳಿಯಬೇಕಾಗುತ್ತದೆ.

ಭೀಮರಾಯರು ಮುಂಡರಗಿ ಮತ್ತು ಸುತ್ತಲಿನ ಪ್ರದೇಶದ ಜನರನ್ನು ಸಂಘಟಿಸಿ, ಬಂಡಾಯಕ್ಕೆ ಸಜ್ಜುಗೊಳಿಸುವ ಕಾರ್ಯದಲ್ಲಿ ತೊಡಗಿದರು. ಜನರಲ್ಲಿ ಕ್ರಾಂತಿಕಾರಕ ತತ್ವಗಳನ್ನು ತುಂಬಿ, ರೈತರು ಕಂದಾಯ ಸಲ್ಲಿಸದಂತೆ ಪ್ರೇರೇಪಿಸಿ, ಬ್ರಿಟಿಷ್ ಪ್ರಭುತ್ವಕ್ಕೆ ಸವಾಲಾಗತೊಡಗಿದರು. ಹೀಗಾಗಿ ಬ್ರಿಟಿಷರ ವಕ್ರದೃಷ್ಟಿ ಮತ್ತೆ ಭೀಮರಾಯರ ಕಡೆ ತಿರುಗಿತಲ್ಲದೇ ಹಮ್ಮಿಗಿ ಮತ್ತು ಲಕ್ಷೇಶ್ವರದಲ್ಲಿ ಗಂಧಕ ಮತ್ತು ಶಸ್ತ್ರಾಸ್ತ್ರಗಳನ್ನು ಸಂಗ್ರಹಿಸಿದ ಬಗ್ಗೆ ಮಾಹಿತಿ ಪಡೆದ ಬ್ರಿಟಿಷರು ಹಮ್ಮಿಗಿಯ ಮೇಲೆ ದಾಳಿ ಮಾಡಲು, ಫೌಜುದಾರನ ನೇತೃತ್ವದಲ್ಲಿ ಸಿಪಾಯಿಗಳನ್ನು ಕಳುಹಿಸಿದರು. ಫೌಜುದಾರನು ಹಮ್ಮಿಗಿಯ ಮೇಲೆ ದಾಳಿ ಮಾಡಿ, ದೇಸಾಯಿಯವರ ವಾಡೆಯನ್ನು, ಶೋಧಿಸಿ ಅಲ್ಲಿ ಸಂಗ್ರಹಿಸಿಟ್ಟಿದ್ದ ಶಸ್ತ್ರಾಸ್ತ್ರಗಳನ್ನು ವಶಪಡಿಸಿಕೊಂಡು, ವಾಡೆಗೆ ಮೊಹರು ಹಾಕಿ, ಪೊಲೀಸರನ್ನು ಕಾವಲು ಹಾಕಲಾಯಿತು.

ಈ ದಾಳಿಯ ವಿಷಯ ತಿಳಿದ ಭೀಮರಾಯರು ಅದೇ ದಿನ ರಾತ್ರಿ ಹಮ್ಮಿಗಿ ಕೆಂಚನಗೌಡರೊಂದಿಗೆ, ಹಮ್ಮಿಗಿಯ ವಾಡೆಯ ಮೇಲೆ ದಾಳಿ ಮಾಡಿ, ಕಾವಲುಗಾರನನ್ನು ಕೊಂದು, ಮದ್ದು-ಗುಂಡುಗಳನ್ನು ಲೂಟಿ ಮಾಡಿಕೊಂಡು ಹೋದರು. ಅಲ್ಲಿಂದ ಭೀಮರಾಯ ಮತ್ತು ಕೆಂಚನಗೌಡರು ಡಂಬಳಕ್ಕೆ ಬಂದು, ಅಲ್ಲಿನ ಸರಕಾರಿ ಖಜಾನೆಯನ್ನು ಲೂಟಿ ಮಾಡಿ, ಬಂದೂಕು, ಕಾಡತೂಸು ಶಸ್ತ್ರಾಸ್ತ್ರಗಳನ್ನು ತೆಗೆದುಕೊಂಡು ಹೋದರು.[೨೧] ದಿನ ಕಳೆದಂತೆ ಇವರ ಈ ಚಟುವಟಿಕೆಗಳಿಗೆ ಬೆಂಬಲವಾಗಿ ಅನೇಕ ಕ್ರಾಂತಿಕಾರರು ಇವರೊಂದಿಗೆ ಸೇರ್ಪಡೆಗೊಂಡರು. ಕ್ರಾಂತಿಕಾರರನ್ನು ಸಂಘಟಿಸಿಕೊಂಡ ಭೀಮರಾಯರು ಗದಗಿಗೆ ಬಂದು, ಅಲ್ಲಿ ಅಂಚೆ ಕಛೇರಿ, ತಂತಿ ಕಾರ್ಯಾಲಯಗಳನ್ನು, ನಾಶ ಮಾಡಿ ಸೊತ್ತನ್ನು ದೋಚಿದರು. ಹೀಗೆ ಭೀಮರಾಯರು ಹಂತ ಹಂತವಾಗಿ ಬಹಿರಂಗವಾಗಿಯೇ ಬಂಡಾಯ ಸಾರಿದರು.

ಇದೇ ಸಮಯದಲ್ಲಿ ಭೀಮರಾಯರು ಕೊಪ್ಪಳಕ್ಕೆ ಬರುವ ಸುದ್ದಿಯನ್ನು ತಿಳಿದ ಕೊಪ್ಪಳದ ತಹಸೀಲ್ದಾರರಾಗಿದ್ದ ಮೊಹಮದ್ ಹನೀಫರು, ಭೀಮರಾಯರ ಕುಟುಂಬದ ಸದಸ್ಯರಾದ ಅವರ ಇಬ್ಬರು ಪತ್ನಿಯರನ್ನು ಹಾಗೂ ಇಬ್ಬರು ಮಕ್ಕಳನ್ನು ಸೆರೆ ಹಿಡಿದು, ಕೊಪ್ಪಳ ಕೋಟೆಯಲ್ಲಿ ಬಂಧನದಲ್ಲಿಟ್ಟರು. ಕೊಪ್ಪಳ ಕೋಟೆಗೆ ಸೂಕ್ತ ಬಂದೋಬಸ್ತ್ ಮಾಡಿ, ಭೀಮರಾಯರನ್ನು ಹುಡುಕುತ್ತ ಹೊರಟರು.[೨೨]

ಮತ್ತು ಭೀಮರಾಯರನ್ನು ಹಿಡಿದುಕೊಟ್ಟವರಿಗೆ ಐದು ಸಾವಿರ ರೂ. ಬಹುಮಾನವನ್ನು ಬ್ರಿಟಿಷ್ ಸರಕಾರ ಘೋಷಿಸಿತು.

ತಮ್ಮ ಹೆಂಡತಿ ಮತ್ತು ಮಕ್ಕಳನ್ನು ಬಂಧಿಸಿಟ್ಟ ವಿಷಯವನ್ನು ತಿಳಿದ ಭೀಮರಾಯರಿಗೆ ತಮ್ಮ ಹೆಂಡತಿ ಮಕ್ಕಳನ್ನು ಬಂಧಮುಕ್ತಗೊಳಿಸುವುದು ಅವಶ್ಯವಾಗಿತ್ತು. ಹಾಗಾಗಿ ಕೊಪ್ಪಳ ಕೋಟೆಯತ್ತ ಸಾಗುವ ಮನಸ್ಸು ಮಾಡಿದರು. ಜೊತೆಗೆ ಈ ಹಿಂದೆ ಕೊಪ್ಪಳದ ಕೋಟೆಯ ಒಳಗಡೆ ಭರಮಪ್ಪ ನಾಯಕರ ನಂಬಿಕೆಗೆ ಪಾತ್ರರಾದ ಸಹಚರರಿದ್ದು, ಕೋಟೆಯನ್ನು ವಶಪಡಿಸಿಕೊಳ್ಳುವುದು ಕಷ್ಟವಾಗಲಾರದು ಎನ್ನುವ ವಿಷಯವನ್ನು ಭರಮಪ್ಪನಾಯಕನಿಂದ ತಿಳಿದಿದ್ದ ಭೀಮರಾಯರು, ಭರಮಪ್ಪನಾಯಕನನ್ನು ಸಂಪರ್ಕಿಸಿ, ಆತನ ಸಹಾಯದಿಂದ, ಕೊಪ್ಪಳ ತಹಸೀಲ್ದಾರರ ಕಣ್ಣು ತಪ್ಪಿಸಿ, ದಾರಿ ಬದಲಿಸಿ, ಬೇರೆ ಮಾರ್ಗವಾಗಿ ಸಂಚರಿಸಿ, ಕೊಪ್ಪಳ ಕೋಟೆಯನ್ನು ವಶಪಡಿಸಿಕೊಂಡರು ಹಾಗೂ ಅವರಿಗೆ ಅಲ್ಲಿ ಕ್ರಾಂತಿಕಾರಿ ಗಳಿಂದಲೂ ಉತ್ಸಾಹಭರಿತ ಸ್ವಾಗತ ದೊರೆಯಿತು. ಹೀಗೆ ಕೊಪ್ಪಳದ ಕೋಟೆಯನ್ನು ತಮ್ಮ ಚಟುವಟಿಕೆಗಳ ಕೇಂದ್ರವಾಗಿಸಿಕೊಂಡರು.

ಕೊಪ್ಪಳ ಕೋಟೆಯು ಭೀಮರಾಯರ ವಶವಾದ ಸುದ್ದಿ ಬ್ರಿಟಿಷರಿಗೆ ತಿಳಿಯುತ್ತಲೇ, ಅವರು ತಕ್ಷಣವೇ, ಧಾರವಾಡ, ಬಳ್ಳಾರಿ, ಬೆಳಗಾವಿ, ರಾಯಚೂರು, ಹೈದರಾಬಾದ್‌ಗಳಿಂದ ಸೈನ್ಯವನ್ನು ಕೊಪ್ಪಳಕ್ಕೆ ಕಳುಹಿಸಿದರು. ಮೇ ೩೧ರ ವೇಳೆಗೆ ಎಲ್ಲ ಕಡೆಯಿಂದ ಸೈನ್ಯ ಬಂದು ಕೊಪ್ಪಳ ಕೋಟೆಯನ್ನು ಸುತ್ತುವರಿದು, ದಾಳಿಯನ್ನು ಆರಂಭಿಸಿದರು.[೨೩]

ಭೀಮರಾಯರನ್ನು ಸೆರೆ ಹಿಡಿಯಲು ಅಥವಾ ಸೋಲಿಸಲು ಬೇರೆ ಬೇರೆ ಪ್ರದೇಶಗಳಿಂದ ಬ್ರಿಟಿಷ್ ಸೈನ್ಯ ಬಂದ ಅಂಶವನ್ನು ಗಮನಿಸಿದರೆ, ಆಗ ಭೀಮರಾಯರ ಬಂಡಾಯದ ಸ್ವರೂಪ, ಭೀಮರಾಯರ ಬಗ್ಗೆ ಬ್ರಿಟಿಷರಿಗೆ ಉಂಟಾಗಿದ್ದ ಭಯ, ಅವರ ಸಾಮರ್ಥ್ಯ ಮತ್ತು ಅವರನ್ನು ಹತ್ತಿಕ್ಕುವುದು ಬ್ರಿಟಿಷರಿಗೆ ಎಷ್ಟು ಅನಿವಾರ್ಯತೆ ಆಗಿತ್ತು ಎಂಬುದು ಹಾಗೂ ಕೊಪ್ಪಳ ಕೋಟೆಯನ್ನು ಬ್ರಿಟಿಷರು ಪುನರ್‌ವಶಪಡಿಸಿ ಕೊಳ್ಳುವ ಅವಶ್ಯಕತೆ ಎಷ್ಟು ಮುಖ್ಯವಾಗಿತ್ತು ಎಂಬುದು ತಿಳಿದು ಬರುತ್ತದೆ.

ಬ್ರಿಟಿಷರು ನಿರಂತರವಾಗಿ ಕೋಟೆಯ ಮೇಲೆ ದಾಳಿ ನಡೆಸಿದರೂ ಸಹ ಅವರ ಪ್ರಯತ್ನ ವಿಫಲ ವಾಗಿತ್ತು. ಈ ಸಮಯಕ್ಕೆ ಅಂದರೆ ಜೂನ್ ೧ರ ವೇಳೆಗೆ ಲೆಫ್ಟಿನೆಂಟ್ ಫೆಡ್ಲರನು ತನ್ನ ಬ್ರಿಟಿಷ್ ಸೈನ್ಯ ದೊಡನೆ ಹಾಗೂ ರಾಯಚೂರಿನ ಡೆಪ್ಯುಟಿ ಕಮೀಷನರ್ ಟೇಲರ್ ಸಹ ಕೋಟೆಯನ್ನು ಸುತ್ತುವರಿದು ದಾಳಿಯನ್ನು ಆರಂಭಿಸಿದರು.

ಮೇಜರ್ ಹ್ಯೂಸ್‌ನು ಭೀಮರಾಯನಿಗೆ ಮೂರು ತಾಸುಗಳ ಒಳಗಾಗಿ ಶರಣಾಗಬೇಕೆಂದು, ಇಲ್ಲದಿದ್ದರೆ ಗಂಭೀರ ಪರಿಣಾಮ ಎದುರಿಸಬೇಕಾಗುತ್ತದೆ ಎನ್ನುವ ಎಚ್ಚರಿಕೆಯನ್ನು ನೀಡಿದನು.[೨೪] ಆದರೆ ಇದ್ಯಾವುದಕ್ಕೂ ಹೆದರದ ಭೀಮರಾಯರು, ಕೋಟೆಯ ಒಳಗಿನಿಂದಲೇ ದಾಳಿಯನ್ನು ಮುಂದುವರಿಸಿದರು. ಕೋಟೆಯನ್ನು ಒಳ ಪ್ರವೇಶಿಸಲು ವಿಫಲರಾದ ಬ್ರಿಟಿಷರು, ಕೋಟೆಯೊಳಗಿದ್ದ ಸೈನಿಕರಿಗೆ ಹಣದ ಆಮಿಷ ಒಡ್ಡಿದ್ದರು. ಇಂತಹ ಆಮಿಷಕ್ಕೆ ಬಲಿಯಾದ ದ್ರೋಹಿಗಳು, ಕೋಟೆಯ ಬಾಗಿಲನ್ನು ತೆರೆದರು. ತಕ್ಷಣವೇ ಬ್ರಿಟಿಷ್ ಸೈನ್ಯ ಕೋಟೆಯೊಳಗೆ ಪ್ರವೇಶಿಸಿ, ದಾಳಿಯನ್ನು ಆರಂಭಿಸಿತು.

ಆಗ, ದ್ರೋಹಿಗಳ ಈ ಕೃತ್ಯ ತಿಳಿದ ಭೀಮರಾಯರು ಕೋಟೆಯ ದ್ವಾರದ ಕಡೆಗೆ ಬಂದು, ಕೋಟೆ ಬಾಗಿಲನ್ನು ತೆರೆದ ವಂಚಕರನ್ನು ಅಲ್ಲಿಯೇ ಕೊಂದು ಹಾಕಿದರು. ಈ ಬಗೆಯ ನಯವಂಚಕತನವೇ ಭಾರತವು ವಿದೇಶೀಯರ ಕೈವಶವಾಗುವುದಕ್ಕೆ ಮೂಲ ಕಾರಣವಾದದ್ದು.

ಭೀಮರಾಯರು ಕೋಟೆಯ ಒಳ ನುಗ್ಗಿದ್ದ ಬ್ರಿಟಿಷರನ್ನು ತಡೆಯಲು ಸಾಕಷ್ಟು ಪ್ರಯತ್ನ ಮಾಡಿದರಾದರೂ, ಬ್ರಿಟಿಷರ ಬಂದೂಕು, ಫಿರಂಗಿದಳದ ಮುಂದೆ ಕ್ರಾಂತಿಕಾರರು ಅಸಹಾಯಕಾರರಾಗಿದ್ದರು. ಜೊತೆಗೆ ಭೀಮರಾಯರು ಸಂಗ್ರಹಿಸಿದ್ದ ಶಸ್ತ್ರಾಸ್ತ್ರಗಳು, ಮದ್ದು-ಗುಂಡುಗಳ ಸಂಗ್ರಹ ಕೂಡ ಮುಗಿಯುತ್ತ ಬಂದಿತ್ತು. ಇಂತಹ ಸಂದಿಗ್ಧ ಪರಿಸ್ಥಿತಿಯನ್ನು ಕಂಡ ಕೆಂಚನಗೌಡರು, ಇನ್ನು ಹೋರಾಟ ಮುಂದುವರೆಸುವುದರಲ್ಲಿ ಪ್ರಯೋಜನ ಇಲ್ಲವೆಂದು ತಿಳಿದು, ಭೀಮರಾಯರ ಬಳಿ ಬಂದು, ಈ ಪರಿಸ್ಥಿತಿಯಲ್ಲಿ ಹೋರಾಡಿ ಉಪಯೋಗ ಇಲ್ಲವೆಂದು ಪಲಾಯನ ಮಾಡುವುದು ಇಲ್ಲವೆ ಶರಣಾಗತಿಯೊಂದೇ ಮುಂದಿರುವ ಮಾರ್ಗ ಎಂದಾಗ ಇಂತಹ ಮಾತನ್ನು ಹಮ್ಮಿಗಿಯ ಕೆಂಚನಗೌಡ ದೇಸಾಯಿಗಳಿಂದ, ನಿರೀಕ್ಷಿಸಿರದ ಭೀಮರಾಯರು ಸಿಟ್ಟಿನಿಂದ ಕೆಂಚನಗೌಡರನ್ನು ಅಲ್ಲಿಯೇ ಗುಂಡಿಕ್ಕಿ ಸಾಯಿಸಿದರು. ನಂತರ ತಾವು ಸಹ ಅಲ್ಲೇ ಗುಂಡಿಕ್ಕಿಕೊಂಡು ಹುತಾತ್ಮರಾದರು.[೨೬] ಇಲ್ಲಿ ಅವರೇ ಗುಂಡಿಕ್ಕಿಕೊಂಡು ಮಡಿದ ಅಂಶವನ್ನು ಗಮನಿಸಿದರೆ, ತನ್ನ ನಾಡು, ಜನ ಹಾಗೂ ಸ್ವಾತಂತ್ರ್ಯ ಸಾಧನೆಗಾಗಿ ಎಲ್ಲವನ್ನು ತೊರೆದು ಹೋರಾಟಕ್ಕಿಳಿದಿದ್ದ, ಭೀಮರಾಯರಿಗೆ ಶರಣಾಗತಿಯಾಗಲಿ, ಪಲಾಯನವಾಗಲಿ ಒಗ್ಗುವ ವಿಚಾರ ಆಗಿರಲಿಲ್ಲ ಎಂಬುದು ಕಟುಸತ್ಯ. ಹಾಗಾಗಿಯೇ ಅವರು ಬ್ರಿಟಿಷರಿಗೆ ಶರಣಾಗುವುದಕ್ಕಿಂತ, ಪ್ರಾಣ ಬಿಡುವುದೇ ಹೆಚ್ಚೆಂದು ತಮ್ಮನ್ನು ತಾವೇ ಗುಂಡಿಕ್ಕಿಕೊಂಡು ಸತ್ತರು. ಈ ರೀತಿ ೧ನೇ ಜೂನ್ ೧೮೫೮ರಂದು ಭೀಮರಾಯರು ಹುತಾತ್ಮರಾದರು.

ಹೀಗೆ ಕೆಂಚನಗೌಡ ಮತ್ತು ಭೀಮರಾಯರ ಮರಣದ ನಂತರ ಅಸಹಾಯಕರಾದ ಸೈನಿಕರು ಬ್ರಿಟಿಷರಿಗೆ ಶರಣಾದರು. ಕೊಪ್ಪಳ ಕೋಟೆಯು ಬ್ರಿಟಿಷರ ವಶವಾಯಿತು. ಈ ರೀತಿ ಸಾಮ್ರಾಜ್ಯಶಾಹಿಗಳ ವಿರುದ್ಧ ಹೋರಾಡಿ ಹುತಾತ್ಮರಾದ ಭೀಮರಾಯರ ಅಂತ್ಯದೊಂದಿಗೆ, ಕರ್ನಾಟಕದಲ್ಲಿಯೂ ೧೮೫೭ರ ಹೋರಾಟದ ಚಟುವಟಿಕೆಗಳು ಅಂತ್ಯಗೊಂಡಂತಾದವು.

ಭೀಮರಾಯರ ಮರಣದ ನಂತರ ಶರಣಾದ ಎಲ್ಲ ಸೈನಿಕರನ್ನು ಬಂಧಿಸಿದ ಬ್ರಿಟಿಷರು ಅವರಲ್ಲಿ ಪ್ರಮುಖರಾದ, ೧೨೭ ಕ್ರಾಂತಿಕಾರಿಗಳನ್ನು, ಸೈನಿಕ ನ್ಯಾಯಾಲಯದಲ್ಲಿ ವಿಚಾರಣೆಗೆ ಒಳಪಡಿಸಿದರು. ಸೈನಿಕ ನ್ಯಾಯಾಲಯವು ಆ ಎಲ್ಲ ೧೨೭ ಸೈನಿಕರನ್ನು ಬಂಧಿಗಳೆಂದು ತೀರ್ಮಾನಿಸಿ ಮರಣದಂಡನೆ ಶಿಕ್ಷೆ ವಿಧಿಸಿತು. ಇವರಲ್ಲಿ ೭೭ ಕ್ರಾಂತಿಕಾರಿಗಳನ್ನು ಸಾಲಾಗಿ ನಿಲ್ಲಿಸಿ ಗುಂಡಿಟ್ಟು ಕೊಲ್ಲಲಾಯಿತು. ೪೦ ಹೋರಾಟಗಾರರಿಗೆ ೧೪ ವರ್ಷ ಶಿಕ್ಷೆಯಾಯಿತು. ೧೦ ಜನರಿಗೆ ೧೦ ವರ್ಷಗಳ ಜೈಲು ವಿಧಿಸಲಾಯಿತು. ಭೀಮರಾಯರಿಗೆ ಸಹಾಯ ಮಾಡಿದ್ದ ಮುಗದಮ್ ಮೋದಿನ ನಾಯಕನನ್ನು ಗಲ್ಲಿಗೇರಿಸಲಾಯಿತು.[೨೭]

ಇಲ್ಲಿ ೭೭ ಕ್ರಾಂತಿಕಾರಿಗಳನ್ನು ಸಾಲಾಗಿ ನಿಲ್ಲಿಸಿ ಗುಂಡಿಟ್ಟು ಕೊಂದಂತಹ ವಿಷಯವನ್ನು ವಿಮರ್ಶಿಸಿ ನೋಡಿದಾಗ, ಕೆಂಚನಗೌಡ ಮತ್ತು ಭೀಮರಾಯರಂತ ನಾಯಕರು ಮರಣ ಹೊಂದಿದ ಮೇಲೂ, ಶರಣಾದ ಸಾಮಾನ್ಯ ಸೈನಿಕರನ್ನು, ಸಾಲಾಗಿ ಗುಂಡಿಟ್ಟು ಕೊಂದ ಘಟನೆಯು ಬ್ರಿಟಿಷರ ಅಮಾನವೀಯ

ಕೃತ್ಯ ಮತ್ತು ದೌರ್ಜನ್ಯಕ್ಕೆ ಸಾಕ್ಷಿಯಾಗಿದೆ. ಆದರೆ ಬ್ರಿಟಿಷರು ಈ ರೀತಿಯ ಕ್ರಮಗಳಿಂದ ಇತರ ಕ್ರಾಂತಿಕಾರಿಗಳನ್ನು ಹತ್ತಿಕ್ಕುವ ಅಥವಾ ಭಯಪಡಿಸುವ ಉದ್ದೇಶವನ್ನು ಹೊಂದಿದ್ದರು ಎನ್ನುವುದು ಸ್ಪಷ್ಟವಾಗುತ್ತದೆ.

ಭೀಮರಾಯರ ಮುಖ್ಯ ಗುಮಾಸ್ತನಾಗಿದ್ದ, ಗುಮಾಸ್ತ ಭೀಮರಾಯ(ಭೀಮಪ್ಪ)ನನ್ನು ಸಹ ಬಂಧಿಸಿದ್ದ ಬ್ರಿಟಿಷರು ಇವನಿಗೂ ತೋಪಿನ ಬಾಯಿಗೆ ಕಟ್ಟಿ ಕೊಲ್ಲಬೇಕೆಂಬ ಶಿಕ್ಷೆ ವಿಧಿಸಿದ್ದರು. ಆದರೆ ಗುಮಾಸ್ತ ಭೀಮರಾಯನು, ತನ್ನ ಒಡೆಯ ಭೀಮರಾಯ ಮತ್ತು ಇತರರು ಹೇಗೆ ಯುದ್ಧ ಸಿದ್ಧತೆ ಮಾಡಿದ್ದರು ಎಂದು ಬ್ರಿಟಿಷ್ ಸರಕಾರಕ್ಕೆ ತಿಳಿಸಿದ್ದರಿಂದ, ಗುಮಾಸ್ತನಿಗೆ ಮರಣದ ಶಿಕ್ಷೆ ಬದಲಾಗಿ ೧೪ ವರ್ಷ ಕಠಿಣ ಶಿಕ್ಷೆ ವಿಧಿಸಿತು.

ಗುಮಾಸ್ತ ಭೀಮರಾಯ ವಿಚಾರಣೆ ವೇಳೆ ನೀಡಿದ ತಪ್ಪೊಪ್ಪಿಗೆ ಹೇಳಿಕೆಯ ಸಾರಾಂಶ ಹೀಗಿದೆ.

“ದಂಗೆಯು ಪೂರ್ವ ಯೋಜಿತವಾಗಿದ್ದು, ಮೊದಲು ದಂಗೆ ಏಳುವ ಸಲಹೆ ಬಂದದ್ದು, ನರಗುಂದದ ರಾಜನಿಂದ, ಅವರು ಡಂಬಳದ ದೇಸಾಯಿ ಮತ್ತು ಹಮ್ಮಿಗಿ ದೇಸಾಯಿಯವರೊಂದಿಗೆ ಸಂಚು ರೂಪಿಸಿ, ನಂತರ ಮುಂಡರಗಿ ಭೀಮರಾಯರ ಸಲಹೆ ಪಡೆದರು. ಇದಕ್ಕೆ ಭೀಮರಾಯರು ಸಮ್ಮತಿ ಸೂಚಿಸಿದರು. ನಂತರ ಡಂಬಳದ ದೇಸಾಯಿಯವರು, ತಮ್ಮ ಇಲಾಖೆಯ ಜನರನ್ನು ಒಗ್ಗೂಡಿಸಲು ಕಾರ್ಯಪ್ರವೃತ್ತರಾದರು. ಭೀಮರಾಯರು ಹೊಸಪೇಟೆ, ಕಮಲಾಪುರ, ಇತರ ಪ್ರದೇಶಗಳ ಜನರನ್ನು ಸಂಘಟಿಸುತ್ತ ಕಾರ್ಯಪ್ರವೃತ್ತರಾದರು. ಹೀಗೆ ಎಲ್ಲ ನಾಯಕರು ಪೂರ್ವಸಿದ್ಧತೆಗಳನ್ನು ಮಾಡಿಕೊಂಡ ನಂತರ ಎಲ್ಲ ನಾಯಕರು ಒಂದೇ ಸಮಯಕ್ಕೆ ಅಂದರೆ ೨೭ನೇ ಮೇ ೧೮೫೮ರಂದು ದಂಗೆ ಏಳುವುದೆಂದು ನಿರ್ಧರಿಸಲಾಯಿತು ಮತ್ತು ಪ್ರತಿಯೊಬ್ಬ ನಾಯಕರಿಗೂ, ತಾವು ಕಾರ್ಯಾಚರಣೆ ಮಾಡಬೇಕಾದ ನಿರ್ದಿಷ್ಟ ಪ್ರದೇಶ ಮತ್ತು ಕೆಲಸಗಳನ್ನು ತಿಳಿಸಲಾಯಿತು. ಅದರ ಪ್ರಕಾರ, ನರಗುಂದದ ಬಾಬಾಸಾಹೇಬರು ನವಲಗುಂದ ಮತ್ತು ಧಾರವಾಡದ ಕಡೆಗೆ ಧಾವಿಸುವುದೆಂದು ಮತ್ತು ದೊಡ್ಡ ಪಟ್ಟಣಗಳನ್ನು ಕೊಳ್ಳೆ ಹೊಡೆಯುವುದೆಂದು ತಿಳಿಸಲಾಯಿತು. ಭೀಮರಾಯ ಮತ್ತು ಕೆಂಚನಗೌಡರು ಕೊಪ್ಪಳದ ಕಡೆಗೆ ಧಾವಿಸಿ, ಕೊಪ್ಪಳದ ಥಾಣಾ ಮತ್ತು ಕೋಟೆಯನ್ನು ಮುತ್ತಿಗೆ ಹಾಕುವುದೆಂದು ನಿರ್ಧರಿಸಲಾಯಿತು.

ಧಾರವಾಡದ ಮ್ಯಾಜಿಸ್ಟ್ರೇಟರವರ ಕಡೆಯಿಂದ ಹಮ್ಮಿಗಿ ಕೆಂಚನಗೌಡರು ಅಡಗಿಸಿಟ್ಟ ಶಸ್ತ್ರಾಸ್ತ್ರಗಳ ಜಪ್ತಿಗೆ ಪೊಲೀಸರ ಆಗಮನದಿಂದ ೨೪ರಂದು ನಡೆಯಬೇಕಾಗಿದ್ದ ದಂಗೆಯನ್ನು ಅಕಾಲಿಕವಾಗಿ ೨೪ರಂದೇ ಆರಂಭಿಸಲಾಯಿತು. ಭೀಮರಾಯರು ಮತ್ತು ಕವಲೂರು ಗ್ರಾಮದ ತೋಬುಂಗಗೌಡರು ಭೇಟಿಯಾಗಿ ಮಾತುಕತೆ ನಡೆಸಿದರು. ನಂತರ ಭೀಮರಾಯರು ಕೊಪ್ಪಳ ಜಿಲ್ಲೆಯ ಕುಮಾರರಾಮನ ಕುಮುಟದಲ್ಲಿ, ಕೆಂಚಪ್ಪ ಮುದ್ದೀ ಸಾಹುಕಾರರನ್ನು ಭೇಟಿ ಮಾಡಿ, ಅವರ ಸಹಾಯದ ಭರವಸೆಯ ನಂತರ ಭೀಮರಾಯರು ಮತ್ತು ಕೆಂಚನಗೌಡರು ಕೊಪ್ಪಳಕ್ಕೆ ಬಂದು, ಕೊಪ್ಪಳವನ್ನು ವಶಕ್ಕೆ ತೆಗೆದುಕೊಂಡರು.”[೨೭]

ಭೀಮರಾಯರ ಮರಣದ ನಂತರ ಅವರಿಗೆ ಸೇರಿದ ಆಸ್ತಿಯನ್ನು ೧೮೫೮ರಲ್ಲಿ ಮುಟ್ಟುಗೋಲು ಹಾಕಿಕೊಳ್ಳಲಾಯಿತು ಮತ್ತು ನಾಡಗೌಡರಿಗೆ ಸೇರಿದ ೧೨ ಹಳ್ಳಿಗಳಿಂದ ಬರುತ್ತಿದ್ದ ಸುಮಾರು ೨೫೮೧

ರೂಪಾಯಿ ವಾರ್ಷಿಕ ಉತ್ಪನ್ನ ಬರುವ ನೂರಾರು ಎಕರೆ ಭೂಮಿಯನ್ನು ಜಪ್ತಿ ಮಾಡಲಾಯಿತು. ಹಾಗೆಯೇ ಬೆಣ್ಣೆಹಳ್ಳಿಯ ಭೀಮರಾಯರ ಮನೆಗಳಲ್ಲಿ ಶಸ್ತ್ರಾಸ್ತ್ರ ಸಂಗ್ರಹಣೆ ಮಾಡಿರಬಹುದೆಂಬ ಸಂಶಯದ ಮೇಲೆ ಡೈನಾಮೆಟ್ ಇಟ್ಟು ಆ ಮನೆಗಳನ್ನು ನಾಶ ಮಾಡಲಾಯಿತು.[೨೮]

ಭೀಮರಾಯರ ತಮ್ಮಂದಿರು, ಪತ್ನಿಯರು ಹಾಗೂ ಮಕ್ಕಳನ್ನು ತಮ್ಮ ವಶಕ್ಕೆ ತೆಗೆದುಕೊಂಡಿದ್ದ ಬ್ರಿಟಿಷರು ಅವರ ಮೇಲೆ ಕಠಿಣ ಕ್ರಮಕೈಗೊಳ್ಳುತ್ತಿದ್ದರೇನೋ, ಆದರೆ ಆ ಸಮಯಕ್ಕೆ ಭೀಮರಾಯರ ಮರಣದ ಸುದ್ದಿಯು, ಭೀಮರಾಯರ ಹಿತೈಷಿಯಾದ ಲಾರ್ಡ್ ಮಿಂಟೋಗೆ ತಲುಪಿತು. ತಕ್ಷಣವೇ ಮಿಂಟೋ ತನ್ನ ಪ್ರತಿನಿಧಿಯನ್ನು ಕುದುರೆ ಮೇಲೆ ಬೆಣ್ಣೆಹಳ್ಳಿಗೆ ಕಳುಹಿಸಿ, ಭೀಮರಾಯ ಮತ್ತು ಅವನ ಕುಟುಂಬಕ್ಕೆ ಗೌರವವನ್ನು (ಗಾರ್ಡ್ ಹಾಫ್ ಹಾನರ್) ಸಲ್ಲಿಸಿ, ಭೀಮರಾಯರ ಕುಟುಂಬಕ್ಕೆ ಯಾವುದೇ ತೊಂದರೆ ಮಾಡಬಾರದು ಎನ್ನುವ ಪತ್ರವನ್ನು ಅಲ್ಲಿನ ಅಧಿಕಾರಿಗಳಿಗೆ ಕಳುಹಿಸಿದನು. ಹಾಗಾಗಿ ಮಿಂಟೋನ ಆದೇಶ ಪತ್ರದಂತೆ ಭೀಮರಾಯರ ಕುಟುಂಬಕ್ಕೆ ಯಾವುದೇ ತೊಂದರೆ ಉಂಟು ಮಾಡದ ಬ್ರಿಟಿಷರು ಭೀಮರಾಯರ ಕುಟುಂಬಕ್ಕೆ ಸರಕಾರವು ತಿಂಗಳಿಗೆ ೩೦ ರೂ. ಜೀವನಾಂಶ ಗೊತ್ತುಪಡಿಸಿತು. ಆದರೆ ಅವರ ಕುಟುಂಬ ಇದನ್ನು ತಿರಸ್ಕರಿಸಿತು ಎಂದೇ ಹೇಳುತ್ತಾರೆ.

**ಕೊನೆಟಿಪ್ಪಣಿಗಳು**

೧. **ಶ್ರೀನಿವಾಸ, ಮುಂಡರಗಿ ಭೀಮರಾಯ,** ಪು. ೯.

೨. ತಿರುಮಲ ತಾತಾಚಾರ್ಯ ಶರ್ಮ, **ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ,** ಪು. ೧೬.

೩. ಮಹಾಲಿಂಗ ಯಾಳಗಿ (ಸಂ), **ಮುಂಡರಗಿ ನಾಡ ಸ್ವಾತಂತ್ರ್ಯ ಸಂಗ್ರಾಮ,** ಪು. ೮೮.

೪. **ಪೂರ್ವೋಕ್ತ,** ಪು. ೮೮, ೮೯.

೫. ಹಾಲಪ್ಪ ಜಿ.ಎಸ್., ಕೃಷ್ಣರಾವ್, **ಹಿಸ್ಟರಿ ಆಫ್ ಫ್ರೀಡಂ ಮೂವ್‌ಮೆಂಟ್ ಇನ್ ಕರ್ನಾಟಕ,** ಪು. ೨೬೭.

೬. ತಿರುಮಲ ತಾತಾಚಾರ್ಯ ಶರ್ಮ, **ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ,** ಪು. ೮೭.

೭. ಕುಪ್ಪಗಿ ವಸಂತ, **ಮುಂಡರಗಿ ಭೀಮರಾಯ,** ಪು. ೩೮.

೮. ಶ್ರೀನಿವಾಸರಾವ್, **ಮುಂಡರಗಿ ಭೀಮರಾಯ,** ಪು. ೧೩.

೯. ಹಾಲಪ್ಪ ಜಿ.ಎಸ್., ಕೃಷ್ಣರಾವ್, **ಹಿಸ್ಟರಿ ಆಫ್ ಫ್ರೀಡಂ ಮೂವ್‌ಮೆಂಟ್ ಇನ್ ಕರ್ನಾಟಕ,** ಪು. ೨೬೭.

೧೦. **ರೆಕಾರ್ಡ್ಸ್ ಫ್ರಂ ದಿ ಕಲೆಕ್ಟರ್ಸ್ ಆಫೀಸ್,** ಧಾರವಾಡ.

೧೧. ಕೃಷ್ಣರಾವ್ ಎಂ.ವಿ., ಕೇಶವಭಟ್ಟ ಎಂ., ಕರ್ನಾಟಕ ಇತಿಹಾಸ ದರ್ಶನ, ಪು. ೬೩೭.

೧೨. ರಾಮಸ್ವಾಮಿ ಎಸ್.ಆರ್., (ಸಂ), **ಸ್ವಾತಂತ್ರ್ಯೋದಯದ ಮೈಲಿಗಲ್ಲುಗಳು,** ಪು. ೩೦೩.

೧೩. ಚಂದ್ರಶೇಖರ ಟಿ.ಆರ್., ಶೇಷಾದ್ರಿ ಬಿ., ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ, ಪು. ೩೪.

೧೪. ಆನಂದಕಂದ, ಮುಂಡರಗಿ ಗಂಡುಗಲಿ, ಪು. ೨೮.

೧೫. ಸೂರ್ಯನಾಥ ಯು. ಕಾಮತ್ (ಸಂ), ಕರ್ನಾಟಕ ಸ್ಟೇಟ್ ಗೆಝೆಟಿಯರ್, ಪು. ೩೪೫.

೧೬. ಷೇಕ್ ಅಲಿ ಬಿ., ಕರ್ನಾಟಕ ಚರಿತ್ರೆ ಮಾಲೆ-೬, ಪು. ೪೯.

೧೭. ದಿ ನ್ಯಾಷನಲ್ ಆರ್‌ಚಿವ್ಸ್, ದೆಹಲಿ, ಅಪೆಂಡಿಂಕ್ಸ್ II, ನಂ. ೧೪೮೮-೧೮೫೮.

೧೮. ಚಿಟ್ನೀಸ್ ಕೆ.ಎಸ್., ಲಕ್ಷ್ಮೇಶ್ವರ ಇತಿಹಾಸ, ಪು. ೯೪.

೧೯. ಕೃಷ್ಣರಾವ್ ಎಂ.ವಿ., ಕೇಶವಭಟ್ಟ ಎಂ., ಕರ್ನಾಟಕ ಇತಿಹಾಸ ದರ್ಶನ, ಪು. ೬೩೭.

೨೦. ದಿ ಹೈದ್ರಾಬಾದ್ ಸ್ಟೇಟ್ ಕಮಿಟಿ, ದಿ ಫ್ರೀಡಂ ಸ್ಟ್ರಗಲ್ ಇನ್ ಹೈದ್ರಾಬಾದ್, ಪು. ೯.

೨೧. ಸೂರ್ಯನಾಥ ಯು. ಕಾಮತ್, ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಪು. ೨೬೨.

೨೨. ಮಹಾಲಿಂಗ ಯಾಳಗಿ (ಸಂ), ಮುಂಡರಗಿ ನಾಡ ಸ್ವಾತಂತ್ರ್ಯ ಸಂಗ್ರಾಮ, ಪು. ೯೪.

೨೩. ಹಾಲಪ್ಪ ಜಿ.ಎಸ್., ಕೃಷ್ಣರಾವ್, ಹಿಸ್ಟರಿ ಆಫ್ ಫ್ರೀಡಂ ಮೂವ್‌ಮೆಂಟ್ ಇನ್ ಕರ್ನಾಟಕ, ಪು. ೨೭೦.

೨೪. ತಿರುಮಲ ತಾತಾಚಾರ್ಯ ಶರ್ಮ, ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ, ಪು. ೮೯.

೨೫. ರಂಗಸಾಮಯ್ಯ, ದಕ್ಷಿಣ ಭಾರತದ ಇತಿಹಾಸ, ಪು. ೩೯೧.

೨೬. ದಿ ನ್ಯಾಷನಲ್ ಆರ್‌ಚಿವ್ಸ್, ದೆಹಲಿ.

೨೭. ರೆಕಾರ್ಡ್ಸ್ ಫ್ರಂ ದ ಕಲೆಕ್ಟರ್ಸ್ ಆಫೀಸ್, ಧಾರವಾಡ.

೨೮. ಶ್ರೀನಿವಾಸರಾವ್, ಮುಂಡರಗಿ ಭೀಮರಾಯ, ಪು. ೩೫.

• • •

ಅಧ್ಯಾಯ ೬

# ಮೌಖಿಕ ಕಥನಗಳಲ್ಲಿ ಮುಂಡರಗಿ ಭೀಮರಾಯ

# ಅಧ್ಯಾಯ ೬

## ಮೌಖಿಕ ಕಥನಗಳಲ್ಲಿ ಮುಂಡರಗಿ ಭೀಮರಾಯ

ಭೀಮರಾಯರ ಕುರಿತು ಈಗಾಗಲೇ ನಡೆದಿರುವ ಅಧ್ಯಯನಗಳು ಲಿಖಿತ ಆಕರಗಳು, ಪ್ರಕಟಿತ ಗ್ರಂಥಗಳು, ಪತ್ರಾಗಾರ ದಾಖಲೆಗಳು, ಬ್ರಿಟಿಷ್ ಅಧಿಕಾರಿಗಳ ವರದಿಗಳು ಹಾಗೂ ಪತ್ರ ವ್ಯವಹಾರಗಳನ್ನು ಹೆಚ್ಚಾಗಿ ಆಧರಿಸಿ ನಡೆದಿವೆ. ಆದರೆ ಕೇವಲ ಇವುಗಳ ಆಧಾರದ ಮೇಲೆ ಭೀಮರಾಯರ ಜೀವನ ಚರಿತ್ರೆಯನ್ನು ರೂಪಿಸಿದರೆ, ಅದು ಭೀಮರಾಯರ ಮೇಲಿನ ಸಮಗ್ರ ಮತ್ತು ಪರಿಪೂರ್ಣ ಅಧ್ಯಯನ ವಾಗದೇ, ಏಕಪಕ್ಷೀಯ ಅಧ್ಯಯನವಾಗುತ್ತದೆ. ಹಾಗಾಗಿ ಈ ಎಲ್ಲ ಆಕರಗಳ ಜೊತೆಗೆ ಭೀಮರಾಯರ ಬಗೆಗಿನ ಅಧ್ಯಯನವನ್ನು, ಸ್ಥಳೀಯ ಚರಿತ್ರೆಯ ಹಿನ್ನೆಲೆಯಲ್ಲಿ, ಮೌಖಿಕ ಆಕರಗಳಿಗೂ ಒತ್ತು ನೀಡಿ, ನಡೆಸುವ ಅಗತ್ಯತೆ ಇದೆ.

ಏಕೆಂದರೆ ಮುಂಡರಗಿ ಭೀಮರಾಯರಿಗೆ ಸಂಬಂಧಪಟ್ಟಂತೆ ಲಿಖಿತ ದಾಖಲೆಗಳು, ಆಧಾರಗಳು ಬಹಳ ವಿರಳವಾಗಿವೆ ಹಾಗೂ ಈಗಾಗಲೇ ಇರುವ ದಾಖಲೆಗಳಲ್ಲಿ ಬಹುತೇಕ ಬ್ರಿಟಿಷರಿಂದಲೇ ರಚಿಸಲ್ಪಟ್ಟವುಗಳಾಗಿವೆ. ಇವು ಪೂರ್ವಾಗ್ರಹಪೀಡಿತವಾದ ದಾಖಲೆಗಳೆನ್ನುವುದು ಸ್ಪಷ್ಟ. ಪತ್ರಾಗಾರದಲ್ಲಿರುವ ಆಧಾರಗಳು, ಹೇಳಿಕೆಗಳು, ಪತ್ರಗಳು, ಬ್ರಿಟಿಷ್ ಅಧಿಕಾರಿಗಳು ಮತ್ತು ಮೇಲಾಧಿಕಾರಿಗಳ ಮಧ್ಯೆ ನಡೆದಿರುವ ಆಡಳಿತ ವ್ಯವಹಾರದ ದಾಖಲೆಗಳಾಗಿವೆ. ಇವುಗಳನ್ನು ಹೊರತುಪಡಿಸಿ, ದೇಶೀಯ ಆಧಾರಗಳನ್ನು ಬಳಸಿಕೊಳ್ಳುವ ಕಾರ್ಯ ಇದುವರೆಗೂ ಸಮರ್ಪಕವಾಗಿ ನಡೆದಿಲ್ಲ. ಹಾಗಾಗಿ ಭೀಮರಾಯರ ಬಗ್ಗೆ ಅಧ್ಯಯನ ಮಾಡುವಾಗ, ಈಗಾಗಲೇ ಲಭ್ಯವಿರುವ ಲಿಖಿತ ಆಕರಗಳ ಜೊತೆಗೆ, ಸ್ಥಳೀಯ ಚರಿತ್ರೆಯ ಹಿನ್ನೆಲೆಯಲ್ಲಿ ಮೌಖಿಕ ಆಕರಗಳನ್ನು ಬಳಸಿಕೊಂಡು, ಮೌಖಿಕ ಸಂದರ್ಶನಗಳನ್ನು ಕೈಗೊಂಡು, ಕ್ಷೇತ್ರಕಾರ್ಯಗಳ ಮೂಲಕ ತುಲನಾತ್ಮಕ ಅಧ್ಯಯನ ಕೈಗೊಂಡಾಗ ಮಾತ್ರ ಭೀಮರಾಯರ ಜೀವನ, ಹೋರಾಟ, ಸಾಧನೆಗಳ ಬಗ್ಗೆ ಇನ್ನೂ ಹೆಚ್ಚಿನ ಸ್ಪಷ್ಟವಾದ ಮಾಹಿತಿಗಳನ್ನು ಸಂಗ್ರಹಿಸಿ, ಅವರ ಬಗ್ಗೆ ಇನ್ನೂ ಹೆಚ್ಚಿನ ಹಾಗೂ ಇದುವರೆಗೂ ಬೆಳಕಿಗೆ ಬಾರದ ಹಲವಾರು ಚಾರಿತ್ರಿಕ ಅಂಶಗಳನ್ನು ದಾಖಲಿಸಲು ಸಾಧ್ಯವಾಗುತ್ತದೆ.

ಭೀಮರಾಯರನ್ನು ಒಬ್ಬ ನಾಯಕನನ್ನಾಗಿಯಷ್ಟೇ ಅಧ್ಯಯನ ಮಾಡದೆ ಸ್ಥಳೀಯ ನೆಲೆಯಲ್ಲಿ ಅವರು ಒಬ್ಬ ನಾಯಕನಾಗಿ ಹೊರಹೊಮ್ಮಿದ ಬಗೆ, ಅವರ ಚಿಂತನೆ ಹಾಗೂ ಯೋಜನೆಗಳು, ಇದಕ್ಕೆ

ಪೂರಕವಾಗಿ ಸ್ಥಳೀಯ ಜನರ ನಿಲುವುಗಳು ಹಾಗೂ ಸಹಾಯ ಸಹಕಾರಗಳು ಮುಂತಾದ ವಿಚಾರಗಳನ್ನು ಹಾಗೂ ಸ್ಥಳೀಯ ನೆಲೆಗಟ್ಟಿನಿಂದಲೇ ನೋಡಬೇಕಾಗುತ್ತದೆ. ಈ ಅಂಶಗಳ ಬಗ್ಗೆ ಮೌಖಿಕವಾಗಿ, ಪರಂಪರಾಗತವಾಗಿ ಉಳಿದು ಬಂದಿರುವ ಜನಪದರ ಅಭಿಪ್ರಾಯಗಳನ್ನು ಅಧ್ಯಯನ ಮಾಡಿ ತೀರ್ಮಾನ ಗಳನ್ನು ತೆಗೆದುಕೊಳ್ಳಬೇಕಾಗುತ್ತದೆ.[೧] ಕೆಲವು ಬಾರಿ ಲಿಖಿತ ದಾಖಲೆಗಳಲ್ಲಿ ಇಲ್ಲದ ಮಾಹಿತಿಗಳು, ಮೌಖಿಕ ಆಕರಗಳಿಂದ, ಸಂದರ್ಶನಗಳಿಂದ ತಿಳಿದು ಬರುತ್ತದೆ. ಹೀಗಾಗಿ ಪ್ರಸ್ತುತ ಅಧ್ಯಯನದಲ್ಲಿ ಸ್ಥಳೀಯ ಚರಿತ್ರೆ ಮತ್ತು ಮೌಖಿಕ ಆಕರಗಳನ್ನು ಮತ್ತು ಭೀಮರಾಯರ ಪ್ರಸ್ತುತ ವಂಶಸ್ಥರ ಸಂದರ್ಶನ ವನ್ನು, ಮುಂಡರಗಿ ಪ್ರದೇಶದ ಲೇಖಕರನ್ನು, ಜನಪದರ ಅಭಿಪ್ರಾಯಗಳನ್ನು ಸಂಗ್ರಹಿಸಿ, ಬಳಸಿಕೊಂಡು, ತುಲನಾತ್ಮಕ ಅಧ್ಯಯನ ಮಾಡಿ, ಭೀಮರಾಯರ ಬಗ್ಗೆ ಹೊಸ ಚಾರಿತ್ರಿಕ ಅಂಶಗಳನ್ನು ದಾಖಲಿಸುವ ಪ್ರಯತ್ನ ಮಾಡಲಾಗಿದೆ.

### ೬.೧. ಸ್ಥಳೀಯ ಹಾಗೂ ಮೌಖಿಕ ಚರಿತ್ರೆ

ಚರಿತ್ರೆಯ ಅಧ್ಯಯನಕ್ಕೆ ಮತ್ತು ಸಂಶೋಧನೆಗೆ ಅಗತ್ಯವಿರುವ ಆಕರಗಳಲ್ಲಿ ಇತ್ತೀಚೆಗೆ ಚರಿತ್ರೆಕಾರರು, ಸ್ಥಳೀಯ ಚರಿತ್ರೆ ಮತ್ತು ಮೌಖಿಕ ಚರಿತ್ರೆಗಳ ಆಧಾರಗಳಿಗೆ ಹೆಚ್ಚಿನ ಮಹತ್ವವನ್ನು ಕೊಡುತ್ತಿದ್ದಾರೆ.[೨] ಹೀಗಾಗಿ ಸ್ಥಳೀಯ ಚರಿತ್ರೆಯ ಬಗ್ಗೆ ವಿಶೇಷ ಅಧ್ಯಯನಗಳು ಹಾಗೂ ಸಂಶೋಧನೆಗಳು ನಡೆಯುತ್ತಿದ್ದು, ಈ ಮೂಲಕ ಚರಿತ್ರೆಯ ವ್ಯಾಪ್ತಿ ವಿಸ್ತಾರಗೊಳ್ಳುತ್ತಿದೆ. ಈ ಮೊದಲು ಚರಿತ್ರೆಯೆಂದರೆ ಕೇವಲ ರಾಜ ಮಹಾರಾಜರ, ಅರಮನೆಗಳ, ಯುದ್ಧಗಳ, ಸಾಮ್ರಾಜ್ಯಗಳ ವರ್ಣನೆ ಇರುವ ರಾಜಕೀಯ ಚರಿತ್ರೆ ಎಂಬುದಾಗಿ ತಿಳಿದುಕೊಳ್ಳಲಾಗಿತ್ತು. ಆದರೆ ಇಂದು ಈ ಗ್ರಹಿಕೆ ಬದಲಾಗಿ ಚರಿತ್ರೆಯು ತನ್ನ ಅಧ್ಯಯನದ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳುತ್ತಾ, ಚರಿತ್ರೆಯ ಸಂಶೋಧನಾ ಮಾರ್ಗದಲ್ಲಿ ಹೊಸ ಆಕರಗಳನ್ನು ಹೊಸ ವಿಧಾನಗಳನ್ನು ಅಳವಡಿಸಿಕೊಳ್ಳುವ ಮೂಲಕ ಚರಿತ್ರೆ ರಚನೆಯಲ್ಲಿ ಸಾಕಷ್ಟು ಬದಲಾವಣೆಯಾಗಿದೆ. ಹೀಗಾಗಿ ಚರಿತ್ರೆ ಎಂದರೆ ಕೇವಲ ಬೃಹತ್ ಸಾಮ್ರಾಜ್ಯಗಳ ಅಧ್ಯಯನ ಅಲ್ಲವೆಂದೂ, ಚರಿತ್ರೆಯ ಅಧ್ಯಯನ ಮತ್ತು ರಚನೆಯಲ್ಲಿ ಶಾಸನಗಳು, ಸ್ಮಾರಕಗಳು, ನಾಣ್ಯಗಳು ಹೀಗೆ ಲಿಖಿತ ದಾಖಲೆಗಳನ್ನಷ್ಟೇ ಅವಲಂಬಿಸದೆ, ಮೌಖಿಕ ಆಕರಗಳಿಗೆ ಹೆಚ್ಚಿನ ಮಹತ್ವ ನೀಡಿ ಆ ನಿಟ್ಟಿನಲ್ಲಿ ಸ್ಥಳೀಯ ಚರಿತ್ರೆ ರಚನೆಗೆ ಒತ್ತು ನೀಡುವ ಬದಲಾದ ಅಧ್ಯಯನ ಕ್ರಮ ರೂಪುಗೊಂಡಿದೆ.[೩]

ಈ ದೃಷ್ಟಿಯಿಂದ ಆಯಾ ಪ್ರದೇಶದ ಸ್ಥಳಗಳಿಗೆ ಹೋಗಿ ಅಲ್ಲಿರುವ ಜನರೊಡನೆ ಬೆರೆತು, ಅಲ್ಲಿಯ ಅನುಭವಿಗಳು, ಸಮಕಾಲೀನರು, ತಲೆಮಾರಿನ ವಂಶಸ್ಥರನ್ನು ಸಂದರ್ಶಿಸಿ, ಚರ್ಚಿಸಿ, ಅವರ ಅಭಿಪ್ರಾಯಗಳನ್ನು ಸಂಗ್ರಹಿಸಿ, ಯಾವುದೇ ಪೂರ್ವಗ್ರಹಗಳಿಗೆ, ಒತ್ತಡಗಳಿಗೆ ಹಂಗಿಗೆ ಒಳಗಾಗದೇ, ವೈಜ್ಞಾನಿಕವಾಗಿ ನಿಷ್ಪಕ್ಷವಾಗಿ ವಿಷಯಗಳನ್ನು ವಿಶ್ಲೇಷಿಸಿ, ಅವುಗಳ ಮೂಲಕ ಆ ಪ್ರದೇಶದ ಚರಿತ್ರೆಯನ್ನು ಕಟ್ಟಿಕೊಡುವುದೇ ಸ್ಥಳೀಯ ಚರಿತ್ರೆ ಎನಿಸುತ್ತದೆ.[೪] ಸ್ಥಳೀಯ ಚರಿತ್ರೆಯನ್ನು ಕಟ್ಟುವಾಗ 'ಸ್ಥಳೀಯತೆ' ಎನ್ನುವ ಶಬ್ದದ ಅರ್ಥ ವಿವರಣೆಯನ್ನು ಕೊಡಬೇಕಾಗುತ್ತದೆ. ಆ ಪ್ರಕಾರ ಒಬ್ಬ ವ್ಯಕ್ತಿ ಅಥವಾ ನಾಯಕನು ಒಂದು ನಿರ್ದಿಷ್ಟ ಸ್ಥಳದ, ಸಮುದಾಯದ, ವ್ಯವಸ್ಥೆಯೊಡನೆ ಹೊಂದಿರುವ ಸಂಬಂಧವಾಗಿದೆ.

ಸ್ಥಳೀಯವಾಗಿಯೇ ತನ್ನ ನಾಯಕತ್ವದಲ್ಲಿ ಸಲ್ಲಿಸಿರುವ ಸೇವೆಗಳು ಅಥವಾ ಸ್ಥಳೀಯ ವ್ಯವಸ್ಥೆಯಲ್ಲಿ ಅಧಿಕಾರ ಅಥವಾ ನಾಯಕತ್ವಕ್ಕಾಗಿ ನಡೆಸಿದ ಹೋರಾಟಗಳಾಗಿರಬಹುದು. ಈ ದೃಷ್ಟಿಕೋನದಿಂದ ನೋಡಿದಾಗ ಸ್ಥಳೀಯ ಚರಿತ್ರೆ ಎಂಬುದು ಜನಸಮುದಾಯಗಳ ಹುಟ್ಟು, ಬೆಳವಣಿಗೆ ಮತ್ತು ಪತನಗಳ ಕುರಿತಾದ ಅಧ್ಯಯನವಾಗಿದೆ.[೫] ಹಾಗೂ ಒಂದು ನಿರ್ದಿಷ್ಟ ಭೌಗೋಳಿಕ ಪರಿಸರದಲ್ಲಿ ಬಾಳಿ, ಬದುಕಿ, ಪತನ ಹೊಂದಿದ ಜನರ, ಜನಾಂಗಗಳ, ಸಮುದಾಯಗಳ ಅಧ್ಯಯನ ಎಂದು ಕರೆಯಬಹುದು. ಸ್ಥಳೀಯ ಚರಿತ್ರೆಯಲ್ಲಿ ವಿಶೇಷವಾಗಿ ಗಮನಿಸಬೇಕಾದ ಅಂಶ ಎಂದರೆ, ಇದು ಮೇಲ್ವರ್ಗದವರ ಅಥವಾ ಒಂದು ವರ್ಗದವರ ಬಗ್ಗೆ ಹೇಳದೇ, ಅಥವಾ ಅಧ್ಯಯನ ಮಾಡದೇ, ಅಲಕ್ಷಿತರ ಲಿಂಗ ತಾರತಮ್ಯಕ್ಕೆ ಒಳಗಾದವರ, ದುರ್ಬಲರ, ಶೋಷಿತರ, ಸಮಾಜದ ಬಹುಮುಖಿಯಲ್ಲಿ ಕಾಣಿಸಿಕೊಳ್ಳದವರ ಬಗ್ಗೆ ಬೆಳಕು ಚೆಲ್ಲುತ್ತದೆ.[೬] ಜೊತೆಗೆ ಆ ಪರಿಸರದ ನಗರ ರಚನೆ, ಧರ್ಮ, ಸಂಸ್ಕೃತಿ, ಶಿಕ್ಷಣ, ಆರ್ಥಿಕ ಸ್ಥಿತಿಗತಿ, ಮಹಿಳೆಯರು, ಮಕ್ಕಳ ಸ್ಥಿತಿಗತಿಗಳು, ಅಪರಾಧ ಪ್ರವೃತ್ತಿ, ಅವರಲ್ಲಿರುವ ಸಂಬಂಧಗಳು ಮತ್ತು ಆ ಜನಾಂಗದ ಏಳು-ಬೀಳುಗಳು ಮತ್ತು ಇದಕ್ಕೆ ಕಾರಣವಾದ ಅಂಶಗಳ ಬಗ್ಗೆಯೂ ಅಧ್ಯಯನ ಮಾಡುತ್ತದೆ.

ಸ್ಥಳೀಯ ಚರಿತ್ರೆಯನ್ನು ರಚಿಸುವಾಗ ಆಯಾ ನೆಲೆಯ ಹಿನ್ನಲೆಯಿಂದ ಸ್ಥಳೀಯವಾಗಿ ದೊರೆಯುವ ಆಕರಗಳನ್ನು ಅವಲಂಬಿಸಬೇಕಾಗುತ್ತದೆ. ಅವು ಲಿಖಿತ ಆಕರಗಳಾಗಿರಬಹುದು ಅಥವಾ ಅಲಿಖಿತ ಆಕರಗಳಾಗಿರಬಹುದು. ಲಿಖಿತ ಆಕರಗಳಲ್ಲಿ, ಕೈಫಿಯತ್ತುಗಳು, ವಂಶಾವಳಿ, ನಾಮೆ, ಬಖೈರು, ಕುಂಡಳಿ, ದಿನಚರಿ ಮುಖ್ಯವಾದವುಗಳು. ಅದೇ ರೀತಿ ಮೌಖಿಕ ಆಕರಗಳಲ್ಲಿ, ಲಾವಣಿ ಪದಗಳು, ಪ್ರತೀತಿ, ಸೋಬಾನೆ ಪದಗಳು, ಜನಪದ ಕಥೆಗಳು, ಸಾಮಾನ್ಯ ನಂಬಿಕೆಗಳು, ಕಥನಗೀತೆಗಳು, ಐತಿಹ್ಯಗಳು ಮುಖ್ಯವಾದವುಗಳಾಗಿವೆ.[೭]

ಸ್ಥಳೀಯ ಚರಿತ್ರೆಯನ್ನು ಅಧ್ಯಯನ ಮಾಡಲು ತೊಡಗಿದ ಸಂಶೋಧಕ ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಸ್ಥಳೀಯ ಚರಿತ್ರೆ ಎನ್ನುವುದೇ ಒಂದು ರೀತಿಯಲ್ಲಿ ಸಮಸ್ಯೆಗಳನ್ನು ಸೃಷ್ಟಿಸಿ, ಪ್ರಶ್ನೆಯ ಮೇಲೆ ಪ್ರಶ್ನೆಗಳನ್ನು ಹಾಕಿಕೊಳ್ಳುತ್ತ ಅಧ್ಯಯನ ಮಾಡಬೇಕಾಗುತ್ತದೆ. ಇಂತಹ ಸಂದರ್ಭದಲ್ಲಿ ಅನೇಕ ಸಮಸ್ಯೆಗಳು ಎದುರಾಗುತ್ತವೆ. ಅವುಗಳಲ್ಲಿ ಸ್ಥಳೀಯ ದಾಖಲೆಗಳ ಅಲಭ್ಯತೆಯು ಒಂದು. ಸ್ಥಳೀಯ ಚರಿತ್ರೆಯ ಅಧ್ಯಯನ ಕೈಗೊಂಡಾಗ, ಸ್ಥಳೀಯ ದಾಖಲೆಗಳು ಲಭ್ಯವಾಗುವುದಿಲ್ಲ ಅಥವಾ ಲಭ್ಯವಾದ ದಾಖಲೆಗಳು ಉತ್ಪ್ರೇಕ್ಷೆಯಿಂದಲೂ, ಪ್ರದೇಶದ ಮೇಲಿನ ಅತಿಯಾದ ವಾತ್ಸಲ್ಯದಿಂದಲೂ ರಚಿಸಿರುವಂತಹವಾಗಿರುತ್ತವೆ. ಜೊತೆಗೆ ಯಾವ ಮಾಹಿತಿಯನ್ನು ಎಲ್ಲಿ, ಹೇಗೆ ಯಾವ ಪ್ರಮಾಣದಲ್ಲಿ ಹುಡುಕಿ ಸಂಗ್ರಹಿಸಬೇಕು ಹಾಗೂ ಸಂಗ್ರಹಿಸಿದ ಮಾಹಿತಿಯನ್ನು ಹೇಗೆ ಕ್ರಮಬದ್ಧವಾಗಿ ದಾಖಲು ಮಾಡಿಕೊಳ್ಳುವುದು ಎಂಬುದು ಸವಾಲಾಗಿ ಪರಿಣಮಿಸುತ್ತದೆ. ಸ್ಥಳೀಯ ಚರಿತ್ರೆಯ ರಚನೆಯಲ್ಲಿ ಎದುರಾಗುವ ಇನ್ನೊಂದು ಪ್ರಮುಖ ಸಮಸ್ಯೆ ಎಂದರೆ ಭಾಷಾಜ್ಞಾನದ ಸಮಸ್ಯೆ. ಅಂದರೆ ಸ್ಥಳೀಯವಾಗಿ ದೊರಕಿದ ಶಾಸನಗಳನ್ನು ಶಾಸನತಜ್ಞರು ಓದುವಾಗ ತಪ್ಪಾಗಿ ಓದಿದ ಉದಾಹರಣೆಗಳು ಕಂಡು ಬರುತ್ತವೆ.[೮] ಸ್ಥಳೀಯ ಚರಿತ್ರೆ ಅಧ್ಯಯನದಲ್ಲಿ ಇನ್ನೊಂದು ಪ್ರಮುಖ ಸಮಸ್ಯೆ ಎಂದರೆ ಸ್ಥಳನಾಮದ್ದು. ಏಕೆಂದರೆ

ಯಾವುದೇ ಒಂದು ಊರಿನ ಹೆಸರು, ಆ ಪರಿಸರದ, ಆ ಪರಿಸರದಲ್ಲಿ ಆರಾಧಿಸಲ್ಪಡುವ ದೇವರ ಅಥವಾ ಅಲ್ಲಿಯ ಪ್ರಮುಖ ವ್ಯಕ್ತಿಯ ಹಿನ್ನಲೆ ಪ್ರಭಾವದಿಂದ ಬಂದಿರುತ್ತದೆ. ಹೀಗಾಗಿ ಆ ಪ್ರದೇಶದ ಸ್ಥಳನಾಮವನ್ನು ಸ್ಪಷ್ಟವಾಗಿ ಗುರುತಿಸುವುದು ಸುಲಭವಲ್ಲ. ಜೊತೆಗೆ ಸ್ಥಳೀಯ ಶಾಸನಗಳಲ್ಲಿ, ಕಿಡಿಗೇಡಿ ಲಿಪಿಕಾರರ ಮತ್ತು ಸಾಹಿತ್ಯ ದೋಷವು ಸಮಸ್ಯೆಯಾಗುತ್ತದೆ.[೯]

**ಮೌಖಿಕ ಚರಿತ್ರೆ :** ತಲೆ ತಲಾಂತರಗಳಿಂದ ಜನರ ಸ್ಮರಣೆಯಲ್ಲಿ ಉಳಿದುಕೊಂಡು ಬಂದಿರುವ ವಿಚಾರಗಳನ್ನು ಇತಿಹಾಸವಾಗಿ ರೂಪಾಂತರಗೊಳಿಸುವ ನಡುವಿನ ಪ್ರಕ್ರಿಯೆಯೇ ಮೌಖಿಕ ಚರಿತ್ರೆ. ಮೌಖಿಕ ಚರಿತ್ರೆಯು ಮೂಲಾಧಾರಗಳನ್ನು ಒದಗಿಸುವ ಮತ್ತೊಂದು ಭಾಗವಾಗಿದೆ. ಇದು ಇತಿಹಾಸದ ರಚನೆಗೆ ಮಾತ್ರವಲ್ಲದೆ ಜಾನಪದ, ಸಮಾಜಶಾಸ್ತ್ರ, ಮಾನವಶಾಸ್ತ್ರ, ಮಾನವ ಅಧ್ಯಯನ ಮುಂತಾದ ಶಾಸ್ತ್ರಗಳ ರಚನೆಯಲ್ಲಿಯೂ ಪ್ರಮುಖ ಪಾತ್ರ ವಹಿಸುತ್ತದೆ. ಮೌಖಿಕ ಇತಿಹಾಸವು ಬದುಕಿರುವ ವ್ಯಕ್ತಿಗಳೊಡನೆ ವ್ಯವಹರಿಸುತ್ತ, ಈಗಾಗಲೇ ಕಳೆದು ಹೋದ ಕಾಲಮಾನದ ಅನೇಕ ಅನುಭವಗಳು, ಘಟನೆಗಳು, ವಿಷಯಗಳು ನೆನಪಿನಲ್ಲೇ ಉಳಿದು, ವ್ಯಕ್ತಿಯ ಜೀವನದೊಂದಿಗೆ ಅಂತ್ಯವಾಗುವುದನ್ನು ಮೌಖಿಕ ಚರಿತ್ರೆ ತಪ್ಪಿಸುತ್ತದೆ.[೧೦] ಚರಿತ್ರೆಯ ಪುನರ್‌ನಿರ್ಮಾಣಕ್ಕಾಗಿ ಮಾನವ ಮಾಡಿದ ಹೊಸ ಹೊಸ ಆಧಾರಗಳ ಸಂಶೋಧನೆಯಲ್ಲಿ ಮೂಡಿಬಂದುದೇ ಮೌಖಿಕ ಚರಿತ್ರೆ. ಸಂಶೋಧನೆಯಲ್ಲಿ ಸಂಶೋಧಕನು ಮೂಲ ಘಟನೆಗೆ ಸಮೀಪವಾದ, ನಿಖರವಾದ ಅಂಶಗಳನ್ನು ಹೊರೆಗೆಡವಲು ಪ್ರಯತ್ನಿಸುತ್ತಿರುತ್ತಾನೆ. ಈ ರೀತಿ ಪ್ರಯತ್ನದ ಫಲವೇ ಮೌಖಿಕ ಚರಿತ್ರೆಯ ಬೆಳವಣಿಗೆಗೆ ದಾರಿಯಾಯಿತು. ಚರಿತ್ರೆಯ ರಚನೆಯಲ್ಲಿ ಮೌಖಿಕ ಸಂಪ್ರದಾಯವನ್ನು ಮೊದಲಿನಿಂದಲೂ ಬಳಸಿಕೊಳ್ಳುತ್ತ ಬರಲಾಗಿದೆ. ರಾಜವಂಶಗಳ ಮೂಲದ ಬಗ್ಗೆ ಚರ್ಚೆ ಮಾಡುವಾಗ ಮೌಖಿಕ ಪರಂಪರೆಯಲ್ಲಿ ಬಂದ ಕಥೆಗಳನ್ನು ಬಳಸಿಕೊಂಡಿರುವುದನ್ನು ಕಾಣಬಹುದು.

ಇಂದು ಸಾಂಪ್ರದಾಯಿಕ ಇತಿಹಾಸ ರಚನೆಗೆ ಬದಲಿಯಾಗಿ, ಮೌಖಿಕ ಇತಿಹಾಸವನ್ನು ಕಥನವಾಗಿಸುವ ಚಟುವಟಿಕೆಯು ಆಧುನಿಕೋತ್ತರ ಚಿಂತನೆಯ ಒಂದು ಭಾಗವಾಗಿದೆ. ಸಾಂಪ್ರದಾಯಿಕ ಇತಿಹಾಸ ರಚನೆಗೆ ಎದುರಾಗಿ ಮೌಖಿಕ ಚರಿತ್ರೆಯನ್ನು ಊರ್ಜಿತಗೊಳಿಸುವ ಪ್ರಯತ್ನಗಳು ನಡೆಯುತ್ತಿವೆ.[೧೧] ಇತಿಹಾಸದ ಪುನರ್‌ನಿರ್ಮಾಣಕ್ಕಾಗಿ ಮಾಡಿದ ಹೊಸ ಆಧಾರಗಳ ಅನ್ವೇಷಣೆಯಲ್ಲಿ ಮೂಡಿಬಂದುದೆ ಮೌಖಿಕ ಇತಿಹಾಸ. ಚರಿತ್ರೆಕಾರ ಮೂಲ ಘಟನೆಗೆ ಹೆಚ್ಚು ಸಮೀಪವಾದ ನೈಜವಾದ ಹಾಗೂ ನಿಖರವಾದ ಆಧಾರವನ್ನು ಹೊರತೆಗೆಯಲು ಪ್ರಯತ್ನಿಸುತ್ತಿರುತ್ತಾನೆ. ಹಾಗಾಗಿ ಪ್ರತ್ಯಕ್ಷದರ್ಶಿಗಳಿಂದ ನೇರವಾಗಿ ಮಾಹಿತಿಯನ್ನು ಸಂಗ್ರಹಿಸಲು ಮಾಡಿದ ಪ್ರಯತ್ನದಿಂದಾಗಿ ಮೌಖಿಕ ಇತಿಹಾಸದ ಬೆಳವಣಿಗೆಯಾಯಿತು. ಒಂದು ರೀತಿಯಲ್ಲಿ ಮೌಖಿಕ ಇತಿಹಾಸವು ಚರಿತ್ರೆಯಷ್ಟೇ ಹಳೆಯದು. ಹೆರಡೋಟಸ್, ಟಾಲಮಿ, ಅಲ್ಬೆರೂನಿ ಮೌಖಿಕ ಇತಿಹಾಸವನ್ನು ಆಧರಿಸಿಯೇ ತಮ್ಮ ಕೃತಿಗಳನ್ನು ರಚಿಸಿದ್ದಾರೆ.

ಮೌಖಿಕ ಇತಿಹಾಸವು ಜನಪದ ಸಾಹಿತ್ಯದ ಒಂದು ಪ್ರಕಾರವಾಗಿದೆ. ಮೌಖಿಕ ಪರಂಪರೆ ತಲೆಮಾರುಗಳಿಂದ ರವಾನೆಯಾದ ಕಂಠಸ್ಥ ಸಾಹಿತ್ಯವಾಗಿದೆ. ಆಯಾ ಪ್ರಾದೇಶಿಕತೆಗೆ ತಕ್ಕಂತೆ ರಾಜಕೀಯ, ಸಾಂಸ್ಕೃತಿಕವಾಗಿಯೂ ಇದು ಬೆಳೆದುಕೊಂಡಿರುತ್ತದೆ. ಇಂತಹ ಆಕರಗಳಲ್ಲಿ ಪ್ರಮುಖವಾದುವುಗಳೆಂದರೆ,

ಲಾವಣಿ ಪದಗಳು, ಕಥನಗೀತೆಗಳು, ಐತಿಹ್ಯ, ಪುರಾಣಗಳು, ಸಾಮಾನ್ಯ ನಂಬಿಕೆಗಳು, ಜನಪದ ಕಥೆಗಳು, ಮುಂತಾದವು. ಲಾವಣಿ ಸಾಹಿತ್ಯವು ವಸಾಹತುಶಾಹಿ ಅವಧಿಯಲ್ಲಿ ಉದಯವಾಗಿದೆ ಎಂದೇ ನಂಬಲಾಗಿದೆ.[೧೨] ಬ್ರಿಟಿಷರ ವಿರುದ್ಧ ಪ್ರತಿಭಟನೆ, ಸ್ಥಳೀಯರ ಸಾಹಸ, ಪರಾಕ್ರಮ ಹೀಗೆ ಹೋರಾಟದ ವಿವಿಧ ಮುಖಗಳನ್ನು ಲಾವಣಿ ರೂಪದಲ್ಲಿ ಹಾಡಿರುವುದನ್ನು ದಾಖಲಿಸಲಾಗಿದೆ. ಲಾವಣಿ ಪದಗಳು ನಡೆದ ಘಟನೆಯನ್ನು ವಾಸ್ತವವಾಗಿ ಅಲ್ಲವಾದರೂ ರಂಜನೀಯವಾಗಿ ಉತ್ಪ್ರೇಕ್ಷೆಯಿಂದಲೇ ತಿಳಿಸುತ್ತವೆ. ಉದಾಹರಣೆಗೆ 'ಹಲಗಲಿ ಬೇಡರು ೧೮೫೭ರ 'ದಂಗೆಯಲ್ಲಿ' ಹೋರಾಡುವಾಗ, 'ರಾಮಿ' ಎಂಬ ವೀರಮಹಿಳೆ ಹೋರಾಡಿ ಮೆರೆದ ಬಗ್ಗೆ ಲಾವಣಿ ಪದಗಳು ಹೇಳುತ್ತವೆಯೇ ಹೊರತು ಲಿಖಿತ ಆಕರಗಳಲ್ಲ. ಹೀಗೆ ಲಾವಣಿ ಪದಗಳು ಮೌಖಿಕ ಆಕರಗಳಲ್ಲಿ ಪ್ರಮುಖವಾದ ಆಕರಗಳಾಗಿವೆ. ಜನಪದರು ತಮ್ಮ ಸುತ್ತಮುತ್ತಲಿನ ಪರಿಸರದಲ್ಲಿ ಇತಿಹಾಸದ ಘಟನೆಗಳನ್ನು ತಮ್ಮದೇ ಶೈಲಿಯಲ್ಲಿ ಗುರುತಿಸುವ ಐತಿಹ್ಯಗಳು ಪ್ರಮುಖವಾಗಿವೆ.

ಚರಿತ್ರೆಯ ರಚನೆಯ ಮೂಲಾಧಾರಗಳಲ್ಲಿ ಅತ್ಯಂತ ಟೀಕೆ ಮತ್ತು ಅನುಮಾನಕ್ಕೆ ಒಳಗಾಗಿರುವ ಐತಿಹಾಸಿಕ ಆಧಾರ ಎಂದರೆ ಮೌಖಿಕ ಚರಿತ್ರೆ. ಏಕೆಂದರೆ ಅದಕ್ಕಿರುವ ಪರಿಮಿತಿಗಳು ಇಂತಹ ಕಟುವಿಮರ್ಶೆಗೆ ಎಡೆಮಾಡಿಕೊಡುತ್ತಿವೆ. ಚರಿತ್ರೆಕಾರನಿಗೆ ಎದುರಾಗುವ ಪ್ರಶ್ನೆಗಳಲ್ಲಿ ಮೌಖಿಕ ಆಕರವನ್ನು ಪರಿಗಣಿಸುವಾಗ ಸ್ಮರಣಶಕ್ತಿಯನ್ನು ಎಷ್ಟರಮಟ್ಟಿಗೆ ನಂಬಲು ಸಾಧ್ಯವಾಗುತ್ತದೆ ಎನ್ನುವುದು.[೧೩] ಏಕೆಂದರೆ, ಸಂಶೋಧನೆಗಳೇ ಹೇಳುವಂತೆ, ವಿಷಯ ಹಳೆಯದಾದಂತೆ, ಆಸಕ್ತಿ ಕಡಿಮೆ ಆದಂತೆ, ಸ್ಮರಣೆ ಕಡಿಮೆ ಆದಂತೆ, ಅದರ ನೆನಪು ಸಹ ಕಡಿಮೆ ಆಗುತ್ತದೆ ಎಂದು ತಿಳಿದು ಬರುತ್ತದೆ. ಹಾಗಾಗಿ ಮೌಖಿಕ ಆಕರಗಳಲ್ಲಿನ ಅಂಶಗಳೆಲ್ಲವೂ ಸತ್ಯ ಎಂದು ಪರಿಗಣಿಸಲು ಸಾಧ್ಯವಿಲ್ಲ. ಮೌಖಿಕ ಇತಿಹಾಸದಲ್ಲಿ ಉದ್ದೇಶಪೂರ್ವಕ ಸುಳ್ಳುಗಳು ಸೇರಿ ಹೋಗುವ ಸಂಭವವೂ ಹೆಚ್ಚೆಂದು ಟೀಕಿಸುವವರು ಇದ್ದಾರೆ. ಅದೇ ರೀತಿ, ಬಹಳಷ್ಟು ಜನ ತಮ್ಮ ಕಲ್ಪನೆಗಳನ್ನು ಸತ್ಯವೆಂದು ಹೇಳುತ್ತಾರೆ.[೧೪] ಹಾಗೆಯೇ ಮೌಖಿಕ ಚರಿತ್ರೆಯು ಉತ್ಪ್ರೇಕ್ಷಿತ ಮಾಹಿತಿಯನ್ನು ಒದಗಿಸುತ್ತದೆ. ಸಣ್ಣಪುಟ್ಟ ವಿಚಾರಗಳನ್ನು ವಿಜೃಂಬಿಸಿ ಹೇಳುತ್ತದೆ. ಕೆಲವೊಂದು ವಿಚಾರಗಳನ್ನು ಹೇಳುವಾಗ ಪೂರ್ವಗ್ರಹಪೀಡಿತರಾಗಿರುತ್ತಾರೆ. ಹಾಗೆಯೇ ಕೆಲವೊಂದು ವಿಚಾರಗಳಿಗೆ ಹಾರಿಕೆಯ ಉತ್ತರವನ್ನು ನೀಡುತ್ತಾರೆ. ಹೀಗಾಗಿ ಮೌಖಿಕ ಚರಿತ್ರೆಯು ಇಂದು ಸೋಲಲು ಕಾರಣವಾಗಿದೆ ಎಂದು ಅಭಿಪ್ರಾಯಪಡಬಹುದು. ಮೌಖಿಕ ಚರಿತ್ರೆಯ ಜೊತೆಗೆ ಲಿಖಿತ ಚರಿತ್ರೆಯೂ ಈ ಬಗೆಯ ಮಿತಿಗಳಿಂದ ಹೊರತಾಗಿಲ್ಲ ಎನ್ನುವುದು ಚರಿತ್ರೆ ಅಧ್ಯಯನದಿಂದ ತಿಳಿದುಬರುವ ವಾಸ್ತವ.

### ೬.೨. ಲಾವಣಿಗಳಲ್ಲಿ ಭೀಮರಾಯ

ಮುಂಡರಗಿ ಭೀಮರಾಯರನ್ನು ಕುರಿತು ಅನೇಕ ಲಾವಣಿ ಪದಗಳು ರಚನೆಯಾಗಿವೆ. ಲಭ್ಯವಿರುವ ಮುಖ್ಯ ಲಾವಣಿಗಳಲ್ಲಿ, ಮಹಾಲಿಂಗ ಯಾಳಗಿಯವರ 'ಮುಂಡರಗಿ ನಾಡ ಸ್ವಾತಂತ್ರ್ಯ ಸಂಗ್ರಾಮ' ಎಂಬ ಗ್ರಂಥದಿಂದ 'ಹಮ್ಮಿಗಿ ದೇಸಾಯಿ ಕೆಂಚನಗೌಡರು ಬ್ರಿಟಿಷರ ವಿರುದ್ಧ ಮುಂಡರಗಿ ಭೀಮರಾಯನ ಕೂಡಿ ಸಾರಿದ ಸ್ವಾತಂತ್ರ್ಯದ ಸಮರ'[೧೫] ಎನ್ನುವ ಲಾವಣಿ ಹಾಗೂ ತಿರುಮಲ ತಾತಾಚಾರ್ಯ ಶರ್ಮರ

‘ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ’ ಗ್ರಂಥದಿಂದ ಆಯ್ದುಕೊಂಡ ‘ಮುಂಡರಗಿ ಭೀಮರಾಯನ ಬಂಡಾಯದ ಲಾವಣಿ’ಗಳು ಪ್ರಮುಖವಾಗಿವೆ.[೧೬]

‘ಮುಂಡರಗಿ ಭೀಮರಾಯನ ಬಂಡಾಯದ ಲಾವಣಿ’ ಎಂಬ ಜಾನಪದದಲ್ಲಿ ಭೀಮರಾಯರನ್ನು ಟಿಪ್ಪುವಿಗೆ ಹೋಲಿಸಿ ವರ್ಣಿಸಲಾಗಿದೆ. ಬ್ರಿಟಿಷರು ಹಮ್ಮಿಗಿಯ ಮೇಲೆ ದಾಳಿ ಮಾಡಿ ಕೆಂಚನಗೌಡರಿಂದ ಮದ್ದು, ಗುಂಡು ವಶಪಡಿಸಿಕೊಂಡಾಗ, ಕೆಂಚನಗೌಡರು ಹಮ್ಮಿಗಿಯನ್ನು ಬಿಟ್ಟು ಬೆಣ್ಣೆಹಳ್ಳಿಗೆ ಬಂದು ಭೀಮರಾಯರಲ್ಲಿ ತನ್ನ ನೋವನ್ನು ಹೇಳಿಕೊಂಡಾಗ, ಭೀಮರಾಯರು, ಹಮ್ಮಿಗಿಯ ಮೇಲೆ ದಾಳಿ ಮಾಡಿ ಬ್ರಿಟಿಷರ ವಶದಲ್ಲಿದ್ದ ಮದ್ದು, ಗುಂಡುಗಳನ್ನು ಲೂಟಿ ಮಾಡಿದ ವಿಚಾರ ಕುರಿತು ಹಾಗೂ ಭೀಮರಾಯರ ಧೈರ್ಯ ಸ್ಥೈರ್ಯಗಳನ್ನು ಹೊಗಳುವ ವಿವರಗಳಿವೆ. ಬ್ರಿಟಿಷ್ ಸರಕಾರವು ಭೀಮರಾಯರನ್ನು ಸೆರೆಹಿಡಿಯಲು ಮಾಡಿದ ಕುತಂತ್ರದ ಬಗ್ಗೆ, ಭೀಮರಾಯರ ಹೆಂಡತಿ ಮಕ್ಕಳನ್ನು ಸೆರೆಹಿಡಿದು, ಕೊಪ್ಪಳ ಕೋಟೆಯಲ್ಲಿ ಬಂಧಿಸಿಟ್ಟ ವಿಚಾರದ ಬಗ್ಗೆ, ಮುಂಡರಗಿ ಭೀಮರಾಯನು ಧೈರ್ಯದಿಂದ ತನ್ನ ಹೆಂಡತಿ ಮಕ್ಕಳನ್ನು ಬಿಡಿಸಲು ಕೊಪ್ಪಳ ಕೋಟೆಗೆ ಹೋದ ಪ್ರಸಂಗಗಳನ್ನು, ಕೊಪ್ಪಳ ಕೋಟೆಯಲ್ಲಿ ಬ್ರಿಟಿಷರಿಗೂ, ಭೀಮರಾಯರಿಗೂ ನಡೆದ ಹೋರಾಟದಲ್ಲಿ ಭೀಮರಾಯರು ಮರಣ ಹೊಂದಿದ ವಿಚಾರಗಳನ್ನು ಹಾಗೂ ಭೀಮರಾಯರ ಮರಣದಿಂದ ಅವರ ಹೆಂಡತಿಯರು ಅಳುವ ಪ್ರಸಂಗವನ್ನು ಹಾಗೂ ಬ್ರಿಟಿಷರ ವಿರುದ್ಧ ಹೋರಾಡುತ್ತಾ ವೀರ ಮರಣ ಹೊಂದಿದ ಭೀಮರಾಯರನ್ನು ಮಹಾಭಾರತದ ಅಭಿಮನ್ಯುವಿಗೆ ಹೋಲಿ ಸಲಾಗಿದೆ.

“ಚನ್ನಪಟ್ಟಣದೊಳು ಹೊನ್ನೆಭರತಪುರ
ಪುಣ್ಯಶಹರ ಡಿಲ್ಲಿ ಒಳಗೆ
ಮೀರಿದ ದೊರೆಗಳ ಜಗಳದ ಒಳಗೆ
ಸೋತು ಸೆರೆ ಆಳುವರಿಂದೀಗೆ
ಟೀಪು ಎಂದರಂತೆ ಭೂಮಿಗೆ
ಹೆಸರಿಗೆ ಕಿಲ್ಲೇಶ ಕಟ್ಟಿಸಿದವಂಗೆ
ಕೋಟೆ ಪಾಲಿಗೆ ಶಾಟ ಉಂಟೆ
ಹೊಸ ಕೀಟಕ ಭೀಮರಾಯ ದೊರೆಯ.

ಮದ್ದುಗುಂಡು ಸೋರುಪ್ಪು ಗಂಧಕ
ಇದ್ದಡಗಿಸಿಕೊಂಬುವರು
ಭಾರಿ ಶಿಕ್ಷೆಗೆ ಒಳಗಾಗುವರು
ಕುಂಪಣಿಯವರು ಸಾರಿ ಹೇಳಿದರು
ದೇಶದ ಮದ್ದು ಗುಂಡು ಕೊಂಡರು
ನಿಮ್ಮಲ್ಲಿದ್ದರೆ ಕೊಡರೆಂದರು
ಧೀರ ಕುಂಪಣಿದಾರ

ಜಡ್ಯಾನು ದೇಸಾಯಿ ಅಳುತ
ಬಣ್ಣಗುಂದಿ, ಮಾರಿ ಸಣ್ಣ ಮಾಡಿಕೊಂಡು ಬೆಣ್ಣೆಹಳ್ಳಿಗೋಡಿ ಹೋಗಿ
ಭೀಮರಾಯಗೆ ಹೇಳುತಾನೆ ಶಿವಾ ಶಿವಾ ಎಂದು
ಸಾವಿನ ಕಾಲ ಬಂತಂದು
ಆಗ ವರ್ತಮಾನ ಇಂತೆಂದು
ತಿಳಿಸಿದ ಕಣ್ಣು ತುಂಬ ನೀರತಂದು
ಎನ್ನದು ಹಣಗಳು ನಿನ್ನದು ಮರಣವು
ಅನಲಿಕ್ಕೆ ನಿನಗೆ ಭಯವು ಬೇಡೆಂದು
ಧೀರಕುಂಪಣಿ ಸರದಾರ.

ಗಜಬಿಜಿ ಆದಿತು ನಿಜವದು ಭೀಮರಾಯ
ತಜವೀಜು ಮಾಡಿದನೆಂದನು
ಪ್ರಜೆಗಳು ಅತಿಭಯಗೊಂಡು
ಲಿಂಗಸೂರು ಲಾವಣಿ ಭುಗಿಭುಗಿಲೆಂದು
ಭೀಮರಾಯರ ಹೆಂಡರ ಇಬ್ಬರಳ ಹಿಡಿತಂದು
ಕೊಪ್ಪಳ ಕಿಲ್ಲೆದಲ್ಲಿ ಇಟ್ಟರೆಂದು
ಕಾಳಯುಕ್ತ ಸಂವತ್ಸರ ಅಧಿಕ
ಬಹುಳ ತಿಥಿ ಮುಂದೊಂದು
ಧೀರ ಕುಂಪಣಿ ಸರಾದರ.

ಹೆಂಡರ ಸೆರೆಯನು ಕಂಡು ಬದುಕುವನು
ಬಂಡ ಭೀಮರಾಯ ತಾನು
ರಾತ್ರೀಲೆ ಗುಮುಟ ಬಿಟ್ಟು ಹೊರಟಾನು
ಬೆಳಗಿನ ಝೂವದಲ್ಲಿ ಬಂದಾನು
ಕೊಪ್ಪಳ ಅಗಸಿಯನು ಮುರಿದಾನು
ಹೆಂಡರು ಮಕ್ಕಳನ್ನು ಕೂಡಿದನು
ಒಳಗೆ ಸಿಕ್ಕಿ ಜನರಿಗೆಲ್ಲ ಜುಲಿಮಿಲಿ
ಸಂಬಳ ಗೊತ್ತು ಮಾಡಿದನು
ಧೀರ ಕುಂಪಣಿ ಸರಾದರ
ಭೀಮರಾಯ ಕೊಪ್ಪಳಕ್ಕೆ ಬಂದಾನೆಂದು
ಆಗ ಬರೆದನು ಸುಭೇದಾರ
ಲಿಂಗಸೂರ ಛಾವಟಿ ಇತ್ತೊ ಸಾವಿರಾ
ತುರ್ತಿನ ಮಂದಿ ತಂದಾ ಸರದಾರ ಕೊಪ್ಪಳ ಸುತ್ತ

ಕುದುರೆಯ ವ್ಯಾಪಾರ
ನಾಲ್ಕು ಕಡೆ ತೋಪು ತಯಾರ
ಹೂಡಿ ಹೊಡೆದನು ನೆಲೆಯಿಲ್ಲದ ಗುಂಡು
ಕಿಲ್ಲೆ ಮಾಡಿದನು ದೂರ ದೂರಾ
ಧೀರ ಕುಂಪಣಿ ಸರದಾರ

ದಡ ಬಡದೊಳು ಎಂದು ಎಡಬಲ ಬಿಡದೆ
ಹೊಡೆವ ತೋಪುಗಳ ಗುಂಡು
ಹೊಡೆತಕ್ಕೆ ಕಿಲ್ಲೆವಾದೀತು ತುಂಡು ತುಂಡು
ಹಮ್ಮಿಗೆ ದೇಸಾಯಿ ಭೀಮರಾಯ ಕಂಡು
ಗಚ್ಚಿನಕೋಟೆ ಹತ್ತ್ಯಾರೆ ಭಯಗೊಂಡು
ಕ್ಷಣಕ್ಷಣಕ್ಕೆ ಹಾರಲಿಲ್ಲ ಒಂದು ಗುಂಡು
ಧಡಭಡ ಆರ್ಭಟದೊಳು
ಒಳಗಡಿಗಿ ನಿಂತಿತು ಒಳಗಿನ ದಂಡು
ಧೀರ ಕುಂಪಣಿ ಸರದಾರ."[೧೭]

'ಹಮ್ಮಿಗಿ ದೇಸಾಯಿ ಕೆಂಚನಗೌಡರು ಬ್ರಿಟಿಷರ ವಿರುದ್ಧ ಮುಂಡರಗಿ ಭೀಮರಾಯನ ಕೂಡಿ ಸಾರಿದ ಸ್ವಾತಂತ್ರ್ಯದ ಸಮರ' ಎಂಬ ಲಾವಣಿಯಲ್ಲಿ, ಭೀಮರಾಯನು ಹೂವಿನಹಡಗಲಿಯಲ್ಲಿ ಬ್ರಿಟಿಷರ ಬಳಿ ಸೇವೆ ಸಲ್ಲಿಸುತ್ತಿದ್ದ ವಿಷಯ ಹಾಗೂ ಸೇವೆಯನ್ನು ಬಿಟ್ಟು, ಹಮ್ಮಿಗಿ ಕೆಂಚನಗೌಡರಿಬ್ಬರು ಸೇರಿ, ಬೆಣ್ಣೆಹಳ್ಳಿಯಲ್ಲಿ ಸೈನ್ಯ ತರಬೇತಿ ನೀಡುವ, ಒಟ್ಟಾಗಿ ಸೈನ್ಯ ಕಟ್ಟಿದ ವಿಚಾರವನ್ನು ಹಾಗೂ ಭೀಮರಾಯರ ಇಬ್ಬರು ಹೆಂಡಿರನ್ನು ಕೊಪ್ಪಳ ಕೋಟೆಯಲ್ಲಿ ಬಂಧಿಸಿಟ್ಟಾಗ ಅವರನ್ನು ಬಿಡಿಸಲು, ಭೀಮರಾಯ ಹೊರಟಂತಹ ಸನ್ನಿವೇಶವನ್ನು, ಕೊಪ್ಪಳ ಕೋಟೆಯಲ್ಲಿ ಬ್ರಿಟಿಷರಿಗೂ ಭೀಮರಾಯರಿಗೂ ನಡೆದ ಯುದ್ಧದ ವಿವರಣೆಯನ್ನು, ಭೀಮರಾಯರು ಹುತಾತ್ಮರಾದ ಬಗ್ಗೆ ಹಾಡಲಾಗಿದೆ.

"ಮುಂಡರಿಗಿ ಭೀಮ್ರಾಯ ಬ್ರಿಟಿಶರಲ್ಲಿನ
ಹೊಂದಿಕೆಯಿಂದಲಿ ನವಕರಿಯನ್ನು
ಚಂದದಿ ಮಾಡ್ತಿದ್ದ ಹೂವಿನ್ಹಡಗಲಿಗಿನ್ನ
ಹೊಂದಿಕೆ ಆಗಲಿಲ್ಲ ಬಿಟ್ಟಂದ ಕೇಳಿರಿನ್ನ

ಬಿಟ್ಟಂದ ಸುದ್ದಿ ಕೇಳಿ ಕೆಂಚನಗೌಡ ನಿನ್ನ
ಒಟ್ಟಾಗಿ ಕೂಡ್ವೇಕ ನಾವಿಬ್ಬರಿನ್ನ
ಘಟ್ಟಿಗತನದಿ ಕಟ್ಬೇತ ಸೈನ್ಯವನ್ನು
ಹುಟ್ಟಡಗಿಸ್ಬೇಡ ಬ್ರಿಟಿಷರ ನಾವಿನ್ನ

ಅಟ್ಟ ಹಾಸದಿ ಸೈನ್ಯ ತರಬೇತಿಯನ್ನ
ಘಟ್ಟಿಗ ಭವಾನ್ಸಿಂಗನಿಂದ ನಾವಿನ್ನ

ಮೊಟ್ಟದಲು ಬೆಣ್ಣಳ್ಳಿ ತೋಟದಾಗಿನ್ನ
ಕಟ್ಬೇಕು ತರಬೇತಿಗೆ ಸೈನ್ಯವನ್ನ

ಭೀಮ್ರಾಯರ ಮಡದಿ ವೆಂಕುಬಾಯಿಯನ್ನ
ಮೂಮಸಕತನದಿ ವೈದಾರು ಕೇಳಿನ್ನ
ಧೂಮಸಂಜಿಲಿ ಕೊಪ್ಪಳ ತಾಶಿಲಿನ್ನ
ನಮ್ಮವನೆ ಅವನು ಮೂಸ್ಗಾರ ನೋಡಿರಿನ್ನ

ವೈದಿಟ್ಟಾರು ಕೊಪ್ಪಳ ಕೋಟೆಯೊಳಗಿನ್ನ
ಯಿದ್ದಾರು ಅಲ್ಲಿ ನಮ್ಮವರು ಕೇಳಿನ್ನ
ಬುದ್ಧಿವಂತ ದೇಶಭಕ್ತ ಮುಕ್ತುಂ ಮೋದೀ ನಿನ್ನ
ಯಿದ್ದಾರು ಈ ನಾಯ್ಕರು ನೋಡಿರಿನ್ನ

ಸುದ್ಧಿ ತಂದಾರು ನಮ್ಮವರಿಗೆ ಕೇಳಿನ್ನ
ಎದ್ದಿತು ಕೋಪ ರೋಷದಿ ಕೇಳಿರಿನ್ನ
ಖುದ್ದ ಕೆಂಚನಗೌಡ ಭೀಮ್ರಾಯರಿನ್ನ
ಸಿದ್ಧಗೊಳಿಸಿ ಸೈನ್ಯವ ಹೊಂಟಾರು ಮುನ್ನ

ನಮ್ಮ ಹೊಡೆತಕ್ಕೆ ಸತ್ತಾರು ಕೆಂಪರಿನ್ನ
ಕಮ್ಮಿಲ್ಲ ನಮ್ಮವರು ಕೊಂದಾರು ನೂರಿನ್ನೂರಿನ್ನ
ಒಮ್ಮೆಲೆ ಕೊಂದಾರು ಬ್ರಿಟಿಷರು ನಮ್ಮನ್ನ
ಸುಮ್ಮನೆ ನೆಲಕಚ್ಚಿ ರಕ್ತದ ತರ್ಪಣ

ಭಾಳ ಜೋರಿನಿಂದ ನಡದಿತ್ತು ಯುದ್ಧವಿನ್ನ
ಕೇಳು ಕೆಂಚನಗೌಡ ಭೀಮ್ರಾಯರಿನ್ನ
ಬಾಳ ನಾಶಗೈದರು ಬ್ರಿಟಿಷರ ಸೈನ್ಯವನ್ನು
ಖೂಳ ಬ್ರಿಟಿಷರ ಗುಂಡು ಬಡದೀತಿನ್ನ

ನೆಲಕಚ್ಚಿದ ಕೆಂಚನಗೌಡ ಭೀಮ್ರಾವರಿನ್ನ
ಮೂಲೆ ಮೂಲೆಗೆ ಕಾಲ್ಕಿತ್ತರು ನಮ್ಮವರಿನ್ನ
ಮಾಲೆ ಹಾಕಿದಳು ಕೆಂಪರಿಗೆ ಜಯವಿನ್ನ
ಶೀಲವತೆ ಭಾರತಾಂಬೆ ಕಂಣೇರಿನ್ನ

ಎಪ್ಪತ್ತೇಳು ಮಂದಿಗಿನ್ನ
ವುದಯಕ್ಕೆ ನಿಂದರಿಶಿ ಗುಂಡಿಕ್ಕಿದರಿನ್ನ
ಐದು ವರ್ಷದ ಶಿಕ್ಷೆ ಹತ್ತು ಮಂದಿಗಿನ್ನ
ಹದಿನಾಲ್ಕು ವರ್ಷದ ಶಿಕ್ಷೆ ಮುವತ್ತೊಂದಿನ್ನ.

ದೇಶದಲ್ಲಿ ಹೆಸರಾತು ಹಮ್ಮಿಗಿ ಯಿನ್ನ
ವಾಸಯಿಲ್ಲಿ ದೇಶಭಕ್ತ ಕೇಳಿರಿ ನೀವಿನ್ನ
ಸೋಶಿ ಕೆಂಚನಗೌಡ ಭೀಮ್ರಾಯರಂತಿನ್ನ
ದೇಶಕ್ಕೆ ಮೋಸ್ಮಾಡದೆ ಆಳಿರಿ ನೀವಿನ್ನ.[೧೮]

### ೬.೩. ವಂಶಸ್ಥರ ಸಂದರ್ಶನ

ಸಂಶೋಧನೆಯೆಂದರೆ ಸತ್ಯವನ್ನು ಅಥವಾ ನಿಜಾಂಶವನ್ನು ಆದಷ್ಟೂ ಹತ್ತಿರದಿಂದ ಕಂಡು ಹಿಡಿಯುವ ಪ್ರಯತ್ನ. ಸಂಶೋಧನೆ ನಡೆಸುತ್ತಲೇ ಸತ್ಯಗಳು ಹಲವಾರು ಎನ್ನುವುದು ಮನವರಿಕೆಯಾಗುತ್ತಾ ತಾನು ಯಾವ ಸತ್ಯದೆಡೆಗೆ ಸಾಗಬೇಕೆನ್ನುವ ನಿರ್ಧಾರ ರೂಪುಗೊಳ್ಳುತ್ತದೆ. ವಿಷಯಕ್ಕೆ ಸಂಬಂಧಿಸಿದ ವ್ಯಕ್ತಿಯನ್ನು ಅಥವಾ ವಂಶಸ್ಥರನ್ನು ನೇರವಾಗಿ ಕಂಡು ವಿಷಯ ಸಂಗ್ರಹಿಸುವುದು ಸಂಶೋಧಕನಿಗೆ ತನ್ನ ಕ್ಷೇತ್ರದಲ್ಲಿ ಸ್ವತಂತ್ರವಾಗಿ ಮುಂದುವರಿಯುವುದಕ್ಕೂ ಹಾಗೂ ಮಾಹಿತಿದಾರನ ವಿಚಾರಗಳನ್ನು, ಪ್ರತಿಕ್ರಿಯೆಗಳನ್ನು ಪ್ರತ್ಯಕ್ಷವಾಗಿ ಅಧ್ಯಯನ ಮಾಡುವುದಕ್ಕೂ ಸಹಕಾರಿಯಾಗುತ್ತದೆ. ಸಂಶೋಧನೆಗೆ ನೆರವಾಗುವ ವ್ಯಕ್ತಿಗಳನ್ನು, ಪ್ರದೇಶಗಳನ್ನು ಪ್ರತ್ಯಕ್ಷವಾಗಿ ಸಂದರ್ಶಿಸಿ ತನ್ನ ವಿಷಯಕ್ಕೆ ಸಂಬಂಧಿಸಿದ ಹೆಚ್ಚಿನ ಮಾಹಿತಿ ಕೇಳಿ ಪಡೆದುಕೊಳ್ಳುವುದರಿಂದ, ಸಂಶೋಧನೆಗೆ ಹೆಚ್ಚಿನ ಆಳ ಮತ್ತು ವಿಸ್ತಾರತೆ ಉಂಟಾಗುತ್ತದೆ.[೧೯]

ಮುಂಡರಗಿ ಪಟ್ಟಣದಲ್ಲಿ ವಾಸವಾಗಿರುವ ಮುಂಡರಗಿ ಭೀಮರಾಯರ ನಾಲ್ಕನೇ ವಂಶಸ್ಥರಾದ ವೆಂಕಟರಾವ್ ಲಕ್ಷ್ಮಣರಾವ್ ನಾಡಗೌಡರು ನೀಡಿರುವ ಮಾಹಿತಿ ಪ್ರಕಾರ, ಭೀಮರಾಯರ ವಂಶದ 'ವಂಶವೃಕ್ಷ'ವು ಈ ರೀತಿ ಇದೆ.



ಇವರನ್ನು ಸಂದರ್ಶಿಸಿದಾಗ ಮುಂಡರಗಿ ಭೀಮರಾಯರ ಕುರಿತು ಮುಂಡರಗಿ ಪರಿಸರದಲ್ಲಿ ಪ್ರಚಲಿತವಿರುವ ಮಾಹಿತಿಗಳು ಹಾಗೂ ಅವರ ವಂಶಸ್ಥರು ಭೀಮರಾಯರ ಬಗ್ಗೆ ತಿಳಿದಿರುವ ಮಾಹಿತಿಗಳು ಸಿಕ್ಕಿದವು. ಇವು ಅತ್ಯಂತ ಉಪಯುಕ್ತ ಮಾಹಿತಿಗಳಾಗಿದ್ದು. ಭೀಮರಾಯರ ಹೋರಾಟದ ಚರಿತ್ರೆಯ ಮರುನಿರ್ಮಾಣಕ್ಕೆ ಸಹಕಾರಿಯಾಗಿವೆ. ಸಂದರ್ಶನದಿಂದ ತಿಳಿದುಬಂದ ಪ್ರಮುಖ ವಿಚಾರವೆಂದರೆ, "ನಾಡಗೌಡ ಎನ್ನುವ ಪದವಿ ಒಂದು ಪ್ರದೇಶದ ಆಡಳಿತ ವ್ಯವಸ್ಥೆಯಲ್ಲಿ ಮಹತ್ವದ್ದಾಗಿದೆ. ಆ ಪ್ರದೇಶದ ತೆರಿಗೆ ಮತ್ತು ಕಪ್ಪ-ಕಾಣಿಕೆಯನ್ನು ಜನರಿಂದ ವಸೂಲಿ ಮಾಡಿ ಬ್ರಿಟಿಷ್ ಪ್ರಭುತ್ವಕ್ಕೆ ಸಲ್ಲಿಸುವುದು ಇವರ ಕರ್ತವ್ಯವಾಗಿತ್ತು. ಸುಮಾರು ೫೫ ಹಳ್ಳಿಗಳು ನಾಡಗೌಡರ ಆಡಳಿತ ಅಧೀನ ನಿಯಂತ್ರಣಕ್ಕೆ ಒಳಪಟ್ಟಿರುತ್ತಿದ್ದವು. ಅಧಿಕಾರಿಗಳಾದ ದೇಶಪಾಂಡೆ, ಮುತಾಲಿಕ್, ಜಮೀನ್ದಾರ, ಕುಲಕರ್ಣಿಗಳು ನಾಡಗೌಡರ ಅಧೀನಕ್ಕೆ ಒಳಪಟ್ಟಿದ್ದರು."

"ಭೀಮರಾಯ ಮತ್ತು ಭೀಮರಾವ್ ಎಂದು ಕರೆಯಲ್ಪಡುತ್ತಿರುವ ರಾಯ ಮತ್ತು ರಾವ್ ಎನ್ನುವ ಶಬ್ದಗಳ ಬಗ್ಗೆ ಉಲ್ಲೇಖಿಸುತ್ತಾ, ರಾಯ ಎಂಬುದು ಜಾತ್ಯಾತೀತಿ ಒಡೆಯನ ಹೆಸರಿನೊಂದಿಗೆ ಸೇರುವ ಪದವಾಗಿದ್ದು, ರಾವ್ ಎಂಬುದು ಜಾತಿ ಸಂಕೇತವಾಗಿದೆ."

"ಭೀಮರಾಯರು ಹುಟ್ಟಿದ ಸ್ಥಳ ಮುಂಡರಗಿ ತಾಲೂಕಿನ ಬೆಣ್ಣೆಹಳ್ಳಿ ಗ್ರಾಮ. ಭೀಮರಾಯರು ಬ್ರಿಟಿಷರ ವಿರುದ್ಧ ಬಂಡಾಯ ಸಾರಿದಾಗ, ಹುಟ್ಟೂರಿನ ಅವರ ಮನೆಯನ್ನು ಸಿಡಿಮದ್ದು, ಡೈನಾಮೈಟ್ ಇಟ್ಟು ನಾಶ ಮಾಡಲಾಯಿತು. ಹಾಗಾಗಿ ಅವರಿಗೆ ಸಂಬಂಧಪಟ್ಟ ದಾಖಲೆಗಳು, ವಸ್ತುಗಳು, ಭಾವಚಿತ್ರಗಳು ನಾಶವಾಗಿದ್ದು, ಅವರಿಗೆ ಸಂಬಂಧಪಟ್ಟ ಯಾವುದೇ ದಾಖಲೆಗಳಾಗಲಿ, ಭಾವಚಿತ್ರವಾಗಲಿ ಉಳಿಯಲಿಲ್ಲ, ಅವೆಲ್ಲಾ ನಾಶವಾಗಿವೆ."

"ಮುಂಡರಗಿ ಭೀಮರಾಯರ ನಾಲ್ಕನೇ ತಲೆಮಾರಿನ ಅವರ ವಂಶಸ್ಥರು ಮುಂಡರಗಿಯಲ್ಲಿ ಪ್ರಸ್ತುತ ವಾಸ ಮಾಡುತ್ತಿರುವ ಕಟ್ಟಡವು ಈ ಹಿಂದೆ ಭೀಮರಾಯರ ಕಾಲದಲ್ಲಿ ಅವರ ಕುದುರೆ ಲಾಯವಾಗಿತ್ತು. ಈಗಲೂ ಸಹ ಮುಂಡರಗಿ, ಸಿಂಗಾಟಲೂರು, ಕೊರ್ಲಹಳ್ಳಿ, ಐತಾಪುರ, ಹೆಸರೂರು ಕೋಟೆಗಳು ಇಂದಿಗೂ ಈ ವಂಶಸ್ಥರ ಹೆಸರಿನಲ್ಲಿಯೇ ಇವೆ. ಹಾಗೆಯೇ ಭೀಮರಾಯರಿಗೆ ಇಬ್ಬರು ಪತ್ನಿಯರಿದ್ದು, ಒಬ್ಬರು ಜೀವೂಬಾಯಿ ಹಾಗೂ ಕುಕನೂರು ಮಾದನಗೌಡರ ಮಗಳು ವೆಂಕೂಬಾಯಿ. ವೆಂಕೂಬಾಯಿಯನ್ನು ಮದುವೆ ಆಗಿದ್ದರಿಂದ ಕುಕುನೂರಿನ ಮಾದನಗೌಡರ ಸಂಪರ್ಕದಿಂದಾಗಿ, ಭೀಮರಾಯರಿಗೆ ಕೊಪ್ಪಳದ ಸುತ್ತಮುತ್ತಲಿನ ಜನರ ಜೊತೆ ಒಡನಾಟಕ್ಕೆ ಸಹಾಯವಾಯಿತು."

"ಭೀಮರಾಯರ ತಂದೆಯವರಾದ ರಂಗರಾಯರು ಆಗ ನ್ಯಾಯಾಧೀಶರಾಗಿ ಅಧಿಕಾರ ಸ್ಥಾನ ಹೊಂದಿದ್ದು, ಆಗ ಬ್ರಿಟಿಷ್ ರೆಜಿಮೆಂಟ್ ಅಧಿಕಾರಿಯಾಗಿದ್ದ ಮಿಂಟೋನೊಂದಿಗೆ ಒಳ್ಳೆಯ ಸ್ನೇಹವಿತ್ತು. ಭೀಮರಾಯರಲ್ಲಿದ್ದ ಇಂಗ್ಲಿಷ್ ಭಾಷೆಯ ಜ್ಞಾನ ಮತ್ತು ಕುದುರೆ ಸವಾರಿ ಹಾಗೂ ಬಂದೂಕಿನ ಗುರಿ ಹೀಗೆ ವಿವಿಧ ಕ್ಷೇತ್ರಗಳಲ್ಲಿನ ಪ್ರತಿಭೆಯನ್ನು ಗುರುತಿಸಿದ ಬ್ರಿಟಿಷ್ ಅಧಿಕಾರಿ ಮಿಂಟೋ, ಭೀಮರಾಯರನ್ನು

ಮದ್ರಾಸಿಗೆ ಕರೆದೊಯ್ದು ಹೆಚ್ಚಿನ ಶಿಕ್ಷಣವನ್ನು ಪಡೆಯುವಲ್ಲಿ ಅನುಕೂಲ ಮಾಡಿಕೊಟ್ಟರು. ಭೀಮರಾಯರ ಮರಣದ ನಂತರವೂ, ಅವರ ಕುಟುಂಬಕ್ಕೆ ಯಾವ ತೊಂದರೆಯೂ ಆಗದಂತೆ ನೋಡಿಕೊಂಡರು."[೨೦]

**ಕೊನೆಟಿಪ್ಪಣಿಗಳು**

೧. ಲ್ಯಾರಿ ಡೆನಿಯಲ್‌ಸನ್, ದಿ ಓರಲ್ ಹಿಸ್ಟೋರಿಯನ್ ಅಂಡ್ ಲೋಕಲ್ ಹಿಸ್ಟರಿ, ಪು. ೧೮೮.

೨. ಜಾನ್ ಶಿರೋನ್ ಡಿ ಹಾರ್ಟ್, ಓರಲ್ ಸೋರ್ಸಸ್ ಅಂಡ್ ಕನ್‌ಟೆಂಪರರಿ ಹಿಸ್ಟರಿ, ಪು. ೭೧.

೩. ಬ್ರೇನ್ ಹ್ಯಾರಿಸನ್, ಓರಲ್ ಹಿಸ್ಟರಿ ಅಂಡ್ ರೀಸೆಂಟ್ ಪೊಲಿಟಿಕಲ್ ಹಿಸ್ಟರಿ, ಪು. ೪೩.

೪. ಕರೋಲ್ ಕಮ್ಮೆನ್, ಆನ್ ಡೂಯಿಂಗ್ ಲೋಕಲ್ ಹಿಸ್ಟರಿ, ಪು. ೬೮.

೫. ಲಕ್ಷ್ಮಣ್ ತೆಲಗಾವಿ, ಸ್ಥಳೀಯ ಚರಿತ್ರೆ, ಪು. ೫.

೬. ಆ್ಯಂಟನಿ ಗ್ರಾಂಸಿ, ಸೆಲೆಕ್ಷನ್ ಫ್ರಂ-ದ-ಪ್ರಿಸನ್ ನೋಟ್ ಬುಕ್ಸ್, ಪು. ೪೭.

೭. ಲಕ್ಷ್ಮಣ್ ತೆಲಗಾವಿ, ಸ್ಥಳೀಯ ಚರಿತ್ರೆ, ಪು. ೨೨.

೮. ಆಂತೋನಿ ಸಲ್ಡಾನ, ಜೋನ್ನ ಪಪ್ಪಾವರ್ತ, ಎಲೈಟ್ ಓರಲ್ ಹಿಸ್ಟರಿ, ಪು. ೧೩೭.

೯. ಜಾನ್ ವ್ಯಾನ್‌ಸಿನ್, ಓರಲ್ ಟ್ರೆಡೀಷನ್ ಆ್ಯಸ್ ಹಿಸ್ಟೋರಿ, ಪು. ೪೯.

೧೦. ವಸು, ಮೌಖಿಕ ಇತಿಹಾಸ, ಪು. ೯.

೧೧. ತಂಬಂಡ ವಿಜಯ್ ಪೂಣಚ್ಚ, ಚರಿತ್ರೆ ವಿಶ್ವಕೋಶ, ಪು. ೩೫.

೧೨. ಬ್ರಾನ್ಸ್ ಎಂ. ಸ್ಟೇವ್, ಹಿಸ್ಟರಿ ಗ್ರಫಿ ಥ್ರೂ ಓರಲ್ ಹಿಸ್ಟರಿ, ಪು. ೫೭.

೧೩. ವಸು, ಮೌಖಿಕ ಇತಿಹಾಸ, ಪು. ೨೭.

೧೪. ಆಂತೋನಿ ಸಲ್ಡಾನ, ಜಾನ್ ಪಪ್ಪಾವರ್ತ್, ಎಲೈಟ್ ಓರಲ್ ಹಿಸ್ಟರಿ, ಪು. ೩೪.

೧೫. ತಿರುಮಲ ತಾತಾಚಾರ್ಯಶರ್ಮ, ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ, ಪು. ೧೧೦.

೧೬. ಮಹಾಲಿಂಗ ಯಾಳಗಿ, ಮುಂಡರಗಿ ನಾಡ ಸ್ವಾತಂತ್ರ್ಯ ಸಂಗ್ರಾಮ, ಪು. ೧೨೧.

೧೭. ತಿರುಮಲ ತಾತಾಚಾರ್ಯಶರ್ಮ, ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ, ಪು. ೧೧೩.

೧೮. ಮಹಾಲಿಂಗ ಯಾಳಗಿ, ಮುಂಡರಗಿ ನಾಡ ಸ್ವಾತಂತ್ರ್ಯ ಸಂಗ್ರಾಮ, ಪು. ೧೩೯.

೧೯. ಶಿರೂರ ಬಿ.ವ್ಹಿ, ಸಂಶೋಧನ ಸ್ವರೂಪ, ಪು. ೧೧೦.

೨೦. ವೆಂಕಟರಾವ್ ಲಕ್ಷ್ಮಣರಾವ್ ನಾಡಗೌಡ, ಮುಂಡರಗಿ - ಭೀಮರಾಯರ ನಾಲ್ಕನೇ ವಂಶಸ್ಥರು, ಸ್ವಾತಂತ್ರ್ಯ ಹೋರಾಟಗಾರರು, ದಿನಾಂಕ ೩೦.೩.೨೦೦೮, ೧೦.೪.೨೦೦೮, ಮುಂಡರಗಿ; ಮಹಾಲಿಂಗ ಯಾಳಗಿ, ನಿವೃತ್ತ ಕನ್ನಡ ಉಪನ್ಯಾಸಕರು, ಲೇಖಕರು. ದಿನಾಂಕ ೩೦.೩.೨೦೦೮,

೫.೫.೨೦೦೮, ಮುಂಡರಗಿ; ಸ್ವಾತಂತ್ರ್ಯ ಹೋರಾಟಗಾರರ ಸಂಘ, ಮುಂಡರಗಿ, ದಿನಾಂಕ ೩೦.೩.೨೦೦೮, ಮುಂಡರಗಿ; ಕೃಷ್ಣರಾವ್, ಸ್ವಾತಂತ್ರ್ಯ ಹೋರಾಟಗಾರರು, ದಿನಾಂಕ ೧೦.೪.೨೦೦೮, ಬೆಣ್ಣಿಹಳ್ಳಿ; ಡಾ. ಎಂ.ಎಂ. ಶೆಟ್ಟರ್, ಹೈಸ್ಕೂಲ್ ಶಿಕ್ಷಕರು, ಸಂಶೋಧಕರು, ದಿನಾಂಕ ೨೯.೩.೨೦೦೮, ನಾಗತಿ ಬಸಾಪುರ.

• • •

# ಅಧ್ಯಾಯ ೭

# ಉಪಸಂಹಾರ

ಯುರೋಪಿಯನ್ನರ ಆಗಮನದ ಸಂದರ್ಭದಲ್ಲಿ ಭಾರತವು ಅನೇಕ ಸಂಸ್ಥಾನಗಳಿಂದ, ಆಳರಸರಿಂದ, ಆಡಳಿತ ಮಾಡಲ್ಪಡುತ್ತಿದ್ದ ಒಂದು ರಾಷ್ಟ್ರವಾಗಿತ್ತೇ ವಿನಹ ಅಖಂಡ ರಾಷ್ಟ್ರವಾಗಿರಲಿಲ್ಲ. ಇದು ಭಾರತಕ್ಕೆ ಆಗಮನಿಸಿದ ವಿದೇಶಿಯರಿಗೆ ಅನುಕೂಲಕರವಾಗಿ ಪರಿಣಮಿಸಿತು. ಈಸ್ಟ್ ಇಂಡಿಯಾ ಕಂಪನಿ ಮೂಲಕ ವ್ಯಾಪಾರಕ್ಕೋಸ್ಕರ ಬಂದ ಬ್ರಿಟಿಷರು, ಇಲ್ಲಿನ ಸಂದರ್ಭಗಳನ್ನು ಉಪಯೋಗಿಸಿಕೊಂಡು, ರಾಜಕೀಯ ಪ್ರಭುತ್ವ ಸ್ಥಾಪನೆ ಮಾಡಿ, ಭಾರತವನ್ನು ವಸಾಹತು ರಾಷ್ಟ್ರವನ್ನಾಗಿ ಮಾಡಿಕೊಂಡರು. ೧೭೫೭ರ ಪ್ಲಾಸಿ ಕದನದ ವಿಜಯದ ನಂತರ ಬ್ರಿಟಿಷರು ಭಾರತದಲ್ಲಿ ಸುಭದ್ರವಾದ ಆಡಳಿತವನ್ನು ಆರಂಭಿಸಿದರು. ರಕ್ಷಣೆಯ ಹೆಸರಿನಲ್ಲಿ ಕೋಟೆಗಳನ್ನು ಕಟ್ಟಿಕೊಂಡು ಸೈನ್ಯದ ನಿರ್ವಹಣೆಯನ್ನು ಆರಂಭಿಸಿದರು. ನಂತರ ಹಂತ ಹಂತವಾಗಿ ಬ್ರಿಟಿಷರ ಉದ್ದೇಶ ಮತ್ತು ನೀತಿಗಳು ಬದಲಾವಣೆಗೊಂಡು, ವ್ಯಾಪಾರದಿಂದ ರಾಜಕೀಯ ಪ್ರಭುತ್ವ ಸ್ಥಾಪನೆಯತ್ತ ಹೆಜ್ಜೆಯನ್ನಿಟ್ಟರು.

ಆರಂಭದಲ್ಲಿ "ಇಂಗ್ಲಿಷ್ ಈಸ್ಟ್ ಇಂಡಿಯಾ ಕಂಪನಿ"ಯು ಎರಡು ಮುಖ್ಯ ಉದ್ದೇಶಗಳನ್ನು ಹೊಂದಿದ್ದಿತು. ಮೊದಲನೆಯದಾಗಿ, ಭಾರತ ಹಾಗೂ ಪ್ರಾಚ್ಯ ದೇಶಗಳ ವ್ಯಾಪಾರದ ಏಕಸ್ವಾಮ್ಯ ತನಗಿರಬೇಕೆಂಬ ಆಪೇಕ್ಷೆ ಹೊಂದಿತ್ತು. ಎರಡನೆಯದಾಗಿ, ಇತರ ಯಾವುದೇ ಎರಡನೆಯ ಶಕ್ತಿ ರಾಷ್ಟ್ರವು ತನ್ನೊಂದಿಗೆ ಸ್ಪರ್ಧೆ ನಡೆಸಬಾರದೆಂಬುದು ಅದರ ಇಚ್ಛೆಯಾಗಿತ್ತು. ಕಂಪನಿಯು ಎಷ್ಟು ಸಾಧ್ಯವೋ ಅಷ್ಟು ಅಗ್ಗದ ಬೆಲೆಗೆ ಭಾರತೀಯ ವಸ್ತುಗಳನ್ನು ಕೊಳ್ಳುವುದು ಮತ್ತು ಸಾಧ್ಯವಾದಷ್ಟು ಹೆಚ್ಚು ಬೆಲೆಗೆ ಕಂಪನಿ ವಸ್ತುಗಳನ್ನು ಮಾರಿ ಅತ್ಯಧಿಕ ಪ್ರಮಾಣದ ಲಾಭವನ್ನು ಗಳಿಸುವ ಉದ್ದೇಶವನ್ನು ಕಂಪನಿಯು ಹೊಂದಿರುವುದು ಕಂಡು ಬರುತ್ತದೆ. ಈ ದೃಷ್ಟಿಕೋನದಿಂದ ನೋಡಿದರೆ ಭಾರತದ ಬಗ್ಗೆ ಬ್ರಿಟಿಷರು ಯಾವ ಮನೋಭಾವ ಹೊಂದಿದ್ದರು ಎಂಬುದು ಸ್ಪಷ್ಟವಾಗುತ್ತದೆ.

ತಮ್ಮ ಸಾಧನೆಗಾಗಿ ಬ್ರಿಟಿಷರು ಎರಡು ಪ್ರಭುತ್ವಗಳನ್ನು ಅತ್ಯಂತ ನಿಷ್ಠುರವಾಗಿ ಜಾರಿಗೆ ತಂದರು. ಒಂದು ಬಂಡವಾಳಶಾಹಿತ್ವ ಮತ್ತೊಂದು ವಸಾಹತು ನೀತಿ. ಬ್ರಿಟಿಷರು ತಮಗೆ ಬೇಕಾದ ಎಲ್ಲ ಸಂಪನ್ಮೂಲ ಗಳನ್ನು ಹೊರಗಿನಿಂದ ತರದೇ, ಭಾರತದಲ್ಲಿಯೇ ದೊರಕಿಸುವ ಪ್ರಯತ್ನ ಮಾಡಿ ಅತ್ಯಂತ ಯಶಸ್ಸನ್ನು ಕಂಡರು. ಬಂಡವಾಳಶಾಹಿ ಅಭಿವೃದ್ಧಿಗಾಗಿ ಅಗತ್ಯವಾದ ಬಂಡವಾಳ ಹುಡುಕಲು ಅನ್ಯರಾಷ್ಟ್ರಗಳನ್ನು ಲೂಟಿ ಮಾಡುವ ವಿಚಾರ ಅವರದಾಗಿತ್ತು. ಇದಕ್ಕೆ ಬಲಿಯಾದ ದೇಶವೆಂದರೆ ಭಾರತ. ಭಾರತದ

ರಾಜಕೀಯ ಅನೈಕ್ಯತೆ ಮತ್ತು ಸಾಮಾಜಿಕ ಭಿನ್ನತೆಗಳು ಬ್ರಿಟಿಷ್ ಪ್ರಭುತ್ವ ಯಶಸ್ವಿಯಾಗಲು ಕಾರಣವಾದವು. ಮತ್ತೊಂದು ಪ್ರಮುಖವಾದ ಅಂಶವೆಂದರೆ, ಭಾರತದ ಬಹುಸಂಖ್ಯಾತ ಕೆಳವರ್ಗದ ಜನತೆಯ ಸ್ಥಿತಿಗತಿಗಳು ಬ್ರಿಟಿಷರ ಯಶಸ್ಸಿಗೆ ಕಾರಣವಾಗಿರಬಹುದು.

ವಸಾಹತು ನೀತಿ ಎಂದರೆ ಒಂದು ಪ್ರಬಲ ರಾಷ್ಟ್ರವು ಇತರ ರಾಷ್ಟ್ರಗಳನ್ನು ತನ್ನ ಸ್ವಾಮ್ಯಕ್ಕೆ ಒಳಪಡಿಸಿಕೊಂಡು, ತನ್ನ ಹಿತಾಸಕ್ತಿಗೆ ಬಳಸಿಕೊಳ್ಳುವ ಒಂದು ಪದ್ಧತಿ ಆಗಿದೆ ಹಾಗೂ ಇದು ಬಲ ಪ್ರಯೋಗದ ಮೂಲಕವೇ ತನ್ನ ಅಂಕಿತದಲ್ಲಿ ಇಟ್ಟುಕೊಳ್ಳುತ್ತದೆ. ಬ್ರಿಟಿಷರ ಈ ವಸಾಹತು ನೀತಿಯೇ, ದೇಶಿಯ ಮಟ್ಟದಲ್ಲಿ, ಪ್ರಾದೇಶಿಕ ಮಟ್ಟದಲ್ಲಿ ಮತ್ತು ವೈಯಕ್ತಿಕವಾಗಿ ಬ್ರಿಟಿಷರ ವಿರುದ್ಧ ಹೋರಾಡುವಲ್ಲಿ ಹಾಗೂ ಜಾಗೃತಿಯನ್ನು ಮೂಡಿಸುವಲ್ಲಿ ಪ್ರಮುಖ ಪಾತ್ರ ವಹಿಸಿತು. ೧೯ ಮತ್ತು ೨೦ನೇ ಶತಮಾನದ ಕೊನೆಯ ವೇಳೆಗೆ ಭಾರತವು ಒಂದು ವ್ಯವಸ್ಥಿತವಾದ ಬ್ರಿಟಿಷರ ವಸಾಹತುವಾಗಿ ಪರಿವರ್ತನೆಗೊಂಡಿತು. ಅದು ಬ್ರಿಟಿಷ್ ಉತ್ಪನ್ನ ವಸ್ತುಗಳಿಗೆ ಪ್ರಮುಖವಾದ ಮಾರುಕಟ್ಟೆಯಾಗಿತ್ತು ಮತ್ತು ಬ್ರಿಟಿಷ್ ಬಂಡವಾಳವನ್ನು ಹೂಡಲು ಮುಖ್ಯವಾದ ಒಂದು ಕ್ಷೇತ್ರವಾಗಿತ್ತು. ಬ್ರಿಟಿಷ್ ಪ್ರಭುತ್ವದ ಯೋಜನೆಗಳಿಗಾಗಿ ಇಲ್ಲಿನ ಕೃಷಿಗೆ ವಿಪರೀತವಾಗಿ ತೆರಿಗೆ ಹಾಕಲಾಗುತ್ತಿತ್ತು. ಸಾರಿಗೆ ವ್ಯವಸ್ಥೆ, ಗಣಿಗಾರಿಕೆ, ವಿದೇಶಿ ವ್ಯಾಪಾರ, ಸಮುದ್ರ ವ್ಯಾಪಾರ - ಹೀಗೆ ಎಲ್ಲವೂ ವಿದೇಶಿ ನಿಯಂತ್ರಣಕ್ಕೆ ಒಳಪಟ್ಟಿದ್ದವು. ಸಾವಿರಾರು ಸಂಖ್ಯೆಯ ಮಧ್ಯಮವರ್ಗದ ಇಂಗ್ಲಿಷ್ ಜನರಿಗೆ ಭಾರತವು ಉದ್ಯೋಗವನ್ನು ಒದಗಿಸಿತ್ತು. ಇಂಗ್ಲಿಷ್ ಅಧಿಕಾರಿಗಳ ವೇತನಗಳನ್ನು ಕೊಡುವುದಕ್ಕಾಗಿ ಕಂಪನಿಯ ಒಟ್ಟು ವರಮಾನದ ಸುಮಾರು ೧/೩ ಭಾಗ ವೆಚ್ಚವಾಗುತ್ತಿತ್ತು. ಭಾರತವು ಬ್ರಿಟಿಷರ ನಿರಂತರ ಶೋಷಣೆಯ ಫಲವಾಗಿ ಹಿಂದುಳಿದ ವಸಾಹತು ನಾಡಾಗಿ ಪರಿವರ್ತಿತ ವಾಗುತ್ತಿತ್ತು. ಇದರಿಂದಾಗಿ ಅನಭಿವೃದ್ಧಿ ಒಂದೇ ಸಮನೆ ಹೆಚ್ಚಾಗುತ್ತಲೇ ಹೋಯಿತು.

ಆದರೆ, ಬ್ರಿಟಿಷ್ ಪ್ರಭುತ್ವಕ್ಕೆ ಎದುರಾಗಿ, ಶಕ್ತಿಯುತವಾದ ರಾಷ್ಟ್ರೀಯ ಹೋರಾಟವು, ೧೯ನೇ ಶತಮಾನದ ಉತ್ತರಾರ್ಧ ಹಾಗೂ ೨೦ನೇ ಶತಮಾನದ ಪೂರ್ವಾರ್ಧಗಳಲ್ಲಿ ನಡೆಯಿತು. ವಿದೇಶಿಯರ ಆಡಳಿತದ ನೀತಿ ಮತ್ತು ಸ್ವರೂಪ ಹಾಗೂ ಅವರ ಜೊತೆ ಉಂಟಾದ ಒಡನಾಟದಿಂದಾಗಿ ಭಾರತೀಯರು ತಮ್ಮನ್ನು ತಾವೇ ಚಿಂತನೆಗೆ ಒಳಪಡಿಸಿಕೊಂಡರು. ಇದರ ಫಲವೇ ೧೮೫೭ರ ದಂಗೆ ಅಥವಾ ಸ್ವಾತಂತ್ರ ಸಂಗ್ರಾಮ. ಈ ಹೋರಾಟಕ್ಕೆ, ಬ್ರಿಟಿಷರ ವಸಾಹತುನೀತಿ, ಆರ್ಥಿಕವಾಗಿ ಭಾರತೀಯರ ಶೋಷಣೆ, ಸಾಮಾಜಿಕ ಮತ್ತು ಧಾರ್ಮಿಕ ನೀತಿಗಳು, ಸೈನಿಕರ ನಡುವೆ ತಾರತಮ್ಯ ಧೋರಣೆ. ಇಂತಹ ಆಕ್ರಮಣ ನೀತಿಗಳು ಭಾರತೀಯರಲ್ಲಿ ಜಾಗೃತಿಯನ್ನುಂಟು ಮಾಡಲು ಕಾರಣವಾದವು. ಸುಮಾರು ೨೦೦ ವರ್ಷಗಳ ದೀರ್ಘವಾದ ಬ್ರಿಟಿಷ್ ಆಡಳಿತವನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ, ಆರ್ಥಿಕ ಮತ್ತು ರಾಜಕೀಯ ಅಂಶಗಳೇ ಪ್ರಬಲವಾಗಿ ಕಾಣುತ್ತವೆ. ಆರ್ಥಿಕವಾಗಿ ಅಪ್ರಬಲರಾದ ಜನತೆ, ತಮ್ಮ ನಾಡಲ್ಲೇ ಇತರರು, ಆರ್ಥಿಕ ಪ್ರಾಬಲ್ಯವನ್ನು ಮೆರೆಯುವುದನ್ನು ಕಂಡು ಸುಮ್ಮನಿರದಾದರು. ಈ ದೃಷ್ಟಿಯಿಂದ ೧೮೫೭ರ ಘಟನೆಯು ರಾಷ್ಟ್ರೀಯ ಸ್ವರೂಪವನ್ನು ಪಡೆದಿತ್ತು ಎಂಬ ನಿರ್ಣಯಕ್ಕೆ ಈ ಸಂಶೋಧನೆಯಲ್ಲಿ ಬರಲಾಗಿದೆ.

ಬ್ರಿಟಿಷರ ವಿರುದ್ಧದ ಹೋರಾಟ ಒಬ್ಬ ವ್ಯಕ್ತಿಯದಾಗಿರಲಿಲ್ಲ ಅಥವಾ ಒಂದು ಸಣ್ಣ ಕಾರಣ ದಿಂದಾಗಿರಲಿಲ್ಲ ಅಥವಾ ಯಾವುದೋ ಒಂದು ರಾಜ್ಯ, ಸಂಸ್ಥಾನದ್ದಾಗಿರಲಿಲ್ಲ. ಅದು ಆಳರಸರು,

ಸಂಸ್ಥಾನಿಕರು, ರೈತರು, ಸೈನಿಕರು, ಸಾಮಾನ್ಯ ಜನರು ಮಾಡಿದ ಸಾಮೂಹಿಕ ಹೋರಾಟವಾಗಿತ್ತು. ಹಾಗಾಗಿ ೧೮೫೭ರ ಘಟನೆಯು ರಾಷ್ಟ್ರೀಯ ಸ್ವರೂಪವನ್ನು ಹೊಂದಿದ್ದಿತು ಎಂಬುದರಲ್ಲಿ ಸಂಶಯವೇ ಇಲ್ಲ. ಯಾವುದೇ ಒಂದು ರಾಷ್ಟ್ರದ ಶಾಂತಿ ಮತ್ತು ನೆಮ್ಮದಿಗಳು, ಆ ದೇಶದ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಮೇಲೆ ಅವಲಂಬಿತವಾಗಿರುತ್ತವೆ. ಹೀಗಾಗಿ ಬ್ರಿಟಿಷರ ವಸಾಹತು ನೀತಿಯೇ ಭಾರತೀಯರನ್ನು ಜಾಗೃತಗೊಳಿಸುವಲ್ಲಿ ಕಾರಣವಾಯಿತು ಎಂಬುದನ್ನು ಸಹ ಈ ಸಂಶೋಧನೆಯಲ್ಲಿ ದೃಢಪಡಿಸಲಾಗಿದೆ.

ಹೀಗಾಗಿ ಬ್ರಿಟಿಷ್ ನೀತಿಯ ವಿರುದ್ಧ ಅನೇಕ ದೇಶೀಯ ಸಂಸ್ಥಾನಿಕರು, ಆಳರಸರು ಮತ್ತು ಬ್ರಿಟಿಷ್ ಪ್ರಭುತ್ವದಡಿ ಕೆಲಸ ನಿರ್ವಹಿಸುತ್ತಿದ್ದ ಸಾಮಾನ್ಯರು - ಹೀಗೆ ವಿವಿಧ ವರ್ಗದವರು ಬಂಡಾಯ ವೆದ್ದರು. ಅಂಥವರಲ್ಲಿ ಮುಂಡರಗಿ ಭೀಮರಾಯ, ಹಮ್ಮಿಗಿಯ ಕೆಂಚನಗೌಡ, ಸುರಪುರದ ವೆಂಕಟಪ್ಪ ನಾಯಕ, ಹಲಗಲಿ ಬೇಡರು, ಹೀಗೆ ಹಲವಾರು ನಾಯಕರು ಕರ್ನಾಟಕದಲ್ಲಿ ಪ್ರಾದೇಶಿಕವಾಗಿ ಕಂಡು ಬರುವರು.

೧೮೫೭ರ ಹೋರಾಟದ ಸ್ವರೂಪವನ್ನು ಸಾಮ್ರಾಜ್ಯಶಾಹಿಗಳು, ರಾಷ್ಟ್ರೀಯವಾದಿಗಳು, ಮಾರ್ಕ್ಸ್ ವಾದಿಗಳು ಹಾಗೂ ಸಬಾಲ್ಟರ್ನ್ ಚಿಂತಕರು ತಮ್ಮ ತಮ್ಮ ಸೈದ್ಧಾಂತಿಕ ಚೌಕಟ್ಟಿನಲ್ಲಿಟ್ಟು ನೋಡುವ ಪ್ರಯತ್ನವನ್ನು ಮಾಡಿದರು. ಇದು ಆಯಾ ಪಂಥದ ಸೈದ್ಧಾಂತಿಕ ದೃಷ್ಟಿಕೋನಕ್ಕೆ ಸಂಬಂಧಿಸಿದ ವಿಚಾರ ವಾದರೂ, ಹೋರಾಟದ ಸ್ವರೂಪವನ್ನು ಸಮಗ್ರವಾಗಿ ಅರ್ಥೈಸಿಕೊಳ್ಳುವುದಕ್ಕೆ ಹಾಗೂ ಆಯಾ ಪಂಥಗಳು ಹೊಂದಿದ್ದ ಧೋರಣೆಗಳನ್ನು ತಿಳಿಯುವುದಕ್ಕೆ ಸಹಕಾರಿಯಾಗುತ್ತದೆ. ೧೮೫೭ರ ಹೋರಾಟವು ದೇಶದ ಒಂದಲ್ಲಾ ಒಂದು ಭಾಗದಲ್ಲಿ ನಡೆಯುತ್ತಲೇ ಇತ್ತು. ಪ್ರತಿಭಟನೆಯು ಮೂರು ಮುಖ್ಯ ರೂಪಗಳಲ್ಲಿ ವ್ಯಕ್ತವಾಗುತ್ತಿತ್ತು. ಅವುಗಳೆಂದರೆ, ಸಂಸ್ಥಾನಿಕರ, ಬುಡಕಟ್ಟುಗಳ ದಂಗೆಗಳು ಮತ್ತು ರೈತರ ಚಳುವಳಿಗಳು ಹಾಗೂ ದಂಗೆಗಳು.

ಬ್ರಿಟಿಷ್ ಪ್ರಭುತ್ವದ ಜೊತೆಗಿದ್ದೇ ಭಾರತೀಯರ ಮೇಲೆ ಆಗುತ್ತಿದ್ದ ಅನ್ಯಾಯವನ್ನು ಕಂಡ ಸ್ಥಳೀಯರು, ಪ್ರತಿಭಟನೆಯ ಹಾದಿಯನ್ನು ಹಿಡಿದರು. ಈ ಸಾಲಿನಲ್ಲಿ ಬರುವ ಹೋರಾಟಗಾರನೆಂದರೆ ಮುಂಡರಗಿ ಭೀಮರಾಯ. ೧೮೫೭ರ ಹೋರಾಟದಲ್ಲಿ ಮುಂಡರಗಿ ಭೀಮರಾಯರ ಪ್ರತಿಭಟನೆಯೂ ಸಹ ಪೌರ ಪ್ರತಿಭಟನೆಯಾಗಿತ್ತು ಎಂಬ ನಿರ್ಣಯಕ್ಕೆ ಇಲ್ಲಿ ಬರಲಾಗಿದೆ. ಬ್ರಿಟಿಷ್ ಸರಕಾರದಲ್ಲಿ ತಹಶೀಲ್ದಾರನಾಗಿದ್ದು, ಬ್ರಿಟಿಷರ ಕಂದಾಯ ನೀತಿಯನ್ನು, ಆಕ್ರಮಣ ನೀತಿಯನ್ನು, ಶೋಷಣೆಯನ್ನು ವಿರೋಧಿಸಿ, ಹೋರಾಟ ಮಾಡಿ ಹುತಾತ್ಮರಾದ ನಾಯಕ ಮುಂಡರಗಿ ಭೀಮರಾಯರಾಗಿದ್ದಾರೆ. ಭೀಮರಾಯರ ಪ್ರತಿಭಟನೆ ತೀವ್ರ ಸ್ವರೂಪದಾಗಿದ್ದು, ಕೆಲ ಕಾಲದವರೆಗೆ ಬ್ರಿಟಿಷರಿಗೆ ಸಿಂಹಸ್ವಪ್ನವಾಗಿದ್ದರು. ತನ್ನ ಭಾಗದ ಜನತೆಯ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳಿಗೆ ಸ್ಪಂದಿಸಿದ ಭೀಮರಾಯರು, ನಿಜವಾದ ಕೆಳವರ್ಗದವರ ಪರವಾಗಿ ಹೋರಾಡಿದ್ದರಿಂದ ಈ ಭಾಗದ ರಾಷ್ಟ್ರನಾಯಕರಾಗಿ ಕಂಡು ಬರುತ್ತಾರೆ. ಅವರಿಗೆ ಅಧಿಕಾರದ ಆಸೆ ಇದ್ದಿದ್ದರೆ ತನ್ನ ತಹಶೀಲ್ದಾರ ಹುದ್ದೆಯಲ್ಲೇ ಮುಂದುವರಿದು, ಆರಾಮವಾಗಿರಬಹುದಾಗಿತ್ತು. ಆದರೆ ಅವರಿಗೆ ಜನತೆಯ ನೋವು-ನಲಿವುಗಳ ಸ್ಪಂದನೆ ಮುಖ್ಯವಾಗಿತ್ತು.

ಹೀಗಾಗಿ ತನ್ನ ಪ್ರಾಣದ ಹಂಗು ತೊರೆದು, ಒಂದು ವ್ಯವಸ್ಥಿತವಾದ ಬ್ರಿಟಿಷ್ ವಿರೋಧಿ ನಿಲುವನ್ನು ತಾಳಿ, ಬಂಡೆದ್ದು ಮಾಡಿದ ಪ್ರಯತ್ನ ಅತ್ಯಂತ ಪ್ರಮುಖವಾದುದಾಗಿದೆ.

ಇಲ್ಲಿ 'ರಾಯ್' ಮತ್ತು 'ರಾವ್'ಗಳ ಶಬ್ದಾರ್ಥದ ಹೊಸ ಕಲ್ಪನೆಗೆ ನಿರ್ದಿಷ್ಟ ರೂಪವನ್ನು ಹುಡುಕಲಾಗಿದೆ. ಭೀಮರಾಯರ ವಂಶಸ್ಥರಾದ ವೆಂಕಟರಾವ್ ಅವರ ಹೇಳಿಕೆಯನ್ನು ದಾಖಲಿಸಿ, 'ರಾಯ' ಎಂಬುದು ಒಂದು ಜಾತ್ಯಾತೀತ ಮತ್ತು ಜನನಾಯಕತ್ವದ ಲಕ್ಷಣವನ್ನು ಒಳಗೊಂಡಿದೆ. 'ರಾವ್' ಎಂಬುದು ವೈದಿಕತ್ವವನ್ನು ಒಳಗೊಂಡಿದೆ. ಹೀಗಾಗಿ ಭೀಮರಾವ್ ಎಂಬುದು ವಂಶದ ಆದಿಯಿಂದ ಬಂದಿದ್ದರೂ, ಬ್ರಿಟಿಷ್ ನೀತಿಯನ್ನು ಪ್ರಬಲವಾಗಿ ಖಂಡಿಸುವ ರೀತಿಯನ್ನು ನೋಡಿದಾಗ ಮುಂಡರಗಿ ಭೀಮರಾಯ ಎಂಬುದು ಒಂದು ಜನಪರ ನಿಲುವಾಗಿದೆ. ಹೀಗಾಗಿ ಪ್ರಸ್ತುತ ಸಂಶೋಧನೆಯಲ್ಲಿ ಮುಂಡರಗಿ ಭೀಮರಾಯ ಎಂಬುದು ಜನಪರ ಎಂಬ ಅರ್ಥವನ್ನು ಸ್ಪಷ್ಟವಾಗಿ ಸೂಚಿಸುತ್ತದೆ.

ಮುಂಡರಗಿ ಭೀಮರಾಯರ ವಂಶಸ್ಥರನ್ನು ಮತ್ತು ಭೀಮರಾಯರ ಕುರಿತು ಅಭ್ಯಾಸ ಮಾಡಿದ ಲೇಖಕರನ್ನು ಸಂದರ್ಶಿಸಲಾಗಿ, ಭೀಮರಾಯರ ನಿಜ ಸ್ವರೂಪದ, ಭಾವಚಿತ್ರ ಲಭ್ಯವಿಲ್ಲವೆಂದು ತಿಳಿದು ಬಂದಿತು. ಆದರೆ ಕೆಲವೊಂದು ಸರಕಾರಿ ಪಠ್ಯಪುಸ್ತಕದಲ್ಲಿ ಮತ್ತು ಕಾಲೇಜು ಹಂತದ ಪುಸ್ತಕದಲ್ಲಿ ಭೀಮರಾಯರ ಭಾವಚಿತ್ರವನ್ನು ಮುದ್ರಿಸಲಾಗಿದೆ. ಆದರೆ ಇದು ವಾಸ್ತವವಾಗಿರಲಾರದು. ಬದಲಾಗಿ ಭೀಮರಾಯರ ವಂಶಸ್ಥರ ಮನೆಯಲ್ಲಿ ಇರುವ ಇತ್ತೀಚಿನ ಪೀಳಿಗೆಯ ಭಾವಚಿತ್ರಗಳನ್ನೇ ಸಂಗ್ರಹಿಸಿ ಭೀಮರಾಯರು ಹೀಗಿದ್ದಿರಬಹುದೆಂಬುದನ್ನು ಊಹಿಸಿ, ಭಾವಚಿತ್ರ ರೂಪಿಸುವ ಪ್ರಯತ್ನ ಮಾಡಿರಬಹುದೆನಿಸುತ್ತದೆ. ನಮ್ಮ ಸಂಶೋಧನೆಯ ಪ್ರಕಾರ ಮತ್ತು ವಂಶಸ್ಥರ ಹೇಳಿಕೆಯ ಪ್ರಕಾರ, ಅವರ ಮೂಲ ಭಾವಚಿತ್ರಗಳು ಇಲ್ಲ ಎಂಬುದನ್ನು ಸ್ಪಷ್ಟಪಡಿಸುವ ಪ್ರಯತ್ನ ಮಾಡಲಾಗಿದೆ. ಹಾಗೆಯೇ ಭೀಮರಾಯರ ಜನ್ಮಸ್ಥಳ ಮುಂಡರಗಿ ಬಳಿಯ ಬೆಣ್ಣೆಹಳ್ಳಿ ಎಂಬುದನ್ನು ದೃಢಪಡಿಸಲಾಗಿದೆ.

ಭೀಮರಾಯರ ಜನ್ಮಸ್ಥಳದಲ್ಲಿ ಅವರ ಮನೆಯಾಗಲಿ ಅಥವಾ ಇತರ ಯಾವುದೇ ಸ್ಥಿರ ಆಸ್ತಿಗಳಾಗಲಿ ಇಲ್ಲ. ಏಕೆಂದರೆ ಭೀಮರಾಯರನ್ನು ಸೆರೆ ಹಿಡಿಯುವ ಸಲುವಾಗಿ ಭೀಮರಾಯರ ಹೆಂಡತಿ ಮತ್ತು ಮಕ್ಕಳನ್ನು ಬಂಧಿಸಿ, ಕೊಪ್ಪಳ ಕೋಟೆಗೆ ಕರೆದೊಯ್ದು ಬ್ರಿಟಿಷರು ಇತ್ತ ಮುಂಡರಗಿ ಭೀಮರಾಯರ ವಾಸಸ್ಥಳವಾದ ಬೆಣ್ಣೆಹಳ್ಳಿಯ ಮನೆ ಮತ್ತು ಇತರ ಕಟ್ಟಡಗಳಿಗೆ ಡೈನಾಮೈಟ್ ಇಟ್ಟು ಸ್ಫೋಟಿಸಿದರೆಂಬ ವಂಶಜರ ಹೇಳಿಕೆಯನ್ನು ಇಲ್ಲಿ ದಾಖಲಿಸಲಾಗಿದೆ. ಹೀಗಾಗಿ ಅವರ ಯಾವುದೇ ಕುರುಹುಗಳು ಇಂದು ಲಭ್ಯವಿಲ್ಲ.

ಮೂಲತಃ ಮುಂಡರಗಿ ಭೀಮರಾಯರ ತಂದೆಯವರಾದ ರಂಗರಾಯರು, ಬ್ರಿಟಿಷ್ ಅಧಿಕಾರಿ ಲಾರ್ಡ್ ಮಿಂಟೋ ಅವರೊಂದಿಗೆ ಒಳ್ಳೆಯ ಸ್ನೇಹ ಮತ್ತು ವಿಶ್ವಾಸವನ್ನು ಹೊಂದಿದ್ದರು. ಹಾಗಾಗಿಯೇ ಮಿಂಟೋ ಅವರು ಭೀಮರಾಯರನ್ನು ಮದ್ರಾಸ್‌ಗೆ ಕರೆದೊಯ್ದು ಉತ್ತಮ ಶಿಕ್ಷಣವನ್ನು ಕೊಡಿಸಿದರೆಂಬ ವಿಷಯವು ತಿಳಿದು ಬರುತ್ತದೆ.

ಕೆಲವೊಂದು ಮೌಖಿಕ ಹೇಳಿಕೆಗಳು ಮತ್ತು ಲಾವಣಿಗಳಲ್ಲಿ ಉಲ್ಲೇಖವಾದಂತೆ, ಭೀಮರಾಯರಲ್ಲಿ ಉಂಟಾದ ರಾಷ್ಟ್ರೀಯ ಪ್ರಜ್ಞೆಯು ಬ್ರಿಟಿಷರ ಸೇವೆಯಲ್ಲಿ ಮುಂದುವರಿಯುವುದಕ್ಕಿಂತ ಬಿಡುವುದೇ ಒಳ್ಳೆಯದೆಂದು ಸ್ವ-ಇಚ್ಛೆಯಿಂದ ಪದವಿಯನ್ನು ತ್ಯಜಿಸಿದ್ದರು ಎಂದು ತಿಳಿದು ಬರುತ್ತದೆ.

ಮುಂಡರಗಿ ಭೀಮರಾಯರ ರಾಜಕೀಯ ಚಾಣಾಕ್ಷತೆ ಯಾವ ರೀತಿಯದ್ದಾಗಿತ್ತು ಎಂಬುದನ್ನು ಅರ್ಥೈಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಆದರೂ ಹಮ್ಮಿಗಿ ಕೆಂಚನಗೌಡರ ಜೊತೆ, ಸುರಪುರದ ವೆಂಕಟಪ್ಪ ನಾಯಕನ ಜೊತೆ ಮತ್ತು ಇತರ ಸ್ಥಳೀಯ ನಾಯಕರ ಜೊತೆ ಅವರು ಹೊಂದಿದ್ದ ಸಂಬಂಧಗಳ ಸಮಗ್ರವಾದ ಅಧ್ಯಯನ ಮಾಡಬೇಕಾಗಿದೆ. ಇಲ್ಲಿಯವರೆಗೆ ಪ್ರಕಟಿಸಲಾಗಿರುವ ದಾಖಲೆಗಳಲ್ಲಿ, ಹಮ್ಮಿಗಿಯ ಕೆಂಚನಗೌಡರು ಮತ್ತು ಸುರಪುರದ ವೆಂಕಟಪ್ಪನಾಯಕರೊಂದಿಗಿನ ಸಂಬಂಧವನ್ನು ಮಾತ್ರ ಕಾಣಲಾಗುತ್ತಿದೆ. ಆದರೆ ಪ್ರಾದೇಶಿಕವಾಗಿ ಇವರ ಸಂಘಟನೆ, ಆರ್ಥಿಕ ಸ್ಥಿತಿ, ಪ್ರಾದೇಶಿಕ ಜನತೆಯ ಒಲವು, ಪ್ರಾದೇಶಿಕ ನಾಯಕರುಗಳ ಸಂಬಂಧಗಳ ಬಗ್ಗೆ ಇನ್ನೂ ಹೆಚ್ಚಿನ ಮಾಹಿತಿಯನ್ನು ಸಂಗ್ರಹಿಸುವುದು ಅವಶ್ಯವಾಗಿದೆ.

ಲಾವಣಿಗಳಲ್ಲಿ ಮುಂಡರಗಿ ಭೀಮರಾಯರನ್ನು ಚಿತ್ರಿಸಿರುವುದನ್ನು ನೋಡಿದರೆ ಅವರು ಅಂದಿನ ಪ್ರತಿಯೊಬ್ಬ ಸಾಮಾನ್ಯ ಜನತೆಯೊಡನೆ ಅತ್ಯಂತ ನಿಕಟ ಸಂಬಂಧವನ್ನು ಹೊಂದಿದ್ದರು ಎಂಬುದನ್ನು ದೃಢವಾಗಿ ಹೇಳಬಹುದು. ಲಾವಣಿ ಎಂಬುದು ಸಾಮಾನ್ಯ ಜನತೆಯ ಒಡಲಾಳದಿಂದ ಬಂದ ಒಂದು ಸಾಹಿತ್ಯದ ಶೈಲಿಯಾಗಿದೆ. ಹೀಗಾಗಿ ಜನಪದಶೈಲಿ ಸಾಮಾನ್ಯವಾಗಿ ಮಿಥ್ಯವನ್ನು ಹೊಂದಿರುವುದಿಲ್ಲ. ಜನರಿಂದ ಜನರಿಗೆ, ಮೌಖಿಕವಾಗಿ ಸಾಗುವ ಸಾಹಿತ್ಯವು ವಾಸ್ತವ ಇತಿಹಾಸದ ಚಿತ್ರಣವನ್ನೇ ನೀಡುತ್ತದೆ. ಹೀಗಾಗಿ ಮುಂಡರಗಿ ಭೀಮರಾಯರ ಕುರಿತಾಗಿ ಅನೇಕ ಲೇಖಕರು ತಮ್ಮ ಗ್ರಂಥಗಳಲ್ಲಿ ಪ್ರಕಟಿಸಿರುವ ಮಾಹಿತಿಯಂತೆ, ಮುಂಡರಗಿ ಭೀಮರಾಯರು ಅತ್ಯಂತ ಜನಪರ ನಾಯಕರಾಗಿದ್ದರೆಂಬುದನ್ನು ಸಾಬೀತು ಪಡಿಸುತ್ತದೆ. ಆದರೆ ಇಂದು ಲಾವಣಿ ಸಾಹಿತ್ಯ ಅವಸಾನದ ಅಂಚಿನಲ್ಲಿರುವಾಗ, ಲಭ್ಯವಿರುವ ಲಾವಣಿಗಳ ಜೊತೆಗೇನ್ನೂ ಹೆಚ್ಚಿನ ಲಾವಣಿಗಳಿಗಾಗಿ ಹುಡುಕುವ ಪ್ರಯತ್ನ ಮಾಡಲಾಯಿತಾದರೂ ಯಾವುದೇ ಹೊಸ ಲಾವಣಿಗಳು ಲಭ್ಯವಾಗಲಿಲ್ಲ. ಭೀಮರಾಯರಂತಹ ಸ್ಥಳೀಯ ನಾಯಕರ ಅಧ್ಯಯನ ಕೈಗೊಳ್ಳುವಾಗ ಮೌಖಿಕ ಆಕರಗಳು ಕಟ್ಟಿಕೊಡುವ ಚರಿತ್ರೆ, ಚರಿತ್ರೆಕಾರರಿಗೆ ಅತ್ಯಂತ ಮಹತ್ವದ್ದಾಗಿರುತ್ತದೆ.

೧೮೫೭ರ ಹೋರಾಟದ ಹಿನ್ನೆಲೆಯನ್ನು ಹಾಗೂ ಕಾರಣಗಳನ್ನು ನೋಡಿದಾಗ, ಹೋರಾಟದಲ್ಲಿ ಪಾಲ್ಗೊಂಡ ನಾಯಕರು, ಮತ್ತಿತರರು, ದತ್ತಕದ ವಿಷಯ, ಶಸ್ತ್ರಾಸ್ತ್ರ ಕಾಯ್ದೆ, ಪಿಂಚಣಿ, ಬಿರುದು, ಅಧಿಕಾರ ಸ್ಥಾನಮಾನಗಳು ಹಾಗೂ ಸೌಲಭ್ಯಗಳಿಗಾಗಿ ಪ್ರತಿಭಟಿಸಿ ಶಸ್ತ್ರಸನ್ನದ್ಧರಾಗಿ ಹೋರಾಟಕ್ಕಿಳಿದವರಾಗಿದ್ದರು. ಆದರೆ ಭೀಮರಾಯರು ಇಂತಹ ವರ್ಗಕ್ಕೆ ಸೇರಿದ ಹೋರಾಟಗಾರರಾಗಿರಲಿಲ್ಲ. ಏಕೆಂದರೆ, ಭೀಮರಾಯರು ಯಾವ ಅರಸು ಮನೆತನಕ್ಕೂ ಸೇರಿದವರಾಗಿರಲಿಲ್ಲ, ಸಂಸ್ಥಾನಿಕರು ಆಗಿರಲಿಲ್ಲ, ದತ್ತು ಸ್ವೀಕಾರ ಅಥವಾ ಬಿರುದುಗಳನ್ನು ಸರಕಾರ ಮನ್ನಿಸಬೇಕು ಎನ್ನುವ ಪರಿಸ್ಥಿತಿಯೂ ಇರಲಿಲ್ಲ. ಹೀಗಾಗಿ ಬ್ರಿಟಿಷರು ಜಾರಿಗೊಳಿಸಿದ್ದ ಈ ನೀತಿಗಳು, ಭೀಮರಾಯರು ಆಗ ಹೊಂದಿದ್ದ ಸ್ವಂತ ಸ್ಥಾನಮಾನಕ್ಕೆ ಅನ್ವಯ ಆಗುತ್ತಿರಲಿಲ್ಲ ಮತ್ತು ಅವರ ಸ್ಥಾನಮಾನಕ್ಕೆ ಯಾವುದೇ ಧಕ್ಕೆಯು ಆಗುತ್ತಿರಲಿಲ್ಲ. ಹೀಗಾಗಿ ಭೀಮರಾಯರ ವ್ಯಕ್ತಿತ್ವವನ್ನು ರೂಪಿಸುವಾಗ ಮೂರು ಹಂತಗಳಲ್ಲಿ ಅಧ್ಯಯನ ಮಾಡಬೇಕಾಗುತ್ತದೆ.

ಮೊದಲ ಹಂತದಲ್ಲಿ, ಭೀಮರಾಯರು ಬ್ರಿಟಿಷ್ ಸರಕಾರದಲ್ಲಿ ಸೇವೆಯನ್ನು ಆರಂಭಿಸಿ, ನಂತರ ರಾಜೀನಾಮೆ ನೀಡಿ, ಸೇವೆಯಿಂದ ಬಿಡುಗಡೆ ಹೊಂದಿದ ಕಾಲಮಾನದವರೆಗಿನ ಜೀವನವನ್ನು ಗಮನಿಸಿದರೆ,

ಆ ಅವಧಿಯಲ್ಲಿ ಭೀಮರಾಯರು ಬ್ರಿಟಿಷ್ ಸೇವೆಯಲ್ಲಿದ್ದ ಒಬ್ಬ ಸಾಮಾನ್ಯ ಅಧಿಕಾರಿಯಾಗಿ ಕಂಡು ಬರುತ್ತಾರೆ. ಆ ಸಮಯದಲ್ಲಿ ಅವರಲ್ಲಿ ತನ್ನ ನಾಡು, ಜನ, ದೇಶಾಭಿಮಾನ, ಸ್ವಾತಂತ್ರ್ಯ ಮತ್ತು ಬ್ರಿಟಿಷ್ ವಿರೋಧಿ ಧೋರಣೆಯಂತಹ ಯಾವುದೇ ವಿಚಾರಗಳನ್ನು ಅವರು ಮನದಾಳದಲ್ಲಿ ಹೊಂದಿರಲಿಲ್ಲ. ಬದಲಾಗಿ, ಬ್ರಿಟಿಷರ ಅಧೀನದಲ್ಲಿ, ಕರ್ತವ್ಯನಿಷ್ಠೆ ಮತ್ತು ಶ್ರದ್ಧಾಭಕ್ತಿಯುಳ್ಳ ಒಬ್ಬ ಅಧಿಕಾರಿಯಾಗಿ ಕಂಡು ಬರುತ್ತಾರೆ. ಇವರಿಗೆ ಬ್ರಿಟಿಷರ ಬಗ್ಗೆ ನಿಷ್ಠೆ ಯಾವ ಪ್ರಮಾಣದಲ್ಲಿತ್ತೆಂದರೆ, ತಮ್ಮ ನಾಡಿನ ಜನರ ಮೇಲೆ ಕಠಿಣ ಕ್ರಮಗಳನ್ನು ಕೈಗೊಳ್ಳುವುದರ ಮೂಲಕ ತೆರಿಗೆ ವಸೂಲಿ ಮಾಡಿ, ಬ್ರಿಟಿಷರ ವಿಶ್ವಾಸಕ್ಕೆ ಪಾತ್ರರಾಗಿದ್ದರು. ಹಾಗಾಗಿ ಈ ಹಂತದಲ್ಲಿ ಭೀಮರಾಯರು ಒಬ್ಬ ಸಾಮಾನ್ಯ ವ್ಯಕ್ತಿಯಾಗಿ, ಬ್ರಿಟಿಷ್ ಸೇವಕರಾಗಿ ಕಂಡು ಬರುತ್ತಾರೆಯೇ ಹೊರತು, ಯಾವುದೇ ಹೋರಾಟದ ನಾಯಕರಾಗಿ ಅಥವಾ ಬಂಡಾಯಗಾರರಾಗಿ ಹಾಗೂ ಸ್ವಾತಂತ್ರ್ಯ ಹೋರಾಟಗಾರರಾಗಿ ಕಂಡು ಬರುವುದಿಲ್ಲ.

ಎರಡನೆಯ ಹಂತದಲ್ಲಿ ಭೀಮರಾಯರು ಬ್ರಿಟಿಷ್ ಸೇವೆಗೆ ರಾಜೀನಾಮೆ ನೀಡಿದ ಕಾರಣ ಮತ್ತು ಬಂಡಾಯಗಾರರಾಗಿ, ಬ್ರಿಟಿಷ್ ವಿರೋಧಿ ನೀತಿ ತಾಳಲು ಕಾರಣ ಮತ್ತು ಸಂದರ್ಭಗಳನ್ನು ವಿಶ್ಲೇಷಿಸ ಬೇಕಾಗುತ್ತದೆ. ಭೀಮರಾಯರು ಬ್ರಿಟಿಷರ ಸೇವೆಯಲ್ಲಿದ್ದಾಗ ಬ್ರಿಟಿಷರ ಆಕ್ರಮಣ, ದೌರ್ಜನ್ಯ ಹಾಗೂ ಶೋಷಣಾ ನೀತಿಗಳನ್ನು ಗಮನಿಸುತ್ತಾ ಬಂದ ಇವರಿಗೆ ಬ್ರಿಟಿಷರ ನಿಜವಾದ ಉದ್ದೇಶ ಅರಿವಾಗಿರಬೇಕು. ಹಾಗೆಯೇ ಭೀಮರಾಯರು ಮುಂಡರಗಿ ಪ್ರದೇಶದ ತಹಶೀಲ್ದಾರರಾಗಿ ಸೇವೆ ಸಲ್ಲಿಸುವಾಗ, ಬ್ರಿಟಿಷರ ಆಜ್ಞೆಯಂತೆ, ಕಠಿಣ ಕ್ರಮಗಳ ಮೂಲಕ ಕಂದಾಯ ವಸೂಲಿ ಕೈಗೊಂಡಾಗ, ತನ್ನ ನಾಡಿನ ರೈತರ ಸಂಕಷ್ಟಗಳು, ನೋವುಗಳು, ಟೀಕೆಗಳು ಅವರ ಮನಸ್ಸಿನ ಮೇಲೆ ಪರಿಣಾಮ ಬೀರಿರಬಹುದು. ಇದೇ ಸಂದರ್ಭದಲ್ಲಿ ವಿವಿಧ ಪ್ರದೇಶಗಳ, ಅರಸರು, ನಾಯಕರು, ಸಂಸ್ಥಾನಿಕರು, ರೈತರು, ಸಾಮಾನ್ಯರು, ಬ್ರಿಟಿಷ್‌ರ ವಿರುದ್ಧ ತಾಳುತ್ತಿರುವ ವಿರೋಧಿ ಧೋರಣೆ ಮತ್ತು ಪ್ರತಿಭಟನೆಗಳು ಇವರ ಗಮನಕ್ಕೆ ಬಂದು, ಆ ಅಂಶಗಳು ಇವರನ್ನು ಬ್ರಿಟಿಷ್ ವಿರೋಧಿ ನೀತಿ ತಾಳುವಂತೆ ಮಾಡಿರಬಹುದು.

ಮೂರನೇ ಹಂತದಲ್ಲಿ, ಭೀಮರಾಯರು ಬ್ರಿಟಿಷರ ವಿರುದ್ಧ ಬಂಡಾಯ ಸಾರಲು ಕೈಗೊಂಡ ಪೂರ್ವ ಯೋಜನೆ ಮತ್ತು ಇತರ ನಾಯಕರೊಂದಿಗೆ ಸಾಧಿಸಿದ ಸಂಪರ್ಕ, ಸಂಘಟನಾ ಚತುರತೆ, ಶಸ್ತ್ರಾಸ್ತ್ರಗಳ ಸಂಗ್ರಹಣೆ ಮುಖ್ಯವಾಗುತ್ತದೆ. ಈ ಹಂತದಲ್ಲಿ ಹೋರಾಟದ ಯೋಜನೆಗಳನ್ನು ರೂಪಿಸಿದ ಭೀಮರಾಯರಲ್ಲಿ ಬಂಡಾಯದ ನಾಯಕತ್ವ ಗುಣವನ್ನು ಗುರುತಿಸಬಹುದುದಾಗಿದೆ.

ಕರ್ನಾಟಕದ ಇತಿಹಾಸದ ಪುಟಗಳಲ್ಲಿ ಭೀಮರಾಯರು ತನ್ನದೇ ಆದ ಸ್ಥಾನವನ್ನು ಪಡೆದಿದ್ದು ಚಿರಸ್ಮರಣೀಯರೆನಿಸಿದ್ದಾರೆ. ಅವರ ಹೆಸರು ತಲೆ ತಲಾಂತರಗಳಿಂದ ಜನರ ಬಾಯಲ್ಲಿ ಹಾಗೆಯೇ ಉಳಿದುಕೊಂಡು ಬಂದಿದ್ದು, ಈ ನಾಡಿನ ಜನರ ಹೃದಯದಲ್ಲಿ ಶಾಶ್ವತವಾಗಿ ನೆಲೆಸಿದ್ದಾರೆ. ಮುಂಡರಗಿ ಪ್ರದೇಶದಲ್ಲಿ ಅವರಿಗೆ ಗೌರವ ಸೂಚಿಸಲು ಹಾಗೂ ಅವರ ಹೆಸರನ್ನು ಸ್ಮರಣೀಯಗೊಳಿಸಲು ಸ್ಥಳೀಯರು ಅನೇಕ ಕ್ರಮಗಳನ್ನು ಕೈಗೊಂಡಿದ್ದಾರೆ. ಭೀಮರಾಯರು ಹುತಾತ್ಮರಾದ ನೂರನೇ ವರ್ಷದ ಸ್ಮರಣೆಗಾಗಿ ಕೊಪ್ಪಳದ ಜನರು ಅಲ್ಲಿನ ಡಿ.ಸಿ. ವೃತ್ತದಲ್ಲಿ ಸ್ತಂಭವನ್ನು ನಿರ್ಮಿಸಿ ತಮ್ಮ ನಾಯಕನಿಗೆ ಗೌರವ ಸೂಚಿಸಿದ್ದಾರೆ.

ಭೀಮರಾಯರ ಹೋರಾಟ, ತ್ಯಾಗ, ಬಲಿದಾನಗಳಿಂದ ಸ್ಫೂರ್ತಿ ಪಡೆದ ಮುಂಡರಗಿಯ ನಾಗರಿಕರು ಮುಂಡರಗಿ ತಾಲೂಕು ಸ್ವಾತಂತ್ರ್ಯ ಹೋರಾಟಗಾರರ ಸಂಘವನ್ನು ಸ್ಥಾಪಿಸಿಕೊಂಡು ಸಮಾಜ ಸೇವೆಯಲ್ಲಿ ತೊಡಗಿದ್ದಾರೆ. ಮುಂಡರಗಿ ಪಟ್ಟಣದಲ್ಲಿ ಒಂದು ವೃತ್ತಕ್ಕೆ ಭೀಮರಾಯರ ವೃತ್ತವೆಂದು ಹೆಸರಿಡಲಾಗಿದೆ. ಮುಂಡರಗಿಯಲ್ಲಿರುವ ಕೋಟೆಯನ್ನು ಈಗಲೂ ಭೀಮರಾಯರ ಕೋಟೆ ಎಂದೇ ಕರೆಯಲಾಗುತ್ತದೆ.

ಇದೇ ೩೧ ಜೂನ್ ೨೦೦೮ಕ್ಕೆ ಮುಂಡರಗಿ ಭೀಮರಾಯರು ಹುತಾತ್ಮರಾಗಿ ೧೫೦ ವರ್ಷಗಳು ತುಂಬುತ್ತದೆ. ಈ ಐತಿಹಾಸಿಕ ಸಂದರ್ಭದಲ್ಲಿ ಭೀಮರಾಯರ ಜೀವನ ಹಾಗೂ ಸಾಧನೆಯ ವಸ್ತುನಿಷ್ಠ ಅವಲೋಕನ ನಡೆಯಬೇಕಾಗಿದ್ದು, ಅದು ವೈಭವೀಕರಣದ ಸುಳಿಗೆ ಸಿಲುಕದಂತೆ ಎಚ್ಚರವಹಿಸಬೇಕಾದದ್ದು ಸಂಶೋಧಕರ ಜವಾಬ್ದಾರಿಯಾಗಿದೆ. ಭೀಮರಾಯರ ಹೋರಾಟದ ಹಿಂದೆ ರಾಷ್ಟ್ರೀಯ ಅಜೆಂಡಾಗಳು ಇದ್ದವಾದರೂ, ಸ್ಥಳೀಯವಾಗಿ ಅದು ರೂಪುಗೊಂಡ ಬಗೆಯನ್ನು ಸ್ಥಳೀಯ ನೆಲೆಗಟ್ಟಿನ ಹಿನ್ನೆಲೆಯಿಂದಲೇ ನೋಡಬೇಕಾಗುತ್ತದೆ.

ಈ ಹೋರಾಟದ ಪರಿಣಾಮಗಳನ್ನು ಎರಡು ಬಗೆಯಲ್ಲಿ ವಿಶ್ಲೇಷಿಸಬೇಕಾಗುತ್ತದೆ. ಈ ಹೋರಾಟದ ನಂತರ ಆದ ಸಂವಿಧಾನಾತ್ಮಕ ಬದಲಾವಣೆಯೆಂದರೆ, ೧೮೫೮ರಲ್ಲಿ ವಿಕ್ಟೋರಿಯಾ ರಾಣಿಯು ಘೋಷಣಾ ಪತ್ರವೊಂದನ್ನು ಹೊರಡಿಸಿದಳು (ಕ್ವೀನ್ಸ್ ಪ್ರೊಕ್ಲೋಮೇಶನ್ ಆ್ಯಕ್ಟ್). ಇದರ ಪ್ರಕಾರ, ಈಸ್ಟ್ ಇಂಡಿಯಾ ಕಂಪನಿಯ ಆಡಳಿತವನ್ನು ಕೊನೆಗೊಳಿಸಿ, ಭಾರತದ ಆಡಳಿತವನ್ನು ಚಕ್ರವರ್ತಿಗೆ ವರ್ಗಾಯಿಸಲಾಯಿತು. ಇನ್ನು ಮುಂದೆ ಭಾರತದ ಆಡಳಿತವು ರಾಣಿಯ ಹೆಸರಿನಲ್ಲಿಯೇ ನಡೆಯಬೇಕೆಂದು ತಿಳಿಸಿತು. ಭಾರತದಲ್ಲಿ ಸಂಗ್ರಹವಾಗುವ ಎಲ್ಲ ಆದಾಯವು ರಾಣಿಯ ಹೆಸರಿನಲ್ಲಿಯೇ ನಡೆಯಬೇಕೆಂದು ತಿಳಿಸಿತು. ಭಾರತೀಯರನ್ನು ಗೌರವದಿಂದ ನಡೆಸಿಕೊಳ್ಳಲಾಗುವುದೆಂದು ಮತ್ತು ಭಾರತೀಯರ ಆಂತರಿಕ ವಿಚಾರಗಳಲ್ಲಿ ಬ್ರಿಟನ್ ಹಸ್ತಕ್ಷೇಪ ಮಾಡುವುದಿಲ್ಲವೆಂದು, ಭಾರತೀಯರಿಗೆ ಧಾರ್ಮಿಕ ಸ್ವಾತಂತ್ರ್ಯವನ್ನು ಮತ್ತು ಬ್ರಿಟಿಷ್‌ರೊಡನೆ ಸಮಾನವಾದ ಗೌರವವನ್ನು ನೀಡುವ ಭರವಸೆ ನೀಡಲಾಯಿತು. ಹಾಗೆಯೇ ಸ್ಥಳೀಯ ರಾಜರುಗಳ ಗೌರವ ಮತ್ತು ಬಿರುದು ಭಾವಲಿಗಳನ್ನು ಮತ್ತು ಭಾರತದ ಪುರಾತನ ಸಂಪ್ರದಾಯ, ನಡವಳಿಕೆ, ಸಂಸ್ಕೃತಿಗಳನ್ನು ಗೌರವಿಸುವುದಾಗಿ ಭರವಸೆ ನೀಡಲಾಯಿತು. ಇದರಿಂದ ಈ ಹೋರಾಟ ಭಾರತದಲ್ಲಷ್ಟೇ ಅಲ್ಲದೆ ಬ್ರಿಟನ್ನಿನಲ್ಲೂ ಯಾವ ರೀತಿಯ ಪರಿಣಾಮಗಳನ್ನು ಬೀರಿತು ಎನ್ನುವುದನ್ನು ತಿಳಿಯಬಹುದಾಗಿದೆ. ಹಾಗಾಗಿ ಈ ಹೋರಾಟ ಕೇವಲ 'ದಂಗೆ'ಯಷ್ಟೇ ಆಗಿರದೆ ಅದನ್ನು ಮೀರಿತ್ತು ಎನ್ನುವುದಂತೂ ಸ್ಪಷ್ಟ.

೧೮೫೭ರ ಹೋರಾಟದಲ್ಲಿ ಇಂದಿನ ರಾಷ್ಟ್ರೀಯತೆಯ ಕಲ್ಪನೆ ಇರದಿದ್ದರೂ, ಬೇರೆ ಬೇರೆ ವರ್ಗದವರು ತಮ್ಮದೇ ಆದ ಉದ್ದೇಶ ಸಾಧನೆಗಾಗಿ ದಂಗೆಯಲ್ಲಿ ಭಾಗಿಗಳಾದರೂ, ಅವರೆಲ್ಲರೂ ಬ್ರಿಟಿಷ್ ದ್ವೇಷಿಗಳಾಗಿದ್ದು ವಿದೇಶಿ ಆಳ್ವಿಕೆಯನ್ನು ಕೊನೆಗಾಣಿಸುವ ಗುರಿಯನ್ನು, ಗುಲಾಮಗಿರಿಯ ಸಂಕೋಲೆಯನ್ನು ಕಿತ್ತೊಗೆಯುವ ಉದ್ದೇಶ ಇಟ್ಟುಕೊಂಡಿದ್ದರು. ಕೊನೆಯಲ್ಲಿ ಈ ಹೋರಾಟವು ವಿಫಲಗೊಂಡರೂ, ಇದು ಬ್ರಿಟಿಷ್ ಆಳ್ವಿಕೆಯ ವಿರುದ್ಧ ನಡೆದ ಪ್ರಪ್ರಥಮ ಜನ ಬಂಡಾಯವಾಗಿದ್ದು, ಈ ಹೋರಾಟವು ಭಾರತೀಯರಲ್ಲಿ ಆತ್ಮವಿಶ್ವಾಸವನ್ನು ಮತ್ತು ರಾಷ್ಟ್ರೀಯತೆಯನ್ನು ಜಾಗೃತಗೊಳಿಸಿ, ಭಾರತ ಎನ್ನುವ

ರಾಷ್ಟ್ರದ ಕಲ್ಪನೆಯನ್ನು ಗಟ್ಟಿಯಾಗಿಸಿತು ಹಾಗೂ ಮುಂದಿನ ದಿನಗಳಲ್ಲಿ ಭಾರತೀಯರು ರಾಷ್ಟ್ರೀಯ ಭಾವನೆಗಳನ್ನು ಬೆಳೆಸಿಕೊಂಡು, ಆಂಗ್ಲರ ವಿರುದ್ಧ ಸಂಘಟಿತರಾಗಿ ಹೋರಾಡಲು ಸಹಕಾರಿಯಾಯಿತು. ಇದು ಮುಂದಿನ ರಾಷ್ಟ್ರೀಯ ಹೋರಾಟಕ್ಕೆ ಬುನಾದಿ ಹಾಕಿತು ಹಾಗೂ ಸೋಲಲ್ಲೂ ಗೆಲುವನ್ನು ಕಂಡಿತು. ಹಾಗಾಗಿ ೧೮೫೭ರ ಹೋರಾಟದ ಫಲಿತಾಂಶವನ್ನು ಮುಂದಿನ ಗೆಲುವುಗಳಲ್ಲಿ ಕಾಣಬೇಕೇ ಹೊರತು ಹೋರಾಟದ ಅವಧಿಗಷ್ಟೇ ಸೀಮಿತಗೊಳಿಸಿ ನೋಡಲು ಸಾಧ್ಯವಾಗುವುದಿಲ್ಲ. ಹೋರಾಟವನ್ನು ಬ್ರಿಟಿಷರು ನಿಯಂತ್ರಣಕ್ಕೆ ತರುವಲ್ಲಿ ಯಶಸ್ವಿಯಾದರೂ, ಅದು ಬ್ರಿಟಿಷರಲ್ಲಿ ಆತಂಕವನ್ನು ಹಾಗೂ ಭಾರತೀಯರಲ್ಲಿ ಆತ್ಮವಿಶ್ವಾಸವನ್ನು ಮೂಡಿಸಿದ್ದಂತೂ ನಿಜ.

• • •

# ೧. ಗ್ರಂಥಋಣ


೧. ಬಿಪನ್ ಚಂದ್ರ, ಎಸ್ಸೇಸ್ ಆನ್ ಕಲೋನಿಯಾಲಿಸಂ, ಓರಿಯಂಟ್ ಲಾಂಗ್‌ಮನ್, ನ್ಯೂ ಡೆಲ್ಲಿ, ೧೯೯೯.

೨. ದೆಬ್ಬಾಸ್ ಬ್ಯಾನರ್ಜಿ, ಕಲೋನಿಯಾಲಿಸಂ ಇನ್ ಆ್ಯಕ್ಷನ್, ಓರಿಯೆಂಟ್ ಲಾಂಗ್‌ಮ್ಯಾನ್, ಹೈದ್ರಾಬಾದ್, ೧೯೯೯.

೩. ಬಿಪನ್ ಚಂದ್ರ, ನ್ಯಾಷನಾಲಿಸಂ ಅಂಡ್ ಕಲೋನಿಯಾಲಿಸಂ ಇನ್ ಮಾಡರ್ನ್ ಇಂಡಿಯ, ಓರಿಯಂಟ್ ಲಾಂಗ್‌ಮ್ಯಾನ್ ಲಿಮಿಟೆಡ್, ನ್ಯೂ ಡೆಲ್ಲಿ, ೧೯೭೯.

೪. ರಾಜ್ ಕೆ.ಎನ್. (ಸಂ), ಎಸ್ಸೇಸ್ ಆನ್ ದಿ ಕಮರ್ಷಿಲೈಜೇಶನ್ ಆಫ್ ಇಂಡಿಯನ್ ಅಗ್ರಿಕಲ್ಚರ್, ಆಕ್ಸ್‌ಫರ್ಡ್ ಯುನಿವರ್ಸಿಟಿ ಪ್ರೆಸ್, ದೆಹಲಿ, ೧೯೮೫.

೫. ಬಿಪನ್ ಚಂದ್ರ, ಅಮಲೇಶ್ ತ್ರಿಪಾಠಿ, ಬರುನ್ ಡೇ, ಫ್ರೀಡಂ ಸ್ಟ್ರಗಲ್, ನ್ಯಾಷನಲ್ ಬುಕ್ ಟ್ರಸ್ಟ್, ಹೊಸ ದೆಹಲಿ, ೧೯೭೪.

೬. ಎಡ್ವರ್ಡ್ ಥಾಮಸನ್, ಗ್ಯಾರೆಟ್ ಜಿ.ಟಿ., ಹಿಸ್ಟರಿ ಆಫ್ ಬ್ರಿಟಿಷ್ ರೂಲ್ ಇನ್ ಇಂಡಿಯ, ಸಂಪುಟ-೨, ಅಟ್ಲಾಂಟಿಕ್ ಪಬ್ಲಿಷರ್ಸ್ ಅಂಡ್ ಡಿಸ್ಟ್ರಿಬ್ಯುಟರ್ಸ್, ನ್ಯೂ ಡೆಲ್ಲಿ, ೧೯೯೯.

೭. ರಂಜಿತ್ ಗುಹಾ, ಸಬಾಲ್ಟ್ರನ್ ಸ್ಟಡೀಸ್, ಸಂಪುಟ-೧ ರಿಂದ ೬, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ನ್ಯೂ ಡೆಲ್ಲಿ, ೧೯೮೫.

೮. ಬಿಪನ್ ಚಂದ್ರ ಮತ್ತು ಇತರರು, ಇಂಡಿಯಾಸ್ ಸ್ಟ್ರಗಲ್ ಫಾರ್ ಇಂಡಿಪೆಂಡೆನ್ಸ್, ಪೆಂಗ್ವಿನ್ ಬುಕ್ಸ್, ನ್ಯೂ ಡೆಲ್ಲಿ, ೧೯೮೮.

೯. ಆಂಟೋನಿ ಗ್ರಾಂಸಿ, ಸೆಲೆಕ್ಷನ್ ಫ್ರಂ ದಿ ಪ್ರಿಸನ್ ನೋಟ್ ಬುಕ್ಸ್, ಕ್ಲಿಂಟನ್ ಹೋರೆಗಿಯಾ ಫ್ರಿನಾವೆಲ್ ಸ್ಮಿತ್, ಲಂಡನ್, ೧೯೭೧.

೧೦. ಬಿಪನ್ ಚಂದ್ರ, ಎಸ್ಸೇಸ್ ಆನ್ ಇಂಡಿಯನ್ ನ್ಯಾಷನಾಲಿಸಂ, ಹರ್-ಆನಂದ್ ಪಬ್ಲಿಕೇಶನ್ಸ್, ನ್ಯೂ ಡೆಲ್ಲಿ, ೧೯೯೩.

೧೧. ಗೋಲ್ಕರ್ ಎಸ್.ವಿ., ಜೋಷಿ ಪಿ.ಎಸ್., ಹಿಸ್ಟರಿ ಆಫ್ ಮಾಡರ್ನ್ ಇಂಡಿಯ, ಎಸ್ ಚಾಂದ್ ಅಂಡ್ ಕಂಪನಿ ಲಿಮಿಟೆಡ್ ನ್ಯೂ ಡೆಲ್ಲಿ, ೧೯೮೩.

೧೨. ಗ್ರೋವರ್ ಬಿ.ಎಲ್., ಗ್ರೋವರ್ ಎಸ್., ಎ ನ್ಯೂ ಬುಕ್ ಆನ್ ಮಾಡರ್ನ್ ಇಂಡಿಯನ್ ಹಿಸ್ಟರಿ, ಎಸ್. ಚಾಂದ್ ಅಂಡ್ ಕಂಪನಿ ಪ್ರೈ. ಲಿಮಿಟೆಡ್, ನ್ಯೂ ಡೆಲ್ಲಿ, ೧೯೮೮.

೧೩. ಮೈಸೂರು ಸ್ಟೇಟ್ ಗೆಝೆಟಿಯರ್, ಬಳ್ಳಾರಿ ಡಿಸ್ಟ್ರಿಕ್ಟ್, ಗವರ್ನ್‌ಮೆಂಟ್ ಆಫ್ ಮೈಸೂರು, ಬೆಂಗಳೂರು, ೧೯೭೨.

೧೪. ಅನಿಲ್ ಸಕ್ಸೇನಾ, ಎನ್‌ಸೈಕ್ಲೋಪಿಡೀಯಾ ಆಫ್ ಇಂಡಿಯನ್ ಹಿಸ್ಟರಿ, ವಾಲ್ಯೂಮ್-೨೪, ಅನ್‌ಮೋಲ್ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್, ನ್ಯೂ ಡೆಲ್ಲಿ, ೨೦೦೬.

೧೫. ಕೃಷ್ಣರಾವ್ ಎಂ.ವಿ., ಹಾಲಪ್ಪ ಜಿ.ಎಸ್., ಹಿಸ್ಟರಿ ಆಫ್ ಫ್ರೀಡಂ ಮೂವ್‌ಮೆಂಟ್ ಇನ್ ಕರ್ನಾಟಕ, ವಾಲ್ಯೂಮ್-೧, ದಿ ಗವರ್ನ್‌ಮೆಂಟ್ ಆಫ್ ಮೈಸೂರು, ೧೯೬೨.

೧೬. ಮೈಖೆಲ್ ಹೆಚ್. ಫಿಶರ್, ದಿ ಪೊಲಿಟಿಕ್ಸ್ ಆಫ್ ದಿ ಬ್ರಿಟಿಷ್ ಅನಕ್ಸೇಷನ್ ಆಫ್ ಇಂಡಿಯ, ಆಕ್ಸ್‌ಫರ್ಡ್ ಯುನಿವರ್ಸಿಟಿ ಪ್ರೆಸ್, ೧೯೯೯.

೧೭. ರಾಮ್ಸೇ (ಸಂ), ದಿ ಮೇಕಿಂಗ್ ಆಫ್ ಬ್ರಿಟಿಷ್ ಇಂಡಿಯ, ಮ್ಯಾಂಚೆಸ್ಟರ್ ಯುನಿವರ್ಸಿಟಿ ಪ್ರೆಸ್, ಮ್ಯೂಂಚೆಸ್ಟರ್, ೧೯೧೫.

೧೮. ಫಿಲಿಪ್ಸ್ ಸಿ.ಹೆಚ್., ದಿ ಈಸ್ಟ್ ಇಂಡಿಯ ಕಂಪನಿ, ಮ್ಯಾಂಚೆಸ್ಟರ್ ಯುನಿವರ್ಸಿಟಿ, ಮ್ಯಾಂಚೆಸ್ಟರ್, ೧೯೪೦.

೧೯. ಮುಖರ್ಜಿ, ರಾಮಕೃಷ್ಣ, ದಿ ರೈಸ್ ಅಂಡ್ ಫಾಲ್ ಆಫ್ ದಿ ಈಸ್ಟ್ ಇಂಡಿಯನ್ ಕಂಪನಿ, ನ್ಯೂಯಾರ್ಕ್, ಮಂಥ್ಲೀ ರಿವೈವ್ ಪ್ರೆಸ್, ೧೯೭೪.

೨೦. ಪ್ರಕಾಶ್ ಚಂದರ್, ಎನ್‌ಸೈಕ್ಲೋಪಿಡಿಯ ಆಫ್ ಇಂಡಿಯನ್ ಹಿಸ್ಟರಿ, ವಾಲ್ಯೂಮ್-೪, ಎ.ಪಿ.ಹೆಚ್. ಪಬ್ಲೀಷಿಂಗ್ ಕಾರ್ಪೋರೇಷನ್, ನ್ಯೂ ಡೆಲ್ಲಿ, ೧೯೯೯.

೨೧. ತಾರಾ ಚಂದ್, ಹಿಸ್ಟರಿ ಆಫ್ ದಿ ಫ್ರೀಡಂ ಮೂವ್‌ಮೆಂಟ್ ಇನ್ ಇಂಡಿಯ, ವಾಲ್ಯೂಮ್-೨, ನ್ಯೂ ಡೆಲ್ಲಿ, ೧೯೯೨.

೨೨. ಆಂಥೋನಿ ಸಲ್ಡಾನ, ಎಲೈಟ್ ಓರಲ್ ಹಿಸ್ಟರಿ, ಮ್ಯಾಥುಯಿನ್, ಲಂಡನ್, ೧೯೮೩.

೨೩. ಜಾನ್ ಶೆರೋನ್ ಡಿ ಹರ್ಟ್, ಓರಲ್ ಸೋರ್ಸಸ್ ಅಂಡ್ ಕನ್‌ಟೆಂಪರರಿ ಹಿಸ್ಟರಿ, ದಿ ಜರ್ನಲ್ ಆಫ್ ಅಮೇರಿಕನ್ ಹಿಸ್ಟರಿ, ೧೯೯೩.

೨೪. ಪೃಥ್ವಿ ಆರ್.ಕೆ., ಹಿಸ್ಟರಿ ಆಫ್ ಮಾಡರ್ನ್ ಇಂಡಿಯ, ವಾಲ್ಯೂಮ್-೩, ಎ.ಪಿ.ಎಹೆಚ್. ಪಬ್ಲಿಷಿಂಗ್ ಕಾರ್ಪೋರೇಷನ್ಸ್, ನ್ಯೂ ಡೆಲ್ಲಿ, ೨೦೦೪.

೨೫. ಪೀಟರ್ ಹೀಸ್, ಇಂಡಿಯಾಸ್ ಫ್ರೀಡಂ ಸ್ಟ್ರಗಲ್, ಆಕ್ಸ್‌ಫರ್ಡ್ ಯುನಿವರ್ಸಿಟಿ, ನ್ಯೂ ಡೆಲ್ಲಿ, ೧೯೯೮.

೨೬. ಓಂ ಪ್ರಕಾಶ್, ದಿ ನ್ಯೂ ಕೇಂಬ್ರಿಡ್ಜ್ ಹಿಸ್ಟರಿ ಆಫ್ ಇಂಡಿಯ, ಕೇಂಬ್ರಿಡ್ಜ್ ಯುನಿವರ್ಸಿಟಿ ಪ್ರೆಸ್, ಲಂಡನ್, ೧೯೯೮.

೨೭. ಜೇಮ್ಸ್ ಸಿ. ಬಯೋಜಿಯನ್, ಪೋರ್ಚುಗೀಸ್ ಟ್ರೇಡ್ ಇನ್ ಏಷ್ಯಾ, ಲಂಡನ್, ೧೯೯೩.

೨೮. ಸಂಜಯ್ ಸುಬ್ರಮಣ್ಯಂ, ದಿ ಪೊಲಿಟಿಕಲ್ ಎಕಾನಮಿ ಆಫ್ ಕಾಮರ್ಸ್, ಸೌತ್ ಇಂಡಿಯ, ಕೇಂಬ್ರಿಡ್ಜ್, ೧೯೯೦.

೨೯. ಮಾರ್ಷಲ್ ಪಿ.ಜೆ., ಪ್ರೈವೆಟ್ ಬ್ರಿಟಿಷ್ ಟ್ರೇಡ್ ಇನ್ ದಿ ಇಂಡಿಯನ್ ಓಷನ್, ಕಲ್ಕತ್ತ, ೧೯೮೭.

೩೦. ಪಮೇಲ ನೈಟಿಂಗೇಲ್, ಟ್ರೇಡ್ ಅಂಡ್ ಎಂಪೈರ್ ಇನ್ ವೆಸ್ಟ್ರನ್ ಇಂಡಿಯ, ಕೇಂಬ್ರಿಡ್ಜ್ ಯುನಿರ್ವಸಿಟಿ ಪ್ರೆಸ್, ಲಂಡನ್, ೧೯೭೦.

೩೧. ಬೇನಾಯ್ ಚೌಧರಿ, ಗ್ರೋತ್ ಆಫ್ ಕಮರ್ಷಿಶಿಯಲ್ ಅಗ್ರಿಕಲ್ಚರ್ ಇನ್ ಬೆಂಗಾಲ್, ಕಲ್ಕತ್ತ, ೧೯೬೧.

೩೨. ಕರ್ನಾಟಕ ಥ್ರೂ ದಿ ಏಜಸ್, ಲಿಟ್ರರಿ ಅಂಡ್ ಕಲ್ಚರಲ್ ಡೆವಲಪ್‌ಮೆಂಟ್ ಡಿಪಾರ್ಟಮೆಂಟ್, ಗೌರ್‍ನಮೆಂಟ್ ಆಫ್ ಮೈಸೂರು, ೧೯೬೮.

೩೩. ಕೇಯ್ ಡಬ್ಲು.ಜೆ. ದಿ ಅಡ್‌ಮಿನಿಸ್ಟ್ರೇಷನ್ ಆಫ್ ದಿ ಈಸ್ಟ್ ಇಂಡಿಯ ಕಂಪನಿ, ಲಂಡನ್, ೧೮೫೩.

೩೪. ಕಾರ್ಲ್‌ಮಾರ್ಕ್ಸ್, ನೋಟ್ಸ್ ಆನ್ ಇಂಡಿಯನ್ ಹಿಸ್ಟರಿ, ಮಾಸ್ಕೋ, ೧೯೬೦.

೩೫. ಮಾರ್ಕ್ಸ್ ಎಂಗೆಲ್ಸ್, ಸೆಲೆಕ್ಟೆಡ್ ಕರೆಸ್‌ಪಾಂಡೆನ್ಸ್, ಮಾಸ್ಕೋ, ೧೯೭೫.

೩೬. ಅಗರ್‌ವಾಲ್ ಆರ್.ಸಿ., ಕಾನ್‌ಸ್ಟ್ರೂಷನಲ್ ಡೆವಲಪ್‌ಮೆಂಟ್ ಅಂಡ್ ನ್ಯಾಷನಲ್ ಮೂವ್‌ಮೆಂಟ್ ಆಫ್ ಇಂಡಿಯ, ಎಸ್. ಚಾಂದ್ ಅಂಡ್ ಕಂಪನಿ ಲಿಮಿಟೆಡ್, ನ್ಯೂ ಡೆಲ್ಲಿ, ೧೯೯೧.

೩೭. ಮುಖರ್ಜಿ, ರಾಮಕೃಷ್ಣ., ದಿ ರೈಸ್ ಅಂಡ್ ಫಾಲ್ ಆಫ್ ದಿ ಇಂಡಿಯನ್ ಕಂಪನಿ, ಮಂಥ್ಲೀ ರೀವಿವ್ಯೂ ಪ್ರೆಸ್, ನ್ಯೂಯಾರ್ಕ್, ೧೯೭೪.

೩೮. ಪರಿಣೀತ ಬಿ.ಆರ್., ಹಿಸ್ಟರಿ ಆಫ್ ಮಾಡರ್ನ್ ಇಂಡಿಯ, ಯುನೈಟೆಡ್ ಪಬ್ಲಿಕೇಷನ್ಸ್, ಮಂಗಳೂರು, ೨೦೦೪.

೩೯. ಜಾನ್ ಕೇಯ್, ಇಂಡಿಯ ಎ ಹಿಸ್ಟರಿ, ಹಾರ್ಪರ್ ಕಾಲಿನ್ಸ್ ಪಬ್ಲಿಷರ್ಸ್, ಲಂಡನ್, ೨೦೦೦.

೪೦. ಸೈಯದ್ ಅಹಮದ್ ಖಾನ್, ಆ್ಯನ್ ಎಸ್ಸೇ ಆನ್ ದಿ ಕಾಸಸ್ಸ್ ಆಫ್ ದಿ ಇಂಡಿಯನ್ ರಿವೋಲ್ಟ್, ಕಲ್ಕತ್ತ, ೧೮೬೦.

೪೧. ಪ್ರತುಲ್ ಚಂದ್ರ ಗುಪ್ತ, ನಾನಾ ಸಾಹೇಬ್ ಅಂಡ್ ದಿ ರೈಸಿಂಗ್ ಅಟ್ ಕಾನ್ಪುರ್, ೧೯೬೩.

೪೨. ಪ್ರೇಮ್‌ಕುಮಾರ್ ಬಿ.ಪಿ., (ಅನು) ವಿನಾಯಕ ದಾಮೋದರ ಸಾವರ್ಕರ್ (ಮೂಲ), ಭಾರತ ಸ್ವಾತಂತ್ರ್ಯ ಸಂಗ್ರಾಮ-೧೮೫೭, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೭.

೪೩. ಶಾರದಾ ಕೆ. (ಅನು) ೧೮೫೭-ನಾವು ಮರೆತಿರುವ ಮಹಾಯುದ್ಧ, ದ್ರಾವಿಡ ವಿಶ್ವವಿದ್ಯಾಲಯ, ಕುಪ್ಪಂ, ೨೦೦೮.

೪೪. ನರಸಿಂಹಮೂರ್ತಿ ಎ.ವಿ., (ಸಂ), ಸ್ವಾತಂತ್ರ್ಯ ಸಂಗ್ರಾಮ, ಭಾಗ-೨, ಸಂಪುಟ-೨೪, ಭಾರತೀಯ ವಿದ್ಯಾಭವನ, ಬೆಂಗಳೂರು, ೧೯೯೮.

೪೫. ಭವಾನ್ ಸಿಂಹರಾಣ, ಝಾಂಸಿ ಕೀ ರಾಣಿ ಲಕ್ಷ್ಮೀಭಾಯಿ, ಡೈಮೆಂಡ್ ಪಾಕೆಟ್ ಬುಕ್ಸ್, ದಿಲ್ಲಿ, ೧೯೯೭.

೪೬. ಚಂದ್ರಶೇಖರ್ ಎಸ್., ದಕ್ಷಿಣ ಭಾರತ ವಸಾಹತುಶಾಹಿ ರಾಷ್ಟ್ರೀಯತೆ ಮತ್ತು ಸಂಘರ್ಷ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೦.

೪೭. ಪಾರ್ಥಸಾರಥಿ ಕೆ.ಎಸ್., ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೭.

೪೮. ದಸ್ತಗೀರ್ ಎಂ., **ರಾಷ್ಟ್ರೀಯ ಸ್ವಾತಂತ್ರ್ಯ ಸಂಗ್ರಾಮ**, ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು, ೧೯೯೭.

೪೯. ಮಾರ್ಕ್ಸ್, ಎಂಗೆಲ್ಸ್, **ಪ್ರಥಮ ಭಾರತೀಯ ಸ್ವಾತಂತ್ರ್ಯ ಸಂಗ್ರಾಮ**, ಪ್ರಗತಿ ಪ್ರಕಾಶನ, ಸೋವಿಯತ್ ಒಕ್ಕೂಟ, ಮಾಸ್ಕೋ, ೧೯೮೦.

೫೦. ಅಂತೋನವ ಕೆ., ಕತೋವ್‌ಸ್ಕಿ ಜಿ., **ಭಾರತದ ಇತಿಹಾಸ**, ಪ್ರಗತಿ ಪ್ರಕಾಶನ, ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು, ೧೯೮೮.

೫೧. ಅನಂತರಾಮಯ್ಯ ಆರ್.ಎಲ್., **ಸ್ವಾತಂತ್ರ್ಯ ಹೋರಾಟ**, ನ್ಯಾಷನಲ್ ಬುಕ್ ಟ್ರಸ್ಟ್ ಆಫ್ ಇಂಡಿಯ, ಹೊಸ ದೆಹಲಿ, ೧೯೭೩.

೫೨. **ಷೇಕ್** ಅಲಿ ಬಿ. (ಪ್ರಧಾನ ಸಂಪಾದಕ), **ಕರ್ನಾಟಕ ಚರಿತ್ರೆ ಸಂಪುಟ ೧ ರಿಂದ ೬**, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೧೯೯೭.

೫೩. ಕೃಷ್ಣರಾವ್ ಎಂ.ವಿ., ಕೇಶವಭಟ್ಟ ಎಂ., **ಕರ್ನಾಟಕ ಇತಿಹಾಸ ದರ್ಶನ**, ಕರ್ನಾಟಕ ಸಹಕಾರೀ ಪ್ರಕಾಶನ ಮಂದಿರ, ಬೆಂಗಳೂರು, ೧೯೫೭.

೫೪. ತಂಬಂಡ ವಿಜಯ್ ಪೂಣಚ್ಚ (ಸಂ), **ಚರಿತ್ರೆ ವಿಶ್ವಕೋಶ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೧.

೫೫. ಮುಜಿಮ್‌ದಾರ್ ಪಿ.ಆರ್., ಭಾರದ್ವಾಜ್ ಆರ್.ಕೆ., ಚೌಧರಿ ಆರ್.ಕೆ., **ಭಾರತ ಸ್ವಾತಂತ್ರ್ಯ ಸಂಗ್ರಾಮ**, ಚೇತನ್ ಬುಕ್ ಹೌಸ್, ಬೆಂಗಳೂರು, ೧೯೯೭.

೫೬. ಮೋಹನ್‌ಕೃಷ್ಣ ರೈ. ಕೆ., **ವಸಾಹತುಪೂರ್ವ ಕರ್ನಾಟಕದ ನಗರ ಚರಿತ್ರೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೬.

೫೭. ಮೋಹನ್‌ಕೃಷ್ಣ ರೈ. ಕೆ., **ವಸಾಹತುಶಾಹಿ ಮತ್ತು ನಗರೀಕರಣ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೭.

೫೮. ಶಂಕರನಾರಾಯಣರಾವ್ ಎನ್.ಪಿ., **ಸ್ವಾತಂತ್ರ್ಯ ಗಂಗೆಯ ಸಾವಿರ ತೊರೆಗಳು**, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೧.

೫೯. ಸೂರ್ಯನಾಥ ಕಾಮತ್ (ಸಂ), **ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು**, ಸಂಪುಟ-೧, ಗೀತಾ ಬುಕ್ ಹೌಸ್, ಮೈಸೂರು, ೧೯೭೪.

೬೦. ಷೇಕ್ ಅಲಿ, ಬಿ., ರಂಗಸಾಮಯ್ಯ ಜಿ.ಆರ್., **ದಕ್ಷಿಣ ಭಾರತದ ಇತಿಹಾಸ**, ಚೇತನ್ ಬುಕ್ ಹೌಸ್, ಬೆಂಗಳೂರು, ೨೦೦೧.

೬೧. ಮೋಹನ್‌ಕೃಷ್ಣ ರೈ. ಕೆ., ಪ್ರಭುತ್ವ ಮತ್ತು ಜನತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೪.

೬೨. ಸಾವರ್ಕರ್ ವಿ.ಡಿ, ಬಾಬು ಕೃಷ್ಣಮೂರ್ತಿ (ಸಂಗ್ರಹಾನುವಾದ), **೧೮೫೭-ಭಾರತದ ಸ್ವಾತಂತ್ರ್ಯ ಸಂಗ್ರಾಮ**, ಶ್ರೀ ಸಮುದ್ಯತಾ ಸಾಹಿತ್ಯ ಪ್ರಕಾಶನ, ಬೆಂಗಳೂರು, ೨೦೦೭.

೬೩. ಶಾರದಾ ಪ್ರಸಾದ್ ಎನ್.ಎಸ್., ಭಾರತದ ಪ್ರೌಢ ಇತಿಹಾಸ, ಪ್ರಸಾರಾಂಗ, ವಿಶ್ವವಿದ್ಯಾಲಯ, ಮೈಸೂರು, ೨೦೦೩.

೬೪. ಲಕ್ಷ್ಮಣ್ ತೆಲಗಾವಿ, ಸ್ಥಳೀಯ ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೩.

೬೫. ವಸು, ಮೌಖಿಕ ಇತಿಹಾಸ, ಅಂಕಿತ ಪುಸ್ತಕ, ಬೆಂಗಳೂರು, ೨೦೦೪.

೬೬. ಸೂರ್ಯನಾಥ ಕಾಮತ್, ಕರ್ನಾಟಕದ ಸಂಕ್ಷಿಪ್ತ ಇತಿಹಾಸ, ಗೀತಾ ಬುಕ್ ಹೌಸ್ ಮೈಸೂರು, ೧೯೭೭.

೬೭. ವಿರುಪಾಕ್ಷಿ ಪೂಜಾರಹಳ್ಳಿ, ಬಳ್ಳಾರಿ ಜಿಲ್ಲೆಯ ಪಾಳೆಯಗಾರರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೪.

೬೮. ಪಂಚಮುಖಿ ಆರ್.ಎಸ್., ಕರ್ನಾಟಕ ಇತಿಹಾಸ, ಕರ್ನಾಟಕ ಇತಿಹಾಸ ಸಂಶೋಧನ ಮಂಡಳಿ, ಧಾರವಾಡ, ೧೯೬೮.

೬೯. ಗೋಪಾಲ್ ಬಾ.ರಾ., ಕರ್ನಾಟಕ ಇತಿಹಾಸ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೬.

೭೦. ಕೇಶವರಾವ್ ಟಿ.ಬಿ., ಇಜಾರಿ ವಸುಪಾಲಪ್ಪನವರು, ಇಂಡಿಯ ಬುಕ್ ಹೌಸ್, ಬೆಂಗಳೂರು, ೧೯೭೫.

೭೧. ವಿರುಪಾಕ್ಷಿ ಪೂಜಾರಹಳ್ಳಿ, ಬಳ್ಳಾರಿ ಜಿಲ್ಲೆಯಲ್ಲಿ ಕಲೆಕ್ಟರುಗಳ ಆಳ್ವಿಕೆ, ಎಂ.ಫಿಲ್. ಪ್ರೌಢ ಪ್ರಬಂಧ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೧೯೯೫.

೭೨. ರಾಮಸ್ವಾಮಿ ಎಸ್.ಆರ್., ಸ್ವಾತಂತ್ರ್ಯೋದಯದ ಮೈಲಿಗಲ್ಲುಗಳು, ರಾಷ್ಟ್ರೋತ್ಥಾನ ಸಾಹಿತ್ಯ, ರಾಷ್ಟ್ರೋತ್ಥಾನ ಮುದ್ರಣಾಲಯ, ಬೆಂಗಳೂರು, ೧೯೯೭.

೭೩. ಚಿನ್ನಸ್ವಾಮಿ ಸೋಸಲೆ ಎಸ್., ಸಾಮ್ರಾಜ್ಯ ಮತ್ತು ಸಂಸ್ಥಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೪.

೭೪. ಮಹಾಲಿಂಗ ಯಾಳಗಿ (ಸಂ), ಮುಂಡರಗಿ ನಾಡ ಸ್ವಾತಂತ್ರ್ಯ ಸಂಗ್ರಾಮ, ಮುಂಡರಗಿ ತಾಲೂಕು ಸ್ವಾತಂತ್ರ್ಯ ಯೋಧರ ಸಂಘ, ಮುಂಡರಗಿ, ೧೯೯೯.

೭೫. ಗೋವಿಂದರಾಜು ಸಿ.ಆರ್., (ಸಂ), ಇತಿಹಾಸ-೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೫.

೭೬. ಶೇಷಾದ್ರಿ ಬಿ., ಚಂದ್ರಶೇಖರ ಟಿ.ಆರ್., ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೧೯೯೮.

೭೭. ತಿರುಮಲ ತಾತಾಚಾರ್ಯ ಶರ್ಮ, ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ, ಮೈಸೂರು ಸಂಸ್ಥಾನದ ಸರಕಾರ, ಬೆಂಗಳೂರು, ೧೯೫೭.

೭೮. ಕೊರಟಗೆರೆ ಶ್ರೀನಿವಾಸರಾವ್, ಮುಂಡರಗಿ ಗಂಡುಗಲಿ, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು, ೧೯೭೮.

೭೯. ವೆಂಕಟರತ್ನಂ ಎ.ವಿ., ಪದ್ಮ ಎಂ.ಬಿ., ಇತಿಹಾಸ ಸಂಶೋಧನಾ ಮಾರ್ಗ, ಬೆಂಗಳೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಕಂಪನಿ ಲಿಮಿಟೆಡ್, ಬೆಂಗಳೂರು, ೧೯೯೯.

೮೦. ಭಗವತಿ ಎಸ್.ಎಸ್, ಮೇಲನಮನಿ ಹೆಚ್.ಎಸ್., ಕನ್ನಡ ಶಾಸನಗಳ ಅಧ್ಯಯನ, ವಿದ್ಯಾನಿಧಿ ಪ್ರಕಾಶನ, ಗದಗ, ೨೦೦೪.

೮೧. ಶಿರೂರ ಬಿ.ವ್ಹಿ. ಸಂಶೋಧನ ಸ್ವರೂಪ, ಅನ್ನಪೂರ್ಣ ಪ್ರಕಾಶನ, ಹುಬ್ಬಳ್ಳಿ, ೧೯೯೨.

೮೨. ಶಿವಚಿತ್ತಪ್ಪ ಕೆ., ಮತ್ತಿತರರು, ಸಂಶೋಧನಾ ವಿಧಾನ ಮತ್ತು ದತ್ತಾಂಶಗಳ ವಿಶ್ಲೇಷಣೆ, ರಾಜಗೋಪಾಲ್ ಪಬ್ಲಿಕೇಷನ್ಸ್, ಮೈಸೂರು, ೨೦೦೫.

೨. ಪತ್ರಾಗಾರ ಇಲಾಖೆಯ ಕಡತಗಳು

೧. ದಿ ನ್ಯಾಷನಲ್ ಆರ್‌ಚೀವ್ಸ್, ದೆಹಲಿ, ನಂ. ೧೪೮೮ ಆಫ್ ೧೮೫೮.

೨. ದಿ ನ್ಯಾಶನಲ್ ಆರ್‌ಚೀವ್ಸ್, ಬಾಂಬೆ, ನಂ. ೮೮೨ ಆಫ್ ೧೮೫೮.

೩. ರೆಕಾರ್ಡ್ಸ್ ಫ್ರಂ ದಿ ಕಲೆಕ್ಟರ್ಸ್ ಆಫೀಸ್, ಧಾರವಾಡ.

೪. ಬಳ್ಳಾರಿ ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟ್ ಆಫೀಸ್, ಬಳ್ಳಾರಿ, ಸಿರಿಯಲ್ ನಂ. ೮೮೨-ಎ, ೨೮ ಜುಲೈ, ೧೮೫೮.

೫. ಬಳ್ಳಾರಿ ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟ್ ಆಫೀಸ್, ಬಳ್ಳಾರಿ, ಜಿ.ಐ. ನಂ. ೬೩೮-ಎ, ನಂ. ೯೦, ಜೂನ್ ೮, ೧೮೫೮.

## ೨. ಸಂದರ್ಶನಗಳು

೧. ವೆಂಕಟರಾವ್ ಲಕ್ಷ್ಮಣರಾವ್ ನಾಡಗೌಡ, ಮುಂಡರಗಿ - ಭೀಮರಾಯರ ನಾಲ್ಕನೇ ವಂಶಸ್ಥರು, ಸ್ವಾತಂತ್ರ್ಯ ಹೋರಾಟಗಾರರು, ದಿನಾಂಕ ૩೦.೩.೨೦೦೮, ೧೦.೪.೨೦೦೮, ಮುಂಡರಗಿ.

೨. ಮಹಾಲಿಂಗ ಯಾಳಗಿ, ನಿವೃತ್ತ ಕನ್ನಡ ಉಪನ್ಯಾಸಕರು, ಲೇಖಕರು. ದಿನಾಂಕ ૩೦.೩.೨೦೦೮, ೫.೫.೨೦೦೮, ಮುಂಡರಗಿ.

೩. ಸ್ವಾತಂತ್ರ್ಯ ಹೋರಾಟಗಾರರ ಸಂಘ, ಮುಂಡರಗಿ, ದಿನಾಂಕ ૩೦.೩.೨೦೦೮, ಮುಂಡರಗಿ.

೪. ಕೃಷ್ಣರಾವ್, ಸ್ವಾತಂತ್ರ್ಯ ಹೋರಾಟಗಾರರು, ದಿನಾಂಕ ೧೦.೪.೨೦೦೮, ಬೆಣ್ಣಿಹಳ್ಳಿ.

೫. ಡಾ. ಎಂ.ಎಂ. ಶೆಟ್ಟರ್, ಹೈಸ್ಕೂಲ್ ಶಿಕ್ಷಕರು, ಸಂಶೋಧಕರು, ದಿನಾಂಕ ೨೯.೩.೨೦೦೮, ನಾಗತಿ ಬಸಾಪುರ.

೬. ಹುಸೇನ್ ಬಾಷಾ ವಡ್ಡಟ್ಟಿ, ಪತ್ರಕರ್ತರು, ಮುಂಡರಗಿ.

ಪತ್ರಿಕೆಗಳು

೧. ದಿ ಹಿಂದು

೨. ಡೆಕ್ಕನ್ ಹೆರಾಲ್ಡ್

೩. ಸಂಯುಕ್ತ ಕರ್ನಾಟಕ

೪. ಜನಪದ

೫. ಹೊಸತು

೬. ಸಂವಾದ

• • •

## ೩. ಛಾಯಾಚಿತ್ರಗಳು



ಮುಂಡರಗಿ ಭೀಮರಾಯರು



ಮುಂಡರಗಿ ಕೋಟೆ



ಭೀಮರಾಯರು ಸ್ವಾಧೀನ ಪಡಿಸಿಕೊಂಡ ಕೊಪ್ಪಳ ಕೋಟೆ



ಮುಂಡರಗಿ ಭೀಮರಾಯರು ಹುತಾತ್ಮರಾದ ಕೊಪ್ಪಳ ಕೋಟೆಯ ದ್ವಾರಬಾಗಿಲು




ಮುಂಡರಗಿಯಲ್ಲಿನ ಭೀಮರಾಯರ ವೃತ್ತ



ಮುಂಡರಗಿ ಭೀಮರಾಯರು ಹುತಾತ್ಮರಾದ ನೂರನೇ ವರ್ಷದ ಸ್ಮರಣಾರ್ಥ
ಕೊಪ್ಪಳದ ಡಿ.ಸಿ. ವೃತ್ತದಲ್ಲಿ ನಿರ್ಮಿಸಿರುವ ಸ್ತಂಭ

